ಮನೋಹರ ಗ್ರಂಥಮಾಲೆಯ ೧೪೮ನೆಯ ಕುಸುಮ

# ನಾನಿಯ ಕಾದಂಬರಿ

(ಕಾದಂಬರಿಯ ಕಾದಂಬರಿ)

ರೆದವರು :

ಾಳಕೃಷ್ಣ

೧೯೫೭

ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ

## ನನ್ನ ಮಾತು

ಈ 'ನಾನಿಯ ಕಾದಂಬರಿ'ಗೆ ಗ್ರಂಥಮಾಲೆಯ ಇಪ್ಪತ್ತುಮೂರನೆಯ ...ಮುಗಿಯಿತು. ಇಪ್ಪತ್ತನಾಲ್ಕನೆಯ ವರ್ಷವು ಕುತೂಹಲಕಾರಿ ...ರಿ 'ಖೊ!'ದಿಂದ ಪ್ರಾರಂಭವಾಗುತ್ತದೆ. ಒಟ್ಟು ಈ ವರ್ಷದಲ್ಲಿ ...ಂಗವ್ವ ಮತ್ತು ಗಂಗಾಮಾಯಿ (೨) ಆ ಮನಿ (೩) ದೀಪಹತ್ತಿತು ...ನಿಯ ಕಾದಂಬರಿ ಹೀಗೆ ಮೂರು ಕಾದಂಬರಿ, ಒಂದು ನಾಟಕ ಪ್ರಕಟ

...ನ... ...ಾದಂಬರಿ' ತಂತ್ರದಲ್ಲಿ ಹೊಸದಾಗಿದೆ. ಗ್ರಂಥಕರ್ತನೆ ತ್ರಯಸ್ಥ ...ಕನಾಗಿ ತನ್ನ ಕಾದಂಬರಿಯನ್ನು ವಿಮರ್ಶಿಸುವ ಪಾತ್ರ ವಹಿಸುತ್ತಾನೆ. ಈ ಕಾದಂಬರಿಯನ್ನು ಓದುಗರು ಎರಡು ವಿಧವಾಗಿ ಓದಿ ತಮ್ಮ ...ರ ಮೇಲಾಗುವ ಪರಿಣಾಮವನ್ನು ನೋಡಿಕೊಳ್ಳಬಹುದು. ಪರಿಣಾಮ ...ತ್ತದೆಂಬುದನ್ನು ನಾನಿಲ್ಲಿ ಹೇಳಬಯಸುವದಿಲ್ಲ. ಓದುಗರೇ ಆಸ್ಥೆ ವಹಿಸಿ ...ತಿಳಿಸಿದರೆ ಕೃತಿವಿಮರ್ಶೆಗೆ ಅದೇ ಹೊಸ ದೃಷ್ಟಿದಾನ ಮಾಡುತ್ತದೆಂದು ...ಬಗೆದಿದ್ದೇನೆ. ಮೊದಲನೆಯದಾಗಿ, 'ಕರುಣಾ' ಕಾದಂಬರಿಯನ್ನು ನಡು ...ಬರುವ ನಾನಿಯ ಪ್ರಕರಣಗಳನ್ನು ಬಿಟ್ಟೇ ಓದಬೇಕು. ಅನಂತರ ... ಪ್ರಕರಣಗಳ ಸಹಿತ ಮತ್ತೊಮ್ಮೆ ಓದಬೇಕು. ಕೊನೆಗೆ ಬರುವ ...ಮಾಯಿಯ ಪತ್ರ'ದಲ್ಲಿ ಕಾದಂಬರಿಯ ಬಗ್ಗೆ ಅವನು ಮಂಡಿಸಿದ ವಿಧಾನ ... ಅಭಿಪ್ರಾಯ, ವಿಮರ್ಶೆ – ನಿಮಗೂ ಒಪ್ಪಿಗೆಯಾದುವೇ ಹೇಗೆ? ...ಕೊಳ್ಳಬೇಕು. ನಾನಿ ನಡುನಡುವೆ ಬರುವದರಿಂದ ನಿಮಗೆ ಏನೆನಿಸಿತು? ...

ಈ ...ದಂಬರಿಯನ್ನು ಗ್ರಂಥಮಾಲೆಯಲ್ಲಿ ಪ್ರಕಟಿಸಲು ಅನುಮತಿ ...ಶ್ರೀ. ಬಾಳಕೃಷ್ಣ ಅವರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

...ಗ್ರಂಥಮಾಲೆ ತನ್ನ ಇಪ್ಪತ್ತೈದನೆಯ ವರ್ಷಕ್ಕಾಗಿ ಕೈಕೊಂಡ "ನಡೆದು ...ದಾರಿ" ಸಾಹಿತ್ಯ ಸಂಪುಟದ ಸಂಪಾದನ ಕಾರ್ಯದಲ್ಲಿ ನನ್ನೊಡನೆ ...ಎಲ್ಲ ಜವಾಬ್ದಾರಿಯ ಕೆಲಸ ಮಾಡಲು ಒಪ್ಪಿಕೊಂಡ ಶ್ರೀ. ಕೀರ್ತಿನಾಥ ...ಕೋಟಿಯವರಿಗೆ ನಾನು ಹೃತ್ಪೂರ್ವಕವಾಗಿ ಅಭಿವಂದಿಸುತ್ತೇನೆ. ಗ್ರಂಥ...ಯಲ್ಲಿ ಪ್ರಕಟವಾಗುವ ಗ್ರಂಥಗಳ ಹಸ್ತಪ್ರತಿ ಪರೀಕ್ಷಿಸಿ ನೋಡುವುದ

ರಲ್ಲಿಯೂ ನನಗೆ ಅವರು ಈಗ ಸಕ್ರಿಯ ಸಹಾಯ ಸಲ್ಲಿಸುತ್ತಿದ್ದಾರೆ; ಮುಂದೆಯೂ ಸಲ್ಲಿಸುವುದಾಗಿ ವಚನ ಕೊಟ್ಟಿದ್ದಾರೆ. ಗ್ರಂಥಮಾಲೆ ತನ್ನ ಸಾಂತಃಕರಣ ಕೃತಜ್ಞತೆಯನ್ನು ಮುಚ್ಚಿದ ಕೈಯಿಂದಲೇ ಅವರಿಗೆ ಅರ್ಪಿಸುತ್ತದೆ. ದೇವಭಾವದಿಂದ ಸ್ವೀಕರಿಸಲಣಿಯಾಗಿದ್ದಾರೆ.

ಹೊಸದಾಗಿ ಗ್ರಂಥಮಾಲೆಗೆ ಆಜೀವಚಂದಾದಾರರಾಗಲು ಒಪ್ಪಿದ ಶ್ರೀ. **ಡಿ. ವ್ಹಿ. ಚಿತ್ತಾಳ,** ಬಿ. ಎ., ಎಲೆಲ್. ಬಿ. ಹುಬ್ಬಳ್ಳಿ; ಶ್ರೀ. **ಪದ್ಮನಾಭ ಕೆ. ಉಡುಪಿ** (ಪಣಿಯಾಡಿ) ಸೊಲ್ಲಾಪುರ; ಶ್ರೀ. **ಕೆ. ಆರ್. ಮಳಗೀಕರ,** ಅಥಣಿ ಈ ಮಹನೀಯರಿಗೆ ನನ್ನ ಅನಂತ ವಂದನೆಗಳು.

**—ಸಂಪಾದಕ**

ಇಪ್ಪತ್ತು ನಾಲ್ಕನೆಯ ವರುಷ ಪ್ರಾರಂಭ
ಮೊದಲನೆಯ ಕುಸುಮ

# ಖೊ!

**(ಸಾಹಿತ್ಯವಿನೋದಿಗಳ ಆಟದಲ್ಲಿ ಹುಟ್ಟಿ ಬಂದ ಒಂದು ಕಾದಂಬರಿ)**

ಇದರಲ್ಲಿ ಹೆಸರು ಪಡೆದ ಸಾಹಿತಿಗಳಾದ ಸರ್ವಶ್ರೀ. ವ್ಹಿ. ಎಂ. ಇನಾಂದಾರ, ಎಂ. ಕೆ. ವರಗಿರಿ, ಎನ್. ಕೆ. ಕುಲಕರ್ಣಿ, ಎಸ್. ಆರ್. ಮೊಕಾಶಿ, ಕೀರ್ತಿನಾಥ ಕುರ್ತಕೋಟಿ, ಶಾಂತಿನಾಥ ದೇಸಾಯಿ, ಎ. ಕೆ. ರಾಮಾನುಜನ್, ದ. ಬಾ. ಕುಲಕರ್ಣಿ ಮೊದಲಾದವರು ಭಾಗವಹಿಸಿದ್ದಾರೆ. ವಿವಿಧ ಲೇಖಕರ ವಿವಿಧ ಶೈಲಿಗಳನ್ನು ಅಭ್ಯಾಸಬಲದಿಂದ ಗುರುತಿಸಿ ಆನಂದ ಪಡೆಯಲು ಓದುಗರಿಗೆ ಇದೊಂದು ಬೌದ್ಧಿಕ ಪರೀಕ್ಷೆಯಂತಿದೆ. ವಿವಿಧ ಲೇಖಕರು ಒಂದೇ ಕಾದಂಬರಿಯನ್ನು ಬೆಳೆಯಿಸುವ ರೀತಿಯೂ ರಮ್ಯವಾಗಿ ಕುತೂಹಲಕಾರಿಯಾಗಿದೆ.

# ಒಂದೆರಡು ಮಾತುಗಳು

ಈ ಕಾದಂಬರಿಯಲ್ಲಿ ಜ್ವಲಂತ ಸಾಮಾಜಿಕಸಮಸ್ಯೆ, ಸಮಾಜದ ಕ್ರೂರ ದಬ್ಬಾಳಿಕೆ, ಹೆಣ್ಣಿನ ಕರುಣಾಜನಕ, ಹೃದಯವಿದ್ರಾವಕ ಜೀವನ, ಲೈಂಗಿಕ ಸಮಸ್ಯೆಗಳ ಮೇಲೆ 'ಕ್ಷ'ಕಿರಣ, ಇಲ್ಲವೆ ಹಿಂದೂಸಂಸ್ಕೃತಿ, ಸನಾತನ ಧರ್ಮದ ಮೇಲ್ಮೆ, ನವನಾಗರಿಕತೆಯ ಜೀವನದಲ್ಲಿಯ ಅನೀತಿ – ಇವುಗಳಲ್ಲಿ ಯಾವ ಒಂದು ಸಮಸ್ಯೆಯೂ ಇಲ್ಲವೆಂದು ವಿಷಾದದಿಂದ ಒಪ್ಪಿಕೊಳ್ಳುತ್ತೇನೆ.

ನಾನು 'ನಾನಿ'ಯಾಗಿ ಬರೆದ ಕಾದಂಬರಿ (ಕರುಣಾ), ಜೀವನದಲ್ಲಿ ನಡೆಯ ಬಹುದಾದ ತೀರ ಸಾಮಾನ್ಯ ಸಂಗತಿಯು, ಅಂತರಂಗದ ಭಾವನಾವಲಯವನ್ನು ದಾಟಿ ಹೊರಗಿನ ಪ್ರಪಂಚವನ್ನು ನೋಡದ, ಸ್ವ-ಭಾವಗಳೊಂದಿಗೆ ಸರಸವಾಡುವ, ಸ್ವಾನುಭವನಿಷ್ಠನಾದ ಅನನುಭವಿ ಲೇಖಕನ ದೃಷ್ಟಿಯಲ್ಲಿ ಯಾವ ಸಮಸ್ಯೆ ಯಾಗಿ ಪರಿಣಮಿಸುತ್ತದೆ, ಅದಕ್ಕೆ ಆತ ಯಾವ ಅರ್ಥ, ವಿಶ್ಲೇಷಣೆಗಳನ್ನು ಕಲ್ಪಿಸುತ್ತಾನೆ, ವಾಸ್ತವಿಕ ರೀತಿಯಲ್ಲಿ ಚಿತ್ರಿಸಲು ಹೇಗೆ ಹೆಣಗುತ್ತಾನೆಂಬು ದನ್ನು ನಿರೂಪಿಸಲು ಯತ್ನಿಸಿದ್ದೇನೆ. ಕತೆ ಅಸ್ವಾಭಾವಿಕವಲ್ಲದಿದ್ದರೂ ಭಾಷೆಯ ಬೆಡಗು, ವರ್ಣನೆಯ ವೈಖರಿ, ಭಾವಪ್ರಧಾನತೆಗಳ ಮೋಹಕ್ಕೆ ಸಿಲುಕಿ ಅದು ವಾಸ್ತವನಿರೂಪಣೆಯಿಂದ ಹೇಗೆ ದೂರ ಸರಿಯುತ್ತದೆಂಬುದನ್ನು ತೋರುವದ ಕ್ಕಾಗಿ ನಡುನಡುವೆ ನಾನಿಯ ಕತೆ ಬರುತ್ತದೆ. ಕರುಣಳ ಕತೆಯನ್ನು 'ನಾನಿ' ಯಾಗಿ ಬರೆದರೆ, 'ನಾನಿ'ಯ ಕತೆಯನ್ನು 'ನಾನು' ಆಗಿ ಬರೆದಿದ್ದೇನೆ. ಕರುಣಳ ಕತೆಯಲ್ಲಿ ಪ್ರತಿಯೊಂದು ಸನ್ನಿವೇಶವೂ ಅತಿರಂಜಿತ, ಪ್ರತಿಯೊಂದು ಮಾತೂ ಭಾವೋದ್ವಿಗ್ನ.

ನಾನಿ, ಗುರೂಮಾಮಾ, ರಾಮಣ್ಣ, ಸರದೇಸಾಯಿ, ಕಕ್ಕಿ, ಪದ್ಮಾವತಿ ಇವರೆಲ್ಲ ನಾನಿಯ ಬದುಕಿನ ಪರಿಸರದಲ್ಲಿದ್ದವರು. ಕಾದಂಬರಿ ಬರೆಯಬೇಕೆಂಬ ಹಂಬಲ, ಬರೆಯುವಾಗ ಆಗಾಗ ತಲೆದೋರುವ ನಿರಾಸೆ, ಬರೆಯುತ್ತಿರುವ ಕಾದಂಬರಿಯ ತೊಡಕುಗಳನ್ನು ಬಿಡಿಸಲು ತನ್ನ ಸುತ್ತಲಿನವರನ್ನು ನಾನಿ ನೋಡುವ ವಿಲಕ್ಷಣ ದೃಷ್ಟಿ, ಕೊನೆಗೆ ಬರುವ ಸರದೇಸಾಯಿಯ ಪತ್ರ, ಅದ ರೊಳಗಿನ ವಿಮರ್ಶೆ ಈ ಎಲ್ಲ ಸ್ವಾಭಾವಿಕವಾದ ವಾಸ್ತವವಾದ ಹಿನ್ನೆಲೆಯಲ್ಲಿ ಕರುಣಳ ಕತೆಯನ್ನು ನೋಡಿದಾಗ ಸುರಮ್ಯ ಕಲ್ಪನಾಲೋಕದ ಸೃಷ್ಟಿ ಆಕರ್ಷಕ, ರಂಜಕವಿದ್ದರೂ ಸ್ವಾಭಾವಿಕ ನಿರೂಪಣೆಯ ಮಾರ್ಗದಿಂದ ದೂರ ಸರಿದುದರ ಕಲ್ಪನೆ ಬರಬಹುದು. ಇದನ್ನು ಬಿಂಬಿಸುವದೆ ನನ್ನ ಉದ್ದೇಶವಾಗಿದೆ.

ಕಾದಂಬರಿಯು ಈ ರೂಪವನ್ನು ತಾಳಿ ನಿಲ್ಲುವಂತೆ ಆದುದಕ್ಕೆ ಸ್ನೇಹಿತರಾದ ಕೀರ್ತಿನಾಥ ಕುರ್ತಕೋಟಿ ಮತ್ತು ಸಂಪಾದಕರಾದ ಜಿ. ಬಿ. ಜೋಶಿಯವರೇ ಕಾರಣರು. ಅವರಿಗೆ ನಾನು ಉಪಕೃತನಾಗಿದ್ದೇನೆ. ಅಲ್ಲದೆ ತಮ್ಮ ಗ್ರಂಥಮಾಲೆಯಲ್ಲಿ ಈ ಕಾದಂಬರಿಯನ್ನು ಸ್ವೀಕರಿಸಿ ಪ್ರಕಟಿಸಲು ಒಪ್ಪಿದ ಶ್ರೀ. ಜಿ. ಬಿ. ಜೋಶಿಯವರಿಗೆ ನಾನು ಇನ್ನೂ ಋಣಿಯಾಗಿದ್ದೇನೆ.

**—ಲೇಖಕ**

## ೧ : ನಾನಿ

ನಾನಿಗೆ ಈಗ ಇಪ್ಪತ್ತೈದು ವರ್ಷ. ಬಿ. ಏ. ಮುಗಿಸಿ ನೌಕರಿಗಾಗಿ ದಾರಿಕಾಯುತ್ತಿದ್ದಾನೆ. ಇನ್ನೂ ನೌಕರಿ ಸಿಕ್ಕಿಲ್ಲ. ಆದರೆ ಅದರಿಂದೇನೂ ಅವನಿಗೆ ತೊಂದರೆಯಾಗಿಲ್ಲ. ಮನೆಗೆ ತಂದೆಯೇ ಯಜಮಾನ. ಅವರ ಗಳಿಕೆಯ ಮಾರ್ಗವಾವುದೋ ನಾನಿಗೆ ಗೊತ್ತಾಗಿಲ್ಲ. ಅಣ್ಣನಿಗೆ ನೌಕರಿ ಸಿಕ್ಕಿದೆ. ತಾಯಿಯಿಲ್ಲದ ಈ ಇಬ್ಬರು ಮಕ್ಕಳನ್ನು ತಂದೆ, ದರ್ಪದಿಂದ ಲಾದರೂ, ಕೊರತೆಯಾಗದಂತೆ ನೋಡಿಕೊಂಡಿದ್ದರು. ನಾನಿ ಮುಂದೆ ಕಲಿತರೆ, ಅವರದೇನೂ ಅಭ್ಯಂತರವಿಲ್ಲ. ಆದರೆ ನಾನಿಗೇ ಮನಸ್ಸಿಲ್ಲ. ಬೇಗ ಎಲ್ಲಿಯಾದರೂ ಕೆಲಸ ದೊರಕಿಸಿ, ಆರಾಮಾಗಿರಬೇಕೆಂಬ ಹಂಬಲ ಅವನಿಗೆ. ಮನೆಯಲ್ಲಿ ತಂದೆಯಷ್ಟೇ ಆದರಣೀಯ ವ್ಯಕ್ತಿ ಇನ್ನೊಬ್ಬ ರೆಂದರೆ ಗುರೂಮಾಮಾ. ಮಧ್ಯವಯಸ್ಸಿನಲ್ಲಿಯೇ ಹೆಂಡತಿಯನ್ನು ಕಳೆದು ಕೊಂಡು, ತನ್ನ ಸಂಸಾರದ ತೊಡಕನ್ನೆಲ್ಲ ಬಗೆಹರಿಸಿಕೊಂಡ ಗುರೂ ಮಾಮಾ, ತಾಯಿ ಸತ್ತ ಈ ಹುಡುಗರಿಗೆ ತಾಯಿಗಿಂತ ಹೆಚ್ಚಾಗಿದ್ದ. ಯಾವ ಸಮಸ್ಯೆ ಬಂದಿದ್ದರೂ, ಎಂಥ ನಿರಾಶೆ ಕವಿದಿದ್ದರೂ, ಗುರೂ ಮಾಮಾ ಬಂದರೆ ಅದೆಲ್ಲ ಇಲ್ಲದಂತಾಗುವದೆಂಬ ನಂಬಿಕೆ ನಾನಿಗೆ ಇತ್ತು. ಗುರೂಮಾಮಾನ ಆಧಾರದಿಂದಲೇ ನಾನಿ ಇಲ್ಲಿಯವರೆಗೆ ಕಲಿಯಲು ಸಾಧ್ಯವಾಯಿತು. ತನಗೆ ಯಾವ ಸಂಕಟ ಬಂದರೂ ಅದನ್ನು ಗುರೂ ಮಾಮಾನಿಗೆ ನಿವೇದಿಸದೆ ಅವನಿಗೆ ಸಮಾಧಾನವಾಗುತ್ತಿರಲಿಲ್ಲ. ನಾನಿಯ ಬಾಳು ಗುರೂಮಾಮಾನಿಗೆ ತೆರೆದ ಪುಸ್ತಕವಾಗಿತ್ತು.

ಆದರೆ ಗುರೂಮಾಮಾನಿಗೂ ತಿಳಿಯದ ಒಂದು ರಹಸ್ಯವನ್ನು ನಾನಿ ಕಾಯ್ದುಕೊಂಡು ಬಂದಿದ್ದ. ನಾನಿ ಲೇಖಕ. ಆದರೆ ಮುಗ್ಧಸ್ವಭಾವದ ಮೂಲಕ, ಯಾರಿಗೂ ಗೊತ್ತಿಲ್ಲದಂತೆ ಕತೆ ಕವಿತೆಗಳನ್ನು ಬರೆದು ಓದಿ ತನಗೆ ತಾನೇ ಸುಖಪಡುತ್ತಿದ್ದ. ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗಲೇ ಈ ಚಟ ಅವನಿಗೆ ಅಂಟಿಕೊಂಡಿತ್ತು, ಅಲ್ಲ ಅವನು ಈ ಚಟಕ್ಕೆ ಅಂಟಿ ಕೊಂಡಿದ್ದ.ಬರೆದುದೆಲ್ಲವನ್ನೂ ಜೋಡಿಸಿ ತನ್ನ ಕಪಾಟಿನಲ್ಲಿ ಜೋಕೆಯಿಂದ ಕಾಯ್ದಿರಿಸಿದ್ದ. ಆದರೆ ಕಾಲೇಜಿನಲ್ಲಿ ಕಲಿಯುವಾಗ, ಅನಪೇಕ್ಷಿತವಾಗಿ

ಈ ರಹಸ್ಯ ಹೊರಬಿತ್ತು. ನಾನಿಯ ರೂಮ್‌ಮೇಟ್ ಸರದೇಸಾಯಿ, ಇನ್ನೊಬರ ಗುಟ್ಟು ಹೊರಗೆಡಹುವದರಲ್ಲಿ ನಿಸ್ಸೀಮ. ಕಾಲೇಜಿನ ನೋಟೀಸ ಬೋರ್ಡಿನ ಪತ್ರ್ರಗಳ ಮೇಲಿನ ವಿಳಾಸಗಳ ಮೇಲಿಂದಲೇ ವಿದ್ಯಾರ್ಥಿಗಳ ಪ್ರಣಯಕತೆಗಳನ್ನು ಪತ್ತೆಹಚ್ಚುತ್ತಿದ್ದ. ಅಂದಮೇಲೆ ತನ್ನ ಕೋಣೆಯಲ್ಲಿಯೇ ಇರುವ ನಾನಿಯ ರಹಸ್ಯ ಅವನಿಗೆ ತಿಳಿಯದಿದ್ದೀತೇ? ನಾನಿಯ ಒಂದು ಕವಿತೆ ಯಾವ ಮಾಯದಿಂದಲೋ ಅವನ ಕೈಗೆ ಬಂದಿತ್ತು. ಅದಕ್ಕೆ ಯಾವುದೋ ಲೋಕಪ್ರಿಯ ಸಿನೆಮಾಗೀತದ ಧಾಟಿಯನ್ನು ಹಚ್ಚಿ ಒಂದು ತಿಂಗಳವರೆಗೆ, ನಾನಿಯ ಎದುರು ಅದನ್ನೇ ಹಾಡಿ, ಕಾಲೇಜಿನ ತುಂಬ ಸುದ್ದಿಮಾಡಿದ್ದ. ಕಾಲೇಜ ಗ್ಯಾದರಿಂಗಿನಲ್ಲಿ ಸರದೇಸಾಯಿ ಆ ಕವಿತೆಯನ್ನು ಮಿಸ್ ಕಮಲಾ ನಾಡಕರ್ಣಿಯ ಕಡೆಯಿಂದ ಹಾಡಿಸಿದಾಗಲಂತೂ, ನಾನಿ ನಾಚಿಕೆಯಿಂದ ಕೆಂಪೇರಿದ್ದ.

ಸರದೇಸಾಯಿಯ ಈ ಚಾಣಕ್ಯತಂತ್ರದೆದುರು ನಾನಿ ಅಸಹಾಯನಾಗಿದ್ದ. ನಾನಿಯ ಇನ್ನೊಂದು ರಹಸ್ಯವೂ ಅವನಿಗೆ ಗೊತ್ತಾಗಿತ್ತು. ನಾನಿಗೆ ತನ್ನ ಸ್ವಭಾವ ಗಂಭೀರವಾದುದೆಂದು ಮನವರಿಕೆಯಾಗಿತ್ತು. ಅದಕ್ಕಾಗಿ ಅವನು ದಿನಾಲು ರಾತ್ರಿ ದಿನಚರಿಯನ್ನು ಬರೆಯುತ್ತಿದ್ದ. ಅದರಲ್ಲಿ ತನ್ನ ಸಾಮಾನ್ಯ ಭಾವನೆಗಳಿಗೂ ಅಸಾಮಾನ್ಯತೆಯನ್ನು ತಂದುಕೊಟ್ಟು ಅವುಗಳನ್ನು ಬರೆದಿಡುತ್ತಿದ್ದ. ಕಾಲೇಜ ವಿದ್ಯಾರ್ಥಿಯ ಜೀವನದಲ್ಲಿ ಹೃದಯವಿದ್ರಾವಕವಾದ ಸನ್ನಿವೇಶ ಏನು ನಡೆಯಬೇಕು? ನಾನಿಗೆ ಅದೇ ತೊಡಕು. ಕಾದಂಬರಿಗಳಲ್ಲಿ ನಡೆಯುವ ಘಟನೆಗಳು ತನ್ನ ಜೀವನದಲ್ಲಿ ಏಕೆ ನಡೆಯಬಾರದು ಎಂದು ಅವನ ಸಂಕಟ. ಅದಕ್ಕಾಗಿ ದಿನನಿತ್ಯದ ಸಾಮಾನ್ಯ ಸಂಗತಿಗಳನ್ನೇ, ಒಂದು ವಿಲಕ್ಷಣ ಅರ್ಥಪೂರ್ಣ ದೃಷ್ಟಿಯಿಂದ ನೋಡಿ ಅವುಗಳನ್ನು ಒಂದು ಕಾದಂಬರಿಯಲ್ಲಿಯ ಘಟನೆಗಳೆಂಬಂತೆ ತನ್ನ ನೋಟಬುಕ್ಕಿನಲ್ಲಿ ಬರೆದಿಡುತ್ತಿದ್ದ.

ಒಮ್ಮೆ ಹೀಗಾಯಿತು: ನಾನಿ ಸಂಜೆಗೆ ಪೇಟೆಗೆ ಹೋಗಿದ್ದ. ತಿರುಗಿ ಬರುವಾಗ ದಾರಿಯಲ್ಲಿಯೇ ಮಳೆ ಬಂತು. ನಾನಿ ಕೊಡೆಯನ್ನು ಬಿಚ್ಚಿಕೊಂಡು ಮುಂದೆ ನಡೆದ. ಆದರೆ ಅವನ ಜೊತೆಗೇ ಅವನ ಕ್ಲಾಸ್‌ಮೇಟ್ ಮಿಸ್. ಲೀಲಾ ದೇಸಾಯಿ (ಅವಳ ಈ ಹೆಸರೂ ಕಾಲೇಜಿನಲ್ಲಿ ಚೇಷ್ಟೆಯ ವಿಷಯವಾಗಿತ್ತು) ನಡೆದು ಬರುತ್ತಿದ್ದಳು. ಸ್ತ್ರೀದಾಕ್ಷಿಣ್ಯ ಬಂದು ನಾನಿ ಅವಳನ್ನು ಕೊಡೆಯ ಆಸರೆಯಲ್ಲಿ ಬರಲು ಕರೆದ.

ಅವಳು ಏನೂ ಅನುಮಾನಿಸದೆ ಒಪ್ಪಿಕೊಂಡು, ಇವನ ಔತಣವನ್ನು ಸ್ವೀಕರಿಸಿದಳು. ಈ ಸಂಗತಿ ಒಂದು ಸಣ್ಣಕತೆಯ ಸ್ವರೂಪವನ್ನು ಪಡೆದು ನಾನಿಯ ದಿನಚರಿಯಲ್ಲಿ ಮೂಡಿತು. ಆಕಸ್ಮಿಕವಾಗಿ ಬಂದ ಮಳೆಯಲ್ಲಿ ದಿಕ್ಕುಗಾಣದಿದ್ದಾಗ, ಅನಿರೀಕ್ಷಿತವಾಗಿ ಕೊಡೆಯ ಆಸರೆಯನ್ನು ಅವಳು ಪಡೆದಿದ್ದಳು. ಅದು ನಾನಿಯ ದೃಷ್ಟಿಯಿಂದ ಸಾಂಕೇತಿಕವಾಗಿತ್ತು. ಆ ಹೊತ್ತಿನಲ್ಲಿಯೇ ಅವಳು ತನ್ನ ದಾರುಣವಾದ ಜೀವನ ಕತೆಯನ್ನು ತನಗೆ ಹೇಳಿದಂತೆಯೂ, ತಾನು ಅಭಯ ನೀಡಿದಂತೆಯೂ, ನಾನಿ ಆ ಸಂಗತಿಗೆ ಬಣ್ಣ ಕೊಟ್ಟಿದ್ದ.

ಮರುದಿನ ಸಂಜೆಗೆ ಇಬ್ಬರೂ ತಿರುಗಾಡಲು ಹೊರಟಾಗ ಸರದೇಸಾಯಿ ಸಹಜವಾಗಿ ಮಾತು ತೆಗೆದ:

"ಅಲ್ಲೋ ನಾನಿ, ನಿನ್ನೆ ಸಂಜೀಮುಂದ ಕಾಲೇಜ ರೋಡಿನ್ಯಾಗ ಏನೋ 'Romantic adventure' ಆತಂತಲ್ಲೋ?"

"ಎಲ್ಲೀದೋ? ಏನರೆ ಹುಚ್ಚುಚ್ಚಾರೆ ಮಾತಾಡಿ ಒಂದು ಕಥೀ ಕಟ್ಟಬ್ಯಾಡ" ನಾನಿ ಬೆಚ್ಚಿದರೂ ಅವನನ್ನು ಸುಮ್ಮನಿರಿಸಲು ಪ್ರಯತ್ನಿಸಿದ.

"ನನಗೇನು ಗೊತ್ತಪಾ. ನಮ್ಮ ಕುಲಕರ್ಣಿ ಹೇಳತಿದ್ದ. ಮಳೀ ಬರತಿತ್ತಂತ. ನಿನ್ನ ಛತ್ರೀ ನೋಡಿ ಅದರಾಗ ಬರಬೇಕಂತಽ ಮಾಡಿದ್ನಂತ. ಅಷ್ಟರೊಳಗs ಲೀಲಾ ದೇಸಾಯಿಗೆ ನೀನು ಆಶ್ರಯ ಕೊಟ್ಟ್ಯಂತ. ಅವ ಇನ್ನೇನು ಮಾಡೂದಂತ ನಿಮ್ಮ ಹಿಂದಿಂದ ಬಂದ್ನಂತ. ಅದೇನು ಮಹತ್ವದ್ದಲ್ಲ ಬಿಡು. ಆದರ ಮುಂದೇನೋ ಮಾತು ನಡದವಂತ."

"ಏನು ನಡದವಂತ ಮಾತು?" ಸಿಟ್ಟಿಗೆದ್ದು ಕೇಳಿದ ನಾನಿ.

"ಏನೋಪಾ 'Sad tale of a broken heart.' ಅಲ್ಲೋ ನಾನಿ, ಹೀಂಗಿದ್ದೀತು ಅಂತ ನನಗೇನು ಅನಿಸಿದ್ದಿಲ್ಲ ಬಿಡು. ಆ ಜಾರ್ಜೆಟ್ ಪತ್ತಲ, ಸಿಲ್ಕ್‌ಬ್ಲೌಜು ಇವೆಲ್ಲಾ ನೋಡಿದರ, ಅವರಿಗೆ ದುಃಖ ಇದ್ದೀತೂ ಅಂತ ನನಗೇನು ಕನಸುಮನಸಿನ್ಯಾಗ ಗೊತ್ತಾಗಿದ್ದಿಲ್ಲ. ಆದರ 'appearances are always deceptive.' ಅಂತೂ ಏನದ ಅಷ್ಟು ಹೇಳಲಾ!"

ನಾನಿ ಹತಬುದ್ಧನಾದ. ಸರದೇಸಾಯಿಯ ಸರ್ವಜ್ಞತೆಯ ಮುಂದೆ ಅವನ ಆಟ ನಡೆಯುವಂತಿರಲಿಲ್ಲ. ಕೊನೆಗೆ ಅವನಿಗೆ ಕಾಲು ಬಿದ್ದು ಹೇಳಿಕೊಳ್ಳಬೇಕಾಯಿತು, ಇದೊಂದು ರಹಸ್ಯವನ್ನು ಮಾತ್ರ ಸಾರ್ವಜನಿಕವಾಗಿ ಮಾಡಬಾರದೆಂದು. ಸರದೇಸಾಯಿ ತನ್ನ ಸ್ನೇಹಿತನ ಮೇಲೆ

ಕರುಣೆ ತೋರಿ ಹಾಗೇನೂ ಮಾಡಲಿಲ್ಲ.

ಎಷ್ಟು ಚೇಷ್ಟೆ ಮಾಡಿದರೂ ಸರದೇಸಾಯಿಗೆ ನಾನಿಯ ಸಾಹಿತ್ಯಿಕತೆಯ ಬಗ್ಗೆ ಅಭಿಮಾನವಿತ್ತು. ಜೀವನವಿಮರ್ಶೆ ಅವನ ಜನ್ಮಸಿದ್ಧ ಚಟವಾಗಿತ್ತು. ತನಗೆ ಸಂಬಂಧ ಬಂದ ಎಲ್ಲರ ಬಗ್ಗೆಯೂ ಅವನು ಕತೆಗಳನ್ನು ಸಂಗ್ರಹಿಸಿದ್ದ. ಪ್ರತಿಯೊಂದು ಮನುಷ್ಯ-ಮಾದರಿಯೂ ಅವನ ಕುತೂಹಲವನ್ನು ಕೆರಳಿಸುತ್ತಿತ್ತು. ಅದಕ್ಕಾಗಿ ಬೇರೆಯವರ ಪತ್ರ ಹಾಗೂ ದಿನಚರಿಗಳನ್ನು ಓದುವ ಅಸಭ್ಯ ಚಟವನ್ನೂ ಬೆಳೆಸಿಕೊಂಡಿದ್ದ. ಇನ್ನೊಬ್ಬರ ಜೀವನದ ಬಗ್ಗೆ ಆದಷ್ಟು ತಿಳಿದುಕೊಳ್ಳುವ ಹವ್ಯಾಸ ಅವನಲ್ಲಿ ಅನಿವಾರ್ಯವಾಗಿತ್ತು. ಆದರೆ ಅದು ಅಧಿಕಪ್ರಸಂಗವಲ್ಲ.ಜೀವನದ ಹುಚ್ಚಾಟಗಳನ್ನು ನೋಡುವದರಲ್ಲಿಯೇ ಅವನಿಗೆ ಆಸಕ್ತಿ. ಬಿ.ಎ.ದಲ್ಲಿ ಅವನ ಐಚ್ಛಿಕ ವಿಷಯ ಮಾನಸಶಾಸ್ತ್ರವಾಗಿತ್ತು.

ನಾನಿಯ ಬಗ್ಗೆ ಸರದೇಸಾಯಿಗೆ ಸ್ನೇಹಕ್ಕಿಂತ ಆತ್ಮೀಯತೆ ಹೆಚ್ಚಾಗಿತ್ತು. ವಯಸ್ಸಿನಲ್ಲಿ ಅವನು ನಾನಿಗಿಂತ ಎಂಟು ಹತ್ತು ವರ್ಷಗಳಿಂದ ಹಿರಿಯ. ಮೇಲಾಗಿ ವಿಶ್ವಕುಟುಂಬಿ. ದಾರಿಯಲ್ಲಿ ಹಾದು ಹೋಗುವವರೆಲ್ಲ ಅವನಿಗೆ ಪರಿಚಿತರಾಗಿದ್ದರು. ಅವನು ಕಾಲಿಟ್ಟಲ್ಲೆಲ್ಲ ಕೆಲಸ ಸುಲಭವಾಗುತ್ತಿತ್ತು. ಅವನಿದ್ದರೆ, ಎಂಥ ಗದ್ದಲವಿದ್ದರೂ ಸಿನೇಮಾ ಟಿಕೀಟು ದೊರೆಯುತ್ತಿದ್ದವು; ಹಣವಿಲ್ಲದಿದ್ದಾಗ ಹಣ ದೊರೆಯುತ್ತಿತ್ತು. ಕಾಲೇಜಿಗೆ ಪ್ರವೇಶ ಸಿಗದಿರುವದು, Attendanceದಲ್ಲಿ ಕೊರತೆ ಬೀಳುವದು, ಫ್ರೀಶಿಪ್ ದೊರೆಯದಿರುವದು ಮೊದಲಾದ ಕಾಲೇಜ ಜೀವನದ ಅಡಚಣೆಗಳೆಲ್ಲ ಅವನಿಂದ ದೂರಾಗುತ್ತಿದ್ದವು. ಅಂತಲೇ ಮುಗ್ಧನಾದ ನಾನಿಗೆ ಅವನ ಸ್ನೇಹದ ಆಶ್ರಯ ಅನಿವಾರ್ಯವಾಗಿತ್ತು. ನಾನಿಯಂಥ ಒಳ್ಳೆಯ ಸ್ವಭಾವದ ಸ್ನೇಹಿತ ತನ್ನ ರಕ್ಷೆಯಲ್ಲಿರುವದು ಸರದೇಸಾಯಿಗೂ ಹೆಮ್ಮೆಯ ವಿಷಯವಾಗಿತ್ತು.

ನಾನಿಗೆ ಬರೆಯುವ ಆಸೆ ಅದೇ ಕಣ್ಣು ತೆರೆಯುತ್ತಿತ್ತು. ಆಗಾಗ ಬರೆದ ಸಣ್ಣ ಕತೆಗಳು ಯಾಕೋ ಇನ್ನೂ ಹದಕ್ಕೆ ಬಂದಿಲ್ಲವೆಂದು ಅನಿಸುತ್ತಿತ್ತು. ಆದರೂ ಬರೆಯುವ ಚಟ, ಮೋಹ ಅವನನ್ನು ಬಿಟ್ಟಿರಲಿಲ್ಲ. ಯಾವುದಾದರೂ ಕಾದಂಬರಿಯನ್ನು ಓದಿಬಿಟ್ಟರಂತೂ ಆ ಮೋಹ ಇನ್ನೂ ಪ್ರಬಲವಾಗುತ್ತಿತ್ತು. ಓದುವಾಗ ತನ್ನ ಕಲ್ಪಕತೆಯಿಂದ ಆ ಕತೆಯನ್ನು ಹೆಚ್ಚು ಸಜೀವಗೊಳಿಸುತ್ತಿದ್ದ. ಮೆಲ್ಲಗೆ ತಾನೂ ಏಕೆ ಕಾದಂಬರಿ

ಯೊಂದನ್ನು ಬರಿಯಬಾರದೆಂಬ ಆಸೆ ಅವನಲ್ಲಿ ಬೆಳೆಯಹತ್ತಿತು. ಅವನ ಮನಸ್ಸು ಕಥಾವಸ್ತುವಿನ ಶೋಧಕ್ಕೆ ತೊಡಗಿತು. ಆದರೆ ಕಥಾವಸ್ತು ದಾರಿಯಮೇಲೆ ಆಕಸ್ಮಿಕವಾಗಿ ದೊರೆಯಬಹುದಾದ ಮೋಜಿನ ವಸ್ತುವಲ್ಲ ಎಂದು ಹೊಳೆಯಹತ್ತಿತು. ತಾನಿನ್ನೂ ಲೋಕವನ್ನೇ ಕಾಣದೆ ಬದುಕಿದ್ದೇನೆ ಎಂಬ ಅರಿವು ಉಂಟಾಗಹತ್ತಿತು. ಆದರೂ ಬರೆಯಬೇಕಲ್ಲ. ದಿನ ದಿನಕ್ಕೆ ಕಾದಂಬರಿಯನ್ನು ಬರೆಯುವ ಕನಸು ಅವನನ್ನು ಕಾಡಹತ್ತಿತು.

ಸರದೇಸಾಯಿ ಕಥನಕಲೆಯಲ್ಲಿ ಪಳಗಿದವ. ಅವನು ಯಾವ ಸಂಗತಿಯನ್ನು ಹೇಳಿದರೂ ಅದು ಆಕರ್ಷಕವಾಗಿರುತ್ತಿತ್ತು. ಅವನ ಮಾತು ಕೇಳಲು ಬೇಸರಪಟ್ಟುಕೊಳ್ಳುವವರೇ ಇರಲಿಲ್ಲ. ಅದಕ್ಕೆ ಕಾರಣ ತಾನು ಹೇಳುವ ಸಂಗತಿಗಳ ಬಗ್ಗೆ ಅವನಿಗಿದ್ದ ಆತ್ಮೀಯತೆ, ಮಾನವೀಯ ಕುತೂಹಲ. ನಾನಿಗೆ ಅವನ ಈ ಕಲೆಯನ್ನು ನೋಡಿ ಮತ್ತೆ ಮತ್ತೆ ಆಶ್ಚರ್ಯವಾಗುತ್ತಿತ್ತು. ಬಹುಶಃ ಅವನು ಏನಾದರೂ ಹುಟ್ಟಿಸಿಕೊಂಡು ಹೇಳುತ್ತಿರಬಹುದೇ ಎಂದು ಸಂಶಯ ಕೂಡ ಬರುತ್ತಿತ್ತು. ಪ್ರೊಫೆಸರರ ಪ್ರಣಯಲೀಲೆಯನ್ನೇ ಹೇಳಲಿ, ಯಾವುದೋ ವ್ಯಾಪಾರಿ ದಿವಾಳಿ ತೆಗೆದ ಸಂಗತಿಯನ್ನೇ ಹೇಳಲಿ ಅವೆಲ್ಲ ಕತೆಗಳಂತೆ ಸಂಪೂರ್ಣತೆಯನ್ನು ಪಡೆದಿರುತ್ತಿದ್ದವು. ಒಂದು ರಾತ್ರಿ ನಾನಿಗೆ ಇಂಥದೇ ಒಂದು ಕತೆಯನ್ನು ಸರದೇಸಾಯಿ ಹೇಳಿದ್ದ. ನಾನಿಯ ಮನಸ್ಸಿನ ಮೇಲೆ ಅದು ಎಂದೂ ಮರೆಯದ ಪ್ರಭಾವವನ್ನುಂಟುಮಾಡಿತು. ಅದನ್ನು ಕೇಳುವಾಗ, ತಾನೊಂದು ಕಾದಂಬರಿಯನ್ನೇ ಓದುತ್ತಿರುವೆನೆಂಬ ಅನುಭವ ಅವನಿಗುಂಟಾಯಿತು. ಓದುವಾಗಿನಂತೆಯೇ ಕೇಳುವಾಗಲೂ ಅವನ ಕಲ್ಪಕತೆ ಜಾಗೃತವಾಯಿತು. ಹದಿನೈದು ನಿಮಿಷ ಕೇಳಿದ ಸಂಗತಿ, ಒಂದು ಕಾದಂಬರಿಯ ವಸ್ತುವಾಗಿ ಮೂಡಿತು. ಸರದೇಸಾಯಿ ಬರೆಯುವ ಜಾತಿಗೆ ಸೇರಿದವನಲ್ಲ. ವಿವರಗಳಿಂದ ಸಂಪೂರ್ಣವಾಗಿರುವ ಒಂದು ಪತ್ರವನ್ನು ಕೂಡ ಅವನಿಂದ ಬರೆಯುವದು ಸಾಧ್ಯವಿರಲಿಲ್ಲ. ಹೇಳುವಾಗ ಮಾತ್ರ ಒಂದು ವಿವರವನ್ನೂ ಬಿಡುತ್ತಿರಲಿಲ್ಲ. ಅದಕ್ಕೆ ಅವನ ದನಿ, ಅಭಿನಯ ಇವೂ ಪೋಷಕವಾಗಿರುತ್ತಿದ್ದವು. ಅಂದಮೇಲೆ ತಾನೇ ಏಕೆ ಈ ವಸ್ತುವನ್ನು ಬಳಸಿಕೊಂಡು ಒಂದು ಕಾದಂಬರಿಯನ್ನು ಬರೆಯಬಾರದು ಎಂದು ನಾನಿಗೆ ಎನಿಸಿತು.

---

# ೨ : ನಾನಿಯ ದಿನಚರಿ

೧೨-೯-೧೯......

ನಿನ್ನೆ ರಾತ್ರಿ ಸರದೇಸಾಯಿ ಹೇಳಿದ ಕತೆ ನನ್ನ ಮನಸ್ಸಿನ ಮೇಲೆ ಅದ್ಭುತ ಪರಿಣಾಮವನ್ನುಂಟುಮಾಡಿತು. ಬಹಳ ದಿನಗಳಿಂದ ನನ್ನಲ್ಲಿದ್ದ ಒಂದು ಆಸೆ ಚಿಗುರೊಡೆದಿದೆ. ಸರದೇಸಾಯಿಯು ಈ ಕತೆ ನಾನು ಬರೆಯಲಿರುವ ಕಾದಂಬರಿಗೆ ಒಳ್ಳೆಯ ವಸ್ತುವಾಗುತ್ತದೆ. ಕೇಳಕೇಳುತ್ತಿರುವಂತೆಯೇ ಆ ಹುಡುಗಿಯ ಕರುಣರಮ್ಯ ಜೀವನ ನನ್ನ ಕಣ್ಣೆದುರು ಕಟ್ಟಿದಂತಾಗಿದೆ. ವಸ್ತು ಚಿಕ್ಕದಾದರೂ, ಅತ್ಯಂತ ಪರಿಣಾಮಕಾರಿಯಾಗಿದೆ. ಅದನ್ನೇ ವಿವರವಿವರವಾಗಿ ಬಿಡಿಸಿಹೇಳಬೇಕು. ಪ್ರತಿಯೊಂದು ಕ್ಷಣವನ್ನೂ ವಿಭಜಿಸಿ, ಅಂತರಂಗದ ತುಮುಲವಿಪ್ಲವಗಳನ್ನೆಲ್ಲ ರಸವತ್ತಾಗಿ ರೂಪಿಸಬೇಕು. ಚೆಲುವೆಯಾದ ಒಬ್ಬ ಕಾಲೇಜ ಕನ್ಯೆ; ಸಂಗೀತವಲ್ಲಿ ಪರಿಣತಿಯನ್ನು ಪಡೆದವಳು. ಸುಕುಮಾರವಾದ ಹೃದಯ, ಸುಕೋಮಲವಾದ ಭಾವನೆಗಳು ಅವಳ ಸ್ವಭಾವದ ಅಂಗವಾಗಿ ರೂಪಿಸಬೇಕು. ಅವಳಿಗೆ ಪ್ರೀತಿದರ್ಶನವಾದಾಗ ಎಂಥ ಸುಂದರ ಸ್ವಪ್ನಗಳು ಅವಳ ಕಣ್ಣೆದುರು ಹಾದು ಹೋಗಿರಬೇಕು ! ಹೌದು; ಬರೆಯಲೇಬೇಕು.

೧೫-೯-೧೯......

ಕಾದಂಬರಿಯ ವಿಷಯವನ್ನೇ ಮೆಲುಕುಹಾಕುತ್ತಿದ್ದೆ. ಭಾವಗೀತದ ಮೂಲಕಲ್ಪನೆ ಮಿಂಚಿದಂತೆ ಅಂದು ಕಾದಂಬರಿಯ ಕಥಾವಸ್ತು ಗೋಚರವಾಯಿತು. ಆದರೆ ಅದನ್ನು ನಡೆಸುವ ಬಗೆ ಹೇಗೆ? ಯಾವ ಘಟನೆಗಳನ್ನು ಬಳಸಿಕೊಳ್ಳಬೇಕು ? ಬೇರೆ ಪಾತ್ರಗಳನ್ನು ಹೇಗೆ ಸೃಷ್ಟಿ ಮಾಡಬೇಕು? ನಾಯಿಕೆಯ ಪಾತ್ರ ಪೂರ್ತಿಯಾಗಿ ಕಳೆಗೊಂಡಿದೆ. ಅವಳನ್ನು ಗಾಯಕಿಯೆಂದು ರೂಪಿಸಬೇಕೆಂದಿದ್ದೇನೆ. ಸಂಗೀತದ ರಸವತ್ತಾದ ಒಂದೆರಡು ವರ್ಣನೆಗಳನ್ನು ಅಲ್ಲಿ ಸೇರಿಸಬೇಕು. ಗಣಪತಬುವಾ ಅವರ

ಹತ್ತಿರ ನಾನು ಕೊಳಲು ಕಲಿಯಲಿಕ್ಕೆಂದು ಹೋದಾಗ ನನಗೆ ರಾಗಜ್ಞಾನ ಚನ್ನಾಗಿ ಆಗಿದೆ. ಅದನ್ನು ಇಲ್ಲಿ ಉಪಯೋಗಿಸಬೇಕು. ನನ್ನ ಅನುಭವ ಬಹಳ ಪರಿಮಿತವಾಗಿದೆ. ಇಪ್ಪತ್ತೈದು ವರ್ಷಗಳ ಜೀವನದಲ್ಲಿ ಎಷ್ಟು ಅನುಭವ ಬಂದೀತು? ಆದರೇನು? ನನ್ನ ಕಾದಂಬರಿಯಲ್ಲಿ ಕಾಲೇಜು ಜೀವನದ ಚಿತ್ರವೇ ಹೆಚ್ಚಾಗಿದೆ. ಆ ಅನುಭವ ನನಗೆ ಬೇಕಾದಷ್ಟಿದೆ. ಕಾಲೇಜದ ಚಟುವಟಿಕೆಗಳು,ಹಾಸ್ಟೆಲದಲ್ಲಿಯ ಜೀವನ, ಸಭೆ ಸಮ್ಮೇಲನಗಳು, ವಿದ್ಯಾರ್ಥಿಗಳ ಸ್ವೈರವೃತ್ತಿ, ಹುಚ್ಚುತನ, ಪ್ರಣಯದ ಮೋಜಿನ ಘಟನೆಗಳು, ಆಟಪಾಟಗಳು ಇವನ್ನೆಲ್ಲ ವಾಸ್ತವವಾಗಿ ನಿರೂಪಿಸಲು ನನಗೆ ಸಾಧ್ಯವಾಗುತ್ತದೆ.

೬-೧೨-೧೯......

ಕಾದಂಬರಿ ಒಂದೇ ಸವನೆ ಬೆನ್ನುಹತ್ತಿನೆ. ಕೂತಲ್ಲಿ ನಿಂತಲ್ಲಿ ನನಗದೇ ಯೋಚನೆಯಾಗಿದೆ. ಆದರೆ ಇನ್ನೂ ಬರೆಯಲು ಪ್ರಾರಂಭಿಸುವ ಸಾಹಸವನ್ನು ನಾನು ಮಾಡಿಲ್ಲ. ಬರವಣಿಗೆ ಅನಿವಾರ್ಯವಾದಾಗಲೇ ಬರೆಯಲು ತೊಡಗಬೇಕೆಂದು ನನ್ನ ಅಭಿಪ್ರಾಯ. ಕತೆ ಹದಗೊಂಡು, ಪಕ್ವವಾಗಿ, ಮೈತುಂಬಿಕೊಂಡು ಬರಬೇಕು. ಮೊನ್ನೆ 'Madame Bovary' ಓದಿ ಮುಗಿಸಿದೆ. ನಾಯಿಕೆಯ ಮನೋಭಾವನೆಗಳನ್ನೆಲ್ಲ ಎಷ್ಟು ಮನೋಜ್ಞವಾಗಿ ಲೇಖಕ ಬಿಡಿಸಿ ಹೇಳುತ್ತಾನೆ! ಬರೆದರೆ ಅಂಥ ಕೃತಿಯಾಗಬೇಕು! ಮಾನವ ಹೃದಯದಲ್ಲಿ ಆಳವಾಗಿ ಇಳಿದು, ಅಂತರಂಗದ ಏರಿಳಿತಗಳನ್ನೆಲ್ಲ ಸೂಕ್ಷ್ಮವಾಗಿ ಚಿತ್ರಿಸಿ ತೋರಿಸಬೇಕು. ಸುಮ್ಮನೆ ದೀರ್ಘವಾಗಿ ಕತೆಯನ್ನು ಬೆಳೆಸುವದರಲ್ಲಿ ಏನೂ ಅರ್ಥವಿಲ್ಲ.

ಕಥಾನಾಯಿಕೆಯ ಚಿತ್ರ ಸೊಗಸಾಗಿ ಮೂಡಬೇಕು. ಅಂದಹಾಗೆ ಅವಳಿಗೆ ಏನು ಹೆಸರು? ಅವಳ ಕರುಣಮಧುರವಾದ ರೂಪಕ್ಕೆ ತಕ್ಕಂತೆ ಹೆಸರಿಡಬೇಕು. ಹೌದು, ಕರುಣಾ. ಒಳ್ಳೆಯ ಪ್ರಿಯವಾದ ಅರ್ಥಪೂರ್ಣವಾದ ಹೆಸರು! ಅವಳ ಮೃದುಮಧುರ ಸ್ವಭಾವದ, ಅವಳ ಕೋಮಲ ಜೀವನದ ಸಂಕೇತವಾಗಿದೆ ಹೆಸರು.

ಇನ್ನು ಕಾದಂಬರಿಯನ್ನು ಬರೆಯಲು ಪ್ರಾರಂಭಿಸಲು ಏನೂ ಅಡ್ಡಿಯಿಲ್ಲ.

---

## ೩ : ನಾನಿಯ ಕಾದಂಬರಿ

# ಕರುಣಾ

# ಪ್ರಕರಣ : ೧

ಹೇಮಂತ ಋತುವಿನ ಒಂದು ದಿನ. ಸಂಜೆಯ ಹೊನ್ನಿನ ಬೆಳಕಿನಲ್ಲಿ ಕಾಡುಮಲ್ಲಿಗೆಯೂ ಬಿಡಗಿನ ಬಿಂಕದಿಂದ ಕೂಡಿತ್ತು. ಸೂರ್ಯನಿನ್ನೂ ಮುಳು ಗಿರಲಿಲ್ಲ. ಆಗಲೆ ಚಳಿ ಸಪ್ಪುಳಿಲ್ಲದೆ ಅಡಿಯನಿರಿಸುತ್ತಲಿತ್ತು. ಆ ಹಿತವಾದ ಚಳಿ-ಬಿಸಿಲಿನಲ್ಲಿ ಚೈತನ್ಯಪಡೆದ ಪ್ರಕೃತಿಯೆಲ್ಲ ರಮ್ಯವಾಗಿತ್ತು. ಊರ ಆಚೆ ಗಿನ ವನಶ್ರೀಯಲ್ಲಿ ಅವರ್ಣನೀಯ ಕಾಂತಿ ಬೆಳಗಿತ್ತು. ಮುಗಿಲಲ್ಲಿ ಚೆಲ್ಲಿದ ಕೆಂಪು ಹುಡಿಯ ಛಾಯೆಯಲ್ಲಿ ಊರ ಹೊರಗಿರುವ ತೋಟ, ಗದ್ದೆ, ಹೊಲ ಬಿಡಿಬಿಡಿಯಾಗಿ ನಿಂತಿರುವ ಸೌಧಗಳೆಲ್ಲ ಅಲೌಕಿಕವಾದ ವರ್ಣವನ್ನು ಪಡೆದಿ ದ್ದವು. ನಿಬಿಡವಾಗಿ ಬೆಳೆದ ಗಿಡಗಳ ಹಸಿರ ಮೇಲೆ ಈ ಅರುಣಛಾಯೆ ಹರಡಿ ಪಾಂಥನನ್ನು ಅರೆಕ್ಷಣ ಮೂಕವಿಸ್ಮಿತನನ್ನಾಗಿ ಮಾಡುತ್ತಿತ್ತು. ಆ ಛಾಯೆಯಲ್ಲಿ ಉದ್ದಕ್ಕೂ ತಿರುಗಾಡಬೇಕೆಂದು ರಸಿಕ ಹೃದಯ ತವಕಪಡುವಂತಿತ್ತು.

ನಗರದ ಹೊರವಲಯವನ್ನು ಬಳಸಿ ಕಾಲೇಜಿಗೆ ಹೋಗುವ ಬೀದಿಯೇ ಆ ಊರ ಮುಖ್ಯ ಬೀದಿ. ಊರಲ್ಲೆಲ್ಲ ಜನರು, ವಾಹನಗಳ ತುಳಿತಕ್ಕೆ ಗಾಸಿ ಯಾದ ಆ ಬೀದಿ ಊರ ಹೊರಗೆ ವಿಶ್ರಮಿಸುತ್ತಿರುವಂತೆ ತೋರುತ್ತಿತ್ತು. ಅದೇ ದಾರಿಯಿಂದ ಕಾಲೇಜನ್ನು ದಾಟಿ ಕೆಲ ದೂರ ಹೋದಮೇಲೆ ಹೊಲ, ತೋಟ ಗಳು ಕಾಣಿಸಿಕೊಳ್ಳುತ್ತವೆ. ಅಲ್ಲಲ್ಲಿ ಅಚ್ಚುಕಟ್ಟಾದ ಸುಂದರ ಮನೆಗಳು, ಅವೆಲ್ಲವುಗಳನ್ನು ದಾಟಿದರೆ ಅಲ್ಲೊಂದು ಮನೆಯಿದೆ. ಈಗ ಅರ್ಧದಷ್ಟಾದರೂ ಹಾಳು ಬಿದ್ದಿರಬೇಕು. ಅದರೆದುರಿಗೆ ಚಿಕ್ಕದಾದ ತೋಟ. ಈಗ ಹಾಳುಬಿದ್ದಿದೆ. ತುಂಬ ಲಕ್ಷಣವಾಗಿ, ಓರಣವಾಗಿ ಆ ತೋಟವನ್ನು ಹಿಂದಕ್ಕೆ ಬೆಳೆಸಿರಬೇಕು. ಅದರ ಮಧ್ಯಭಾಗದಲ್ಲೊಂದು ನುಣುಪಾದ ಕಲ್ಲಿನ ಹಾಸು; ಅದರ ಎರಡೂ ಬದಿಗೆ ನಿಂತಿರುವ ಕಟ್ಟಿಗೆಯ ಕಂಬಗಳನ್ನು ನೋಡಿದರೆ, ಅಲ್ಲೊಂದು ಸುಂದರ ವಾದ ಲತಾಕುಂಜವನ್ನು ನಿರ್ಮಿಸಿದ್ದಿರಬಹುದೆಂದೆನಿಸುವದು.

ಅದರ ಸುತ್ತಲೂ ಯಾರ ಹೆದರಿಕೆಯಿಲ್ಲದೆ ಬೆಳೆದು ನಿಂತಿವೆ ಮುಳ್ಳು ಕಂಟಿಗಳು; ಹಾಳುಬಿದ್ದ ತೋಟ, ಆ ಲತಾಮಂಟಪ, ಅರೆಬಿದ್ದ ಮನೆ— ಇವು ಗಳನ್ನು ನೋಡಿದವರೆಲ್ಲ ಅದಕ್ಕೊಂದು ಕತೆಯನ್ನೆ ಕಲ್ಪಿಸುವಂತಿದೆ. ಅವುಗಳ

ವಿಷಯವಾಗಿ ಸತ್ಯಸಂಗತಿಯೇನಿದೆಯೋ ನಿರ್ದಿಷ್ಟವಾಗಿ ಗೊತ್ತಾಗಲಾರದಷ್ಟು ನಿಬಿಡವಾಗಿ ಬರಿ ರಮ್ಯಕಲ್ಪನೆಯ ಕತೆಗಳು ಹಬ್ಬಿಕೊಂಡಿವೆ. ಆ ಕೌತುಕದ ಕತೆಗಳನ್ನು ಕೇಳಿ ಆ ಮನೆ, ತೋಟಗಳನ್ನೂ ನೋಡಿದ ಮೇಲೆ ಮನಸ್ಸು ಭಾವನೆಗಳ ಜಾಲದಲ್ಲಿ ಸಿಲುಕುವದು. ಪ್ರತಿಯೊಬ್ಬನೂ ಅದಕ್ಕೆ ತನ್ನ ಕಲ್ಪನೆಯ ಭಾವನೆಗಳನ್ನು ಬೆರಸಿ ಕತೆ ಇನ್ನೂ ಕೌತುಕಮಯವಾಗುವಂತೆ ಮಾಡಿದ್ದಾನೆ. ಅದೇನೇ ಇದ್ದರೂ ಆ ಹಾಳುಬಿದ್ದ ತೋಟ, ನಿರ್ಜನವಾಗಿರುವ ಮನೆ, ಸುತ್ತಲಿನ ಹಗಲು-ಮೌನ, ಇವೆಲ್ಲ ಯಾವುದೋ ಒಂದು ಕರುಣಾರ್ದ್ರ ಭಾವವನ್ನು ಮೀಟುತ್ತವೆ.

ಅಂದು ಹುಣ್ಣಿಮೆ. ಹಾಲು-ಹೊನಲಲ್ಲಿ ಜಗವೆಲ್ಲ ಮೀಯುತ್ತಿರುವಂತೆ ಇತ್ತು. ಮತ್ತಗಂಧವಹನ ಸ್ಪರ್ಶದಲ್ಲಿ ಅನಿರ್ವಚನೀಯ ಹಿತವಿತ್ತು. ಆ ದಾರಿಯಲ್ಲಿ ಜನರು ವಿಹಾರಕ್ಕೆಂದು ಬರುತ್ತಿದ್ದರೂ ಅಷ್ಟು ದೂರದ ವರೆಗೆ ಹೋಗುವವರು ಕಡಿಮೆ. ಶಾಲೆಯ ಬಾಲಕರು ವನಭೋಜನಕ್ಕೆಂದು ಯಾವಾಗಲಾದರೂ ಬರುತ್ತಿದ್ದರೂ ಸಂಜೆಯ ಅಮೃತಗಳಿಗೆಯನ್ನು ಸವಿಯುವ ಮುನ್ನವೇ ಹಿಂತಿರುಗುತ್ತಿದ್ದರು. ನಿವೃತ್ತ ವೃದ್ಧರು ಬರುತ್ತಾರೆ. ಆದರೂ ಅವರಿಗೆ ತಮ್ಮ ತಮ್ಮ ಹಿಂದಿನ ಬದುಕಿನ, ವೈಭವ ಸುಖದುಃಖಗಳನ್ನು ಮೆಲುಕು ಹಾಕುವದೇ ಹೆಚ್ಚು ಪ್ರಿಯ. ಕಾಲೇಜ ಯುವಕರು ಸುಳಿಯುತ್ತಿದ್ದರೂ, ಪಠ್ಯಪುಸ್ತಕ ಅಧ್ಯಾಪಕರ ಇತಿಹಾಸ ಇಲ್ಲವೆ ವಿದ್ಯಾರ್ಥಿನಿಯರ ಬಣ್ಣ ಬೆಡಗು, ಮಾತು, ನಡಿಗೆ, ಕಂಠ, ಲಾವಣ್ಯಗಳ ವಿಷಯವಾಗಿ ಹರಟುವವರೇ ಹೆಚ್ಚು.

ಅಲ್ಲಿಯ ಚೆಲ್ವಿಕೆ ಕಾನನದ ಬೆಳದಿಂಗಳಿನಂತಾಗಿತ್ತು.

ಮಾಧವನ ಜೊತೆಗೆ ಸುಧಾಕರ ಆ ಹಾಳುಬಿದ್ದ ಮನೆಯ ಅನತಿ ದೂರದಲ್ಲಿ ಬರುವಹೊತ್ತಿಗೆ ಆಗಲೆ ಆಗಸವೆಲ್ಲ ಚಂದ್ರಿಕೆಯ ಲಾಸ್ಯದಲ್ಲಿ ಕನಸು ಕಾಣುತ್ತಿತ್ತು. ಕಾಲೇಜು, ಹಾಸ್ಟೆಲಿನ ನಿಯಮಿತ ಜೀವನ, ಇನ್ನಿತರ ಚಟುವಟಿಕೆಗಳ ಮಧ್ಯೆ ಬಿಡುವು ಮಾಡಿಕೊಂಡು ಯಾವಾಗಲೊಮ್ಮೆ ಈ ಕಡೆಗೆ ಮಾಧವ ಸುಳಿಯುತ್ತಿದ್ದ. ಆ ದಿನ ಜೊತೆಗೆ ಸುಧಾಕರನನ್ನು ಕರೆದುಕೊಂಡು ಹೊರಟಿದ್ದ. ಇಬ್ಬರೂ ಓದುತ್ತಿದ್ದುದು ಒಂದೇ ವರ್ಷದಲ್ಲಿಯಾದರೂ ಮಾಧವ ಹಿರಿಯ — ವಯಸ್ಸಿನಲ್ಲಿ. ಇಬ್ಬರೂ ಹಾಸ್ಟೆಲಿನಲ್ಲಿರುತ್ತಿದ್ದರಾದರೂ ಒಂದೇ ಕೋಣೆಯ ಸ್ನೇಹಿತರಾಗಿರಲಿಲ್ಲ. ಆದರೂ ಉಳಿದವರಿಗಿಂತ ಹೆಚ್ಚಿನ ಆತ್ಮೀಯತೆ

ಇವರಿಬ್ಬರಲ್ಲಿತ್ತು. ಸುಧಾಕರನ ನಡತೆ, ಮಾತುಗಳಲ್ಲಿಯ ನಯ, ಮಾಧವನನ್ನು ಸೆಳೆದಿದ್ದವು. ಅದಕ್ಕಿಂತ ಮಿಗಿಲಾಗಿ ಸುಧಾಕರನೊಬ್ಬ ಕ್ರೀಡಾಪಟುವೆಂಬ ಅಭಿಮಾನ ಹೆಚ್ಚು ಮಾಧುವಿಗೆ.

ಮಾಧೂ ಕೈಯಲ್ಲಿ ರ್‍ಯಾಕೆಟ್ ಹಿಡಿಯದಿದ್ದರೂ ಟೆನಿಸ್, ಬ್ಯಾಡ್ಮಿಂಟನ್, ಆಟಗಳೆಂದರೆ ಹುಚ್ಚು; ಎಲ್ಲಿಯೇ ಪಂದ್ಯಾಟವಿರಲಿ ಮಾಧು ಹಾಜರ್ ! ಆಟಗಾರರಿಗಿಂತ ಹೆಚ್ಚಾಗಿ ಆಟವನ್ನು ಸವಿಯುವದು ಆತನಿಗೆ ಪ್ರಿಯ. ಸೋಲು ಗೆಲುವುಗಳನ್ನು ಮುಗುಳುನಗೆಯಿಂದ ಸ್ವಾಗತಿಸಿ, ಗೆದ್ದ ಎದುರಾಳಿಯನ್ನು ಮೆಚ್ಚಿ ಹಾರ್ದಿಕವಾಗಿ ಕೈಕುಲುಕಿ ನಡೆಯುವ ಆಟಗಾರರನ್ನು ಕಂಡರೆ ಆತನಿಗೆ ಬಹಳ ಅಭಿಮಾನ. ಅಂತಹ ರಸಿಕ ಸವಿಗಾರನಾತ. ಸುಧಾಕರ ಅಂತಹ ಶುಚಿ ಸಂಸ್ಕಾರಗಳುಳ್ಳ ಆಟಗಾರನಾಗಿದ್ದುದರಿಂದ ಅವರಿಬ್ಬರಲ್ಲಿ ಸ್ನೇಹ ಸಹಜವಾಗಿ ಅಂಕುರಿಸಿತ್ತು. ಎಲ್ಲರ ಕಣ್ಣಿಗೂ ಸಾಮಾನ್ಯನಂತೆ ಕಂಡು ಕಾಲೇಜಿಗೆ ಸೇರಿದ ವರುಷದಲ್ಲಿಯೇ ಕ್ರೀಡಾವಲಯದಲ್ಲಿ ಬಿರುಗಾಳಿಯನ್ನೆಬ್ಬಿಸಿದ 'ಮಗು, ಸುಧಾಕರನ' ಬಗೆಗೆ ಮಾಧುವಿಗೆ ಬರಿ ಸ್ನೇಹವಲ್ಲ, ಪ್ರೀತಿಯಲ್ಲ; ಪ್ರೀತಿಯ ಹುಚ್ಚು.

ಅಂದು ನಡೆದ ಟೇಬಲ್ ಟೆನಿಸ್ ಉಪಾಂತ್ಯಪಂದ್ಯದಿಂದ ಪ್ರೇಕ್ಷಕರಿಗೆಲ್ಲ ಅನಿರೀಕ್ಷಿತ ಅಚ್ಚರಿಯಾಗಿತ್ತು. ಸುಧಾಕರನೊಬ್ಬ ಆಟಗಾರನೆಂದು ಗೊತ್ತಿದ್ದ ಜನ ವಿರಳ. ಅವನೊಬ್ಬ ಒಳ್ಳೆಯ ಆಟಗಾರನೆಂದು ಪರಿಚಿತನಾದುದು ಅತಿ ವಿರಳ. ಇನ್ನು ನೋಟಕರ ನಿರೀಕ್ಷೆ ತರ್ಕಗಳನ್ನೆಲ್ಲ ಒಂದೇ ಗಳಿಗೆಯಲ್ಲಿ ಬುಡಮೇಲು ಮಾಡುವ ವಿಷಯವಂತೂ ಎಲ್ಲರನ್ನೂ ದಂಗುಬಡಿಸುತ್ತಿತ್ತು. ಮರುದಿನದ ಕೊನೆಯ ಪಂದ್ಯಾಟಕ್ಕೆ ರಂಗು ಏರುವದೆಂದು ಎಲ್ಲರ ಭಾವನೆ. ಮೂರು ವರುಷಗಳಿಂದಲೂ ಕಾಲೇಜಿನ ಏಕೈಕವೀರಪಟ್ಟವನ್ನಲಂಕರಿಸಿದ್ದ ಜಾ:ನಿಯು ಈ ಹೊಸ 'ಕುಳ'ದ ಆಟವನ್ನು ಸೂಕ್ಷ್ಮವಾಗಿ ನೋಡಿದ್ದ. ಪ್ರತಿವರುಷ ಅಹಮಹಮಿಕೆಯಿಂದ ಆಡುವ ಜಾ:ನಿ ತಲೆತುರಿಸಿಕೊಳ್ಳುವಂತಾಯ್ತು ಈ ಸಲ. ಆದರೂ ಆತನಿಗೆ ತನ್ನ ರಭಸದ ಆಟದ ಮೇಲೆ ಬಹಳ ವಿಶ್ವಾಸ. ಮೊದಲಿಗೆ ಮುಂಗಾರು ಮಳೆಯಂತೆ ನಾಲ್ಕಾರು Shots ಹೊಡೆದು ಎದೆಗೆಡಿಸಿಬಿಟ್ಟರಾಯ್ತೆಂದು ಎಣಿಕೆ ಹಾಕಿದ್ದ. ಕಾಲೇಜಿನಲ್ಲಿ ಆತನ ಬೆಂಬಲಿಗರಿಗೇನೂ ಕಡಿಮೆಯಿರಲಿಲ್ಲ.

ಅಂತೂ ಮರುದಿನದ ಪಂದ್ಯಾಟ ಆಕರ್ಷಣೀಯವಾಗುವದಿತ್ತು. ಊರಿನ

ಕ್ರೀಡಾಭಿಮಾನಿ ಯುವಕರು, ಹುಮ್ಮಸ್ಸಿನ ಹೈಸ್ಕೂಲು ವಿದ್ಯಾರ್ಥಿಗಳು – ಇವರೆಲ್ಲ ಈ ಕುತೂಹಲದ ಹೊಸ ವ್ಯಕ್ತಿಯನ್ನು ನೋಡುವ ತವಕದಲ್ಲಿದ್ದರು.

ಇಬ್ಬರೂ ಬಹುದೂರ ಸಾಗಿಬಂದಿದ್ದರು. ಆ ಮನೆಯನ್ನು ದಾಟಿ ಮುಂದಿರುವ ಹೊಲದಲ್ಲಿ ಕುಳಿತುಕೊಂಡರು. ಆ ದಿನ ನಡೆದ ಆಟ, ಪ್ರೇಕ್ಷಕರ ಹರ್ಷೋದ್ಗಾರ, ಇನ್ನೂ ಇಬ್ಬರ ಮನದಲ್ಲಿ ತುಂಬಿ ನಿಂತಿದ್ದವು. ಮಾಧು ಮರುದಿನದ ಚಿತ್ರವನ್ನು ಬರೆಯುತ್ತಲಿದ್ದ.

"ಹರೀಶ ನಾಳೆ ಊರಿಗೆ ಬರುತ್ತಾನಲ್ಲವೇ ?" ಎಂದು ಕೇಳಿದ ಮಾಧವ.

"ಬರುತ್ತೇನೆಂದು ಹೇಳಿ ಹೋಗಿದ್ದಾನೆ. ಬಹುಶಃ ತಪ್ಪಿಸಲಿಕ್ಕಿಲ್ಲ...."

"ಈಗೇಕೆ ಊರಿಗೆ ಹೋದನೊ !"

"ಆತ ಹೇಳಲೂ ಇಲ್ಲ. ನಾನು ಕೇಳಲೂ ಇಲ್ಲ. ನಿನಗೆ ಗೊತ್ತಿದೆಯಲ್ಲ ಆತನ ಸ್ವಭಾವ."

"ಆತ ಕಾಲೇಜು ಸೇರಿ ಮೂರು ವರುಷಗಳಾದರೂ ನನ್ನೊಂದಿಗೆ ಮಾತನಾಡಿದುದೇ ವಿರಳ. ನಾನು ಮಾತನಾಡಿಸದ ವ್ಯಕ್ತಿಯೇ ಇಲ್ಲ ಹಾಗೆ ನೋಡಿದರೆ. ಆದರೆ ನಿಮ್ಮ ಹರೀಶನನ್ನು ಮಾತನಾಡಿಸುವದು ಸಾಹಸವೇ. ಒಳ್ಳೆ ಬಿಗುಮಾನದ ವ್ಯಕ್ತಿ ಆತ."

"ಬಿಗುಮಾನವೇನು ! ಭಾರಿ 'Reserve' ಅಷ್ಟೆ. ನಾಲ್ಕು ಜನರಲ್ಲಿ ಬೆರೆಯುತ್ತಾನೆ. ಆದರೂ ಅದಕ್ಕೊಂದು ಸೀಮೆಯನ್ನಿಟ್ಟುಕೊಂಡಂತಿದೆ. ನಾವಿಬ್ಬರೂ ಒಂದೇ ಕೋಣೆಯಲ್ಲಿ ಇರುತ್ತೇವಲ್ಲ, ನನ್ನೊಡನೆ ಆತ ಅನಾವಶ್ಯಕವಾಗಿ ಮಾತನಾಡುವದೇ ಇಲ್ಲ. ಮನುಷ್ಯ ಒಳ್ಳೆಯವ. ಮಾತು ಬೇಡ, ಹೀಗಿದ್ದಾನೆ ಆತ –" ಎಂದು ಹೇಳಿದ ಸುಧಾಕರ.

"ಇಂದು ನಿನ್ನ ಕೋಣೆಯ ಕಡೆಗೆ ಜಾನಿ ಬಂದಂತಿತ್ತಲ್ಲ ! ಏತಕ್ಕೆ ?"

"ಹರೀಶನನ್ನು ಕಾಣಬೇಕಿತ್ತಂತೆ. ನಾನು ಒಳಗೆ ಕರೆದೆ. ಚಹ ತೆಗೆದುಕೊಂಡು, ಒಂದೈದು ನಿಮಿಷ ಕುಳಿತುಕೊಳ್ಳಬಹುದಲ್ಲ ಎಂದು ಹೇಳಿದೆ. ಅವಸರದ ಕೆಲಸವಿದೆ, ಮತ್ತೊಮ್ಮೆ ಬರುತ್ತೇನೆಂದು ಹೊರಟೇಬಿಟ್ಟ"

"ಆತ ಹೇಗೆ ಒಳಗೆ ಬಂದಾನು ಸುಧಾಕರ? ನೀನು ಆತನ ಎದುರಾಳಿಯಲ್ಲವೇ ?"

"ಆಟದಲ್ಲಿ ಎದುರಾಳಿಯಾದರೇನಾಯ್ತು? ಸ್ನೇಹ, ಶಿಷ್ಟಾಚಾರಕ್ಕೇನು

ಬಂದದ್ದು? ಎದುರಾಳಿಯಾದರೂ ವೈರಿಯಲ್ಲವಲ್ಲ !"

"ಹಾಗಲ್ಲ ಸುಧಾಕರ; ಆತನ ದೃಷ್ಟಿಯಲ್ಲಿ ಎರಡೂ ಪದಗಳಿಗೂ ಒಂದೇ ಅರ್ಥ. ನಾಳಿನ ಪಂದ್ಯಾಟದಲ್ಲಿ ಆತ ಸೋತರೆ ಎಂತಹ ಅವಮಾನ ಗೊತ್ತೇ?"

"ಅವಮಾನವೆಂದೇಕೆ ತಿಳಿಯಬೇಕು?"

"ಆತನ ಸ್ವಭಾವ ನಿನಗೆ ತಿಳಿಯದು ಸುಧಾಕರ. ಇಷ್ಟು ದಿನಗಳವರೆಗೂ ಬಹು ಜಾಗರೂಕತೆಯಿಂದ ತನ್ನ ಚಾಂಪಿಯನ್ ಪಟ್ಟವನ್ನು ಕಾಯ್ದುಕೊಂಡು ಬಂದಿದ್ದಾನೆ; ಈಗ ಒಬ್ಬ ಪೋರ ಅದನ್ನು ಅಲುಗಿಸಲು ಯತ್ನಿಸುತ್ತಿರುವ ದೆಂದರೆ ಅದೆಂತಹ ಅವಮಾನ ! ಆತನ ಪ್ರತಿಷ್ಠೆ, ಅಭಿಮಾನಗಳಿಗೆ ಪೆಟ್ಟು ಬೀಳುವದೆಂದು ಆತನ ಭಾವನೆ."

"ನಾನೇ ಗೆಲೆಯುತ್ತೇನೆಂದು ಏಕೆ ಭಾವಿಸಿದ್ದಾನೋ ತಿಳಿಯದು."

"ಇಂದಿನ ನಿನ್ನ ಆಟ ಆತನನ್ನು ಹಣ್ಣು ಮಾಡಿದೆ. ನೀನು ಗೆದೆಯ ದಿದ್ದರೂ ಆತನ ಮೈಯ ನೀರನ್ನು ಇಳಿಸುತ್ತೀ ಎಂಬುದು ಈಗ ಆತನಿಗೆ ಸ್ಪಷ್ಟ ವಾಗಿದೆ. ನೀನು ಹೊಸಬ. ಪ್ರೇಕ್ಷಕರಲ್ಲಿ ಬಹಳ ಜನ ನಿನಗೆ ಸಹಾನುಭೂತಿ ಬೆಂಬಲ ನೀಡುತ್ತಾರೆ. ಆತ ಗೆದ್ದರೂ ಒಂದು ದೃಷ್ಟಿಯಿಂದ ನೀನು ಹೆಚ್ಚು ಮೆಚ್ಚಿಗೆಯವನಾಗುತ್ತೀ. ನಿನ್ನ ಪಟ ಮೇಲೆ ಹಾರುವದಲ್ಲಾ ಎಂಬ ಸಂಕಟ ಆತನಿಗೆ."

"ಅದೇನಾಗುವದೋ ಆಗಲಿ. ಆಟಕ್ಕಾಗಿ ಆಟ. ಈ ಪರಿಯಾಗಿ ಮನ ವನ್ನು ಕದಡಿಕೊಳ್ಳುವದು ನನಗೆ ಸೇರದು. ಆಗಲೆ ಹೊತ್ತು ಒಂಬತ್ತಕ್ಕೆ ಸಮೀಪಿಸಿದೆ — ಇನ್ನು ಹೊರಡೋಣವೇ ?" ಎಂದ ಸುಧಾಕರ.

ಇಬ್ಬರೂ ಊರ ಕಡೆಗೆ ತಿರುಗಿದರು. ಸಾವಕಾಶವಾಗಿ ಸುಧಾಕರನ ಮನ ದಲ್ಲಿ ಮರುದಿನದ ಕೌತುಕದ ಪಂದ್ಯಾಟದ ಚಿತ್ರ ಮೂಡಿ ನಿಂತಿತು ಆದು ದಾಗಲಿ ಎಂದು ಸಮಾಧಾನ ಹೇಳಿಕೊಂಡ. ಇಬ್ಬರೂ ಕಾಲೇಜ ಗೇಟಿನ ಸಮೀ ಪಕ್ಕೆ ಬಂದರು.

"ಮಾಧು, ಮರೆತೇ ಬಿಟ್ಟಿದ್ದೆ. ಪೇಟೆಯ ಕಡೆಗೆ ಹೋಗಿ ಬರೋಣವೇ? ಒಂದು ಜೋಡು 'shoes, socks' ಕೊಳ್ಳಬೇಕಾಗಿದೆ. ಕೊನೆಯ ಪಂದ್ಯಾಟ ವನ್ನಾದರೂ 'shoes' ಹಾಕಿಕೊಂಡು ಆಡುತ್ತೇನೆ."

"ನೀನೆಂತಹ championನೋ ! ಕಾಲಲ್ಲಿ ಬೂಟುಗಳಿಲ್ಲ ! ಇಷ್ಟು ದಿನ

ಬರಿಗಾಲಿನಲ್ಲಿ ಆಡಿ ಈಗೇಕೆ ಬೂಟುಗಳು ಬೇಕು ನಿನಗೆ ?" .... ಎಂದು ನಗೆ ಯಾಡಿದ.

ಊಟಕ್ಕೆ ಬರುವದು ಅರ್ಧಗಂಟೆ ತಡವಾಗುತ್ತದೆಂದು clubಗೆ ಹೇಳಿ ಕಳುಹಿ ಊರೊಳಗೆ ಹೊರಟರು. ದಾರಿಯಲ್ಲಿ ಹರೀಶ ಭೆಟ್ಟಿಯಾದ.

"ಓ ! ಯಾವಾಗ ಬಂದಿರಿ ಹರೀಶ್?" ಎಂದು ಕೇಳಿದ ಸುಧಾಕರ.

"ಸಾಯಂಕಾಲ ಬಂದೆ. ನೀವು ತಿರುಗಿ ಬರುವದು ಇನ್ನೂ ತಡವೇನು?"

"ಅರ್ಧ ತಾಸಿನಲ್ಲಿ ಬಂದುಬಿಡುತ್ತೇನೆ."

"ಅಲ್ರೀ ಹರೀಶ್, ನಿಮ್ಮ ಸುಧಾಕರ ನಾಳೆ 'champion' ಆಗುವವನಿದ್ದಾನೆ. ಅವನ ಸಡಗರ ಶೃಂಗಾರಕ್ಕಾಗಿ ಈಗ ಪೇಟೆಗೆ ಹೊರಟಿದ್ದೇವೆ"ಎಂದ ಮಾಧು.

"ಹೌದಂತೆ ! ಊರಲ್ಲೆಲ್ಲಾ ಇವರ ಮಾತೇ ಮಾತು. 'wish you better luck' ಅಚ್ಛಾ, ನಾನು ಹೊರಡುತ್ತೇನೆ" ಎಂದು ಹರೀಶ ತಿರುಗುವಾಗ ಮಾಧು ನಡುವೆಯೇ "ಮತ್ತೆ ಆಟ ನೋಡಲು ನೀವು ತಪ್ಪಿಸಬೇಡಿರಿ ಹರೀಶ...." ಎಂದು ಎಚ್ಚರಿಸಿದ.

"ಓ ! ಅಗತ್ಯ." ಎಂದು ಹೇಳಿ ಮುಂದೆ ಸಾಗಿದ. ಲಗುಬಗೆಯಿಂದ ನಡೆಯುತ್ತ 'ಆಶಾ'ಚಿತ್ರಮಂದಿರದ ಎದುರಿಗೆ ಬಂದರು. ಮೊದಲನೆಯ 'Show' ಮುಗಿಯುವದರಲ್ಲಿತ್ತು. ಎರಡನೆಯ ಆಟವನ್ನು ನೋಡಲು ಜನರು ಬರಲು ಪ್ರಾರಂಭಿಸಿದ್ದರು. ಚಿತ್ರಮಂದಿರದ ಒಳಗಡೆಯ ಬಯಲಿನಲ್ಲಿ ಹಲವಾರು ಜನ ಉದ್ದೇಶವಿಲ್ಲದೆ ತಿರುಗುತ್ತಿದ್ದರು. ಭಿತ್ತಿಪತ್ರಗಳನ್ನು ನೋಡುತ್ತ ತಿರುಗುವ ಬಾಲಕರು, ಇನ್ನೂ ಅಲ್ಲಿಯೇ ಸುಳಿಯುತ್ತಿದ್ದರು. ನಸು ನೀಲ ಛಾಯೆಯ ಬಿಳಿವರ್ಣದ ವಿದ್ಯುದ್ದೀಪದ ಬೆಳಕು ಎದುರಿಗಿನ ಟಾರ್ ಬೀದಿಯ ಮೇಲೆಲ್ಲ ಮಿಂಚು ಬೀರಿತ್ತು.

ಬಲಭಾಗದ ಚಿಕ್ಕ ಬೀದಿಯಲ್ಲಿ ಯಾರೋ ಕೂಗಿದಂತಾಯ್ತು. ಪರಿಚಿತ ಧ್ವನಿಯಂತೆ ಕೇಳಿದುದರಿಂದ ಮಾಧವ ಆ ಕಡೆಗೆ ತಿರುಗಿ ನೋಡಿದ; ಕೂಗಿದ ವ್ಯಕ್ತಿ ಸಮೀಪಕ್ಕೆ ಬಂದರು. ಅವರ ಜೊತೆಯಲ್ಲಿರುವ ಹೆಣ್ಣುಮಗಳು ಅವರ ಹೆಂಡತಿ; ಅವಳ ಬದಿಯಲ್ಲಿಯೇ ನಡೆದು ಬರುತ್ತಿದ್ದಳು ವಸಂತಪ್ರಾಯದ ಹುಡಿಗೆಯೊಬ್ಬಳು.

"ಮಾಧವರಾವ್, ನಮಸ್ಕಾರ" ಎಂದು ಹೇಳುತ್ತಲೇ ಮುಂದೆ ಬಂದರು.

"ಓ ! ನಿಮ್ಮ ದರ್ಶನ ಅಪರೂಪವಾಯಿತಲ್ಲ ಗಣಪತರಾವ್ ?"

"ನಮ್ಮ ಓಣಿಯನ್ನು ಬಿಟ್ಟು ನೀವು ಈಗ ಹಾಸ್ಟೆಲ್ ಸೇರಿದ್ದೀರಿ. ಹೊರಗೆ ಬರುವದೇ ಅಪರೂಪವೆಂನೆನಿಸುತ್ತದೆ. ನಾನೇ ನಿಮ್ಮನ್ನು ಕಾಣಲಿಕ್ಕೆ ಬರಬೇಕೆಂದು ಕಾಣುತ್ತದೆ."

"ಹಾಗೇನಿಲ್ಲ. ಈಗ ಕಾಲೇಜಿನ 'Annual Day' ಸಮೀಪಿಸಿದೆ. ಆದ್ದರಿಂದ ಸಮಯ ಸಿಕ್ಕಿರಲಿಲ್ಲ. ನಾನೇ ಅನುಕೂಲಮಾಡಿಕೊಂಡು ಬರುವವ ನಿದ್ದೆ. ಪತ್ರಿಕಾಪ್ರಪಂಚದಲ್ಲಿ ಮುಳಗಿರುವ ನೀವು ನನ್ನನ್ನು ನೆನಪಿಟ್ಟು ಕೊಂಡುದೇ ಆಶ್ಚರ್ಯ !"

"ಪತ್ರಿಕಾಪ್ರಪಂಚದಲ್ಲಿದ್ದವರೆಲ್ಲ ಅಷ್ಟು ಮರಗೂಳಿಗಳೆಂದು ನಿಮ್ಮ ಅಭಿಪ್ರಾಯವೋ ?"

ಸ್ನೇಹಿತರಿಬ್ಬರೂ ನಕ್ಕರು.

"ನೋಡಿರಿ ಮಾಧವರಾವ್ ! ನಾನು ಮರೆಯುವ ಸ್ವಭಾವದವನೆಂದು ಹೇಳಿ ನಿಮ್ಮ ಸ್ನೇಹಿತರ ಪರಿಚಯ ಮಾಡಿಕೊಡುವದನ್ನೇ ಮರೆತಿದ್ದೀರಿ!" ಎಂದು ಎಚ್ಚರಿಸಿದ.

"ಓ ! ಮರೆತಿದ್ದೆ. ಇವರು ನನ್ನ ಹೊಸ ವರ್ಷದ ಹೊಸ ಸ್ನೇಹಿತರು. ಸುಧಾಕರ. Junior B. A.ದಲ್ಲಿ ಓದುತ್ತಿದ್ದಾರೆ. ಈ ವರುಷದ ನಮ್ಮ ಕಾಲೇಜ 'Champion'.... ಅಂದರೆ ಆಗುವವರಿದ್ದಾರೆ ನಾಳೆಯ ದಿನ."

"ಸಂತೋಷ." ಎಂದು ಗಣಪತರಾಯರು ಸುಧಾಕರನಿಗೆ ನಮಸ್ಕರಿಸಿದರು. ಸುಧಾಕರನೂ ಪ್ರತಿಯಾಗಿ ನಮಸ್ಕರಿಸಿದ.

ಮೊದಲ ಪರಿಚಯವಾದಾಗ ಆಡಲು ಮಾತುಗಳು ತೋಚುವದಿಲ್ಲ. ಮಾತನಾಡದೆ ಇರಲೂ ಬರುವಂತಿಲ್ಲ. ಅದರಲ್ಲಿ "ಮುಗ್ಧ"ನಿದ್ದರಂತೂ ತೀರೇ ಹೋಯಿತು. ಆಗೇನು ಮಾಡಬೇಕು? ಮುಖದಲ್ಲಿ ಹಿತವಾದ ನಗೆಯನ್ನು ತಂದುಕೊಳ್ಳುವದೇ ಶ್ರೇಯಸ್ಕರ. ಅಂತಹ ನಗೆಯನ್ನು ಸುಧಾಕರ ಬಹು ಪ್ರಯಾಸದಿಂದ ತಂದುಕೊಳ್ಳುವದು ಅವಶ್ಯವಿರಲಿಲ್ಲ. ಅದು ಆತನಿಗೆ ಸ್ವಾಭಾವಿಕ ವಾಗಿದ್ದಿತು.

"ಸುಮ್ಮನೆ ನನ್ನನ್ನು ಹೊಗಳಬೇಡ ಮಾಧು" ಎಂದ ಸುಧಾಕರ.

"ಗಣಪತರಾವ್, ನಾಳೆ ಸಾಯಂಕಾಲ ನಾಲ್ಕು ಗಂಟೆಗೆ ಕೊನೆಯಾಟಗಳು ಪ್ರಾರಂಭ. ನೀವು ಅವಶ್ಯ ನೋಡಲು ಬರಬೇಕು. ಈತನ ಆಟ ನೋಡಿ ಆಮೇಲೆ ನಾನು ಅಂದುದು ಸರಿಯೋ, ಅತಿಶಯೋಕ್ತಿಯೋ ನೀವೇ ನಿರ್ಧರಿಸಿರಿ." ಎಂದು ಹೇಳಿದ ಮಾಧವ.

ಈ ವರೆಗೂ ಮಾತನಾಡದೆ ನಿಂತಿದ್ದವಳು ಅರುಣಾ, ಇವರ ಮಾತುಗಳಿಗೆ ಪ್ರತಿಕ್ರಿಯೆಯೆಂದು ಮುಖದ ಮೇಲೆ ನಗೆಯನ್ನೋ, ಇಲ್ಲವೆ ಆಶ್ಚರ್ಯ ಕುತೂಹಲಗಳನ್ನೋ ವ್ಯಕ್ತಗೊಳಿಸುತ್ತ ನಿಂತಿದ್ದಳು. ಎಷ್ಟು ಹೊತ್ತು ಈ ಮೂಕ ಶಿಕ್ಷೆಯನ್ನನುಭವಿಸಬೇಕು! ಇಂತಹ ಪ್ರಸಂಗಗಳನ್ನು ನೋಡಿದಾಗ ನಮ್ಮ ಜನರಲ್ಲಿ ಶಿಷ್ಟಾಚಾರ, ಸಾಮಾಜಿಕತೆಗಳು ಇನ್ನೂ ಬೆಳೆದುಬಂದಿಲ್ಲವೆಂದೆನಿಸುವದು. ಸ್ನೇಹಿತರು ಭೆಟ್ಟಿಯಾದರೆ ಅವರೊಡನೆ ಮಾತನಾಡುತ್ತಾರೆ. ಅವರ ಜೊತೆಯಲ್ಲಿ ಬಂದ ಹೆಣ್ಣುಮಕ್ಕಳನ್ನು ಸೌಜನ್ಯ, ಶಿಷ್ಟಾಚಾರಕ್ಕಾದರೂ ಮಾತನಾಡಿಸಬಾರದೇ ? ಮಾತನಾಡಿಸಬಾರದೆಂದಲ್ಲ; ಹೇಗೆ ಮಾತನಾಡಬೇಕು ? ಏನೆಂದು ಪ್ರಾರಂಭಿಸಬೇಕೆಂಬುದು ನಮ್ಮ ಜನರಿಗೆ ತಿಳಿಯದಂತಾಗಿ ಯಾವುದೋ ಒಂದು 'ಭಾರಿ' ಪ್ರಸಂಗ ಮೈಮೇಲೆ ಬಂದಂತಾಗುತ್ತದೆ. ಮಾಧವನ ಈ ಹೇಳಲಾರದ ಸಂಕಟವನ್ನು ಕಂಡು, ಬೇಸತ್ತ ಅರುಣಾ ಮಾತಿಗಾರಂಭಿಸಿದಳು:

"ಯಾಕೆ, ನಮ್ಮ ಪರಿಚಯ ಮರೆತೇ ಹೋಯಿತೇ ? "

ಮಾಧವನಿಗೆ ಇದು ಅನಿರೀಕ್ಷಿತವಾಗಿದ್ದರೂ ಅಪೇಕ್ಷಿತವಾಗಿತ್ತು.

"ಹಾಗೇನಿಲ್ಲ ಅರುಣಾಬಾಯಿ, ನೀವು ಈಗ ನನ್ನನ್ನು ಮರೆತಿರಬೇಕೆಂದು ಕೊಂಡಿದ್ದೆ" ಎಂದು ನಗೆ ತಂದುಕೊಂಡು ಉತ್ತರಿಸಿದ.

"ನಾನು ಅಷ್ಟು ದೊಡ್ಡ ವ್ಯಕ್ತಿಯಾಗಿಲ್ಲ. ನಾಳಿನ ಪಂದ್ಯಾಟಗಳನ್ನು ನೋಡಲು ನಾವು ಬರಬಹುದೋ ? " ಎಂದು ಕೇಳಿದಳು.

ತಪ್ಪು ನೆನಪಾದವನಂತೆ ಮಾಧವ ಉತ್ತರಿಸಿದ :

"ನೀವು ಅವಶ್ಯ ನೋಡಲು ಬರಬೇಕು. ಕಾಲೇಜು ಬಿಟ್ಟಮೇಲೆ ನೀವು ಒಮ್ಮೆಯೂ ಆ ಕಡೆಗೆ ಬಂದಂತಿಲ್ಲ. ಕಲಿತ ಕಾಲೇಜಿನ ಕಡೆಗೆ ಯಾವಾಗಲಾದರೂ ಬರುತ್ತಿರಿ."

ಕೈಗಡಿಯಾರದಲ್ಲಿ ವೇಳೆಯನ್ನು ನೋಡಿಕೊಂಡು ಸಾಕಾಗಿತ್ತು ಸುಧಾಕರನಿಗೆ. ಅರುಣಳ ಮಗ್ಗುಲಲ್ಲಿ ನಿಂತ ಕರುಣಳ ಸ್ಥಿತಿಯಂತೂ ದೇವರೇ ಬಲ್ಲ.

ಅವರೆಲ್ಲ ಹರಟುವದನ್ನು ಕೇಳಿದ್ದಾಯ್ತು. ಬೀದಿಯಲ್ಲಿ ಹಾಯ್ದುಹೋದ ಕಾರು ಗಳನ್ನು ಎಣಿಸಿದ್ದಾಯ್ತು. ಚಿತ್ರಮಂದಿರದೆಡೆಗೆ ದೃಷ್ಟಿ ಹಾಯಿಸಿದಳು. ದೂರ ದಲ್ಲಿ ಮಿನುಗುವ ತಾರೆಗಳತ್ತ ನೋಡುತ್ತ ನಿಂತಳು.

ಕೊನೆಗೆ "ಇನ್ನೂ ಚಿತ್ರಪಟ ಪ್ರಾರಂಭವಾಗುವದಕ್ಕೆ ವೇಳೆಯಿದೆ. ಚಹ ತೆಗೆದುಕೊಳ್ಳಬಹುದಲ್ಲ? ನಡೆಯಿರಿ" ಎಂದು ಗಣಪತರಾಯರು ಮುಂದಾದರು.

ಎಲ್ಲರೂ 'Hotel Green' ಪ್ರವೇಶಿಸಿದರು.

ಐದು ಒಳ್ಳೆ ಕಾಫಿ ತರಲು ಹೇಳಿ ಮಾಧವ ಮಾತಿನೆಳೆಯನ್ನೆತ್ತಿದ:

"ಅಲ್ಲ, ಅರುಣಾಬಾಯಿ, ನೀವು ಕಾಲೇಜ ಶಿಕ್ಷಣವನ್ನು ಮುಂದುವರಿಸ-ಲಿಲ್ಲವೇಕೆ?"

ಅರ್ಥಪೂರ್ಣವಾದ ದೃಷ್ಟಿಯಿಂದ ಪತಿಯೆಡೆಗೆ ನೋಡುತ್ತ ಅರುಣಾ ಉತ್ತರಿಸಿದಳು:

"ನನ್ನನ್ನು ಕೇಳುವದಕ್ಕಿಂತ ಇವರನ್ನು ಕೇಳಿದ್ದರೆ ಚೆನ್ನಾಗಿತ್ತು."

"ದೋಷವನ್ನು ನನ್ನ ತಲೆಗೇ ಕಟ್ಟುತ್ತಿದ್ದಾಳೆ ನೋಡಿರಿ ಮಾಧವರಾವ್!" ಹೆಂಡತಿಯೆಡೆಗೆ ನಸುನಗುತ್ತ ನೋಡಿ ಹೇಳಿದ.

"ಕಲಿಯಬೇಕೆಂದು ಹಂಬಲವಿದ್ದರೂ ಅನುಕೂಲವೆಲ್ಲಿದೆ? ಕಲಿಯುವವ ರೆಲ್ಲ ಮದುವೆಯ ಪೂರ್ವದಲ್ಲಿಯೇ ಕಲಿತು ಬಿಡಬೇಕು. ಈಗ ನೋಡಿರಿ, ಮನೆಗೆಲಸ ಪೂರೈಸುವದರಲ್ಲಿಯೇ ಸಾಕುಬೇಕಾಗುವದು."

"ಅದೂ ಸರಿ ಅರುಣಾದೇವಿ." ಎಂದು ಮಾಧವ ತನ್ನ ಸಮ್ಮತಿಯನ್ನು ಸೂಚಿಸಿದ.

ಹೆಂಡತಿಯನ್ನು ತುಸು ಕೆಣಕಬೇಕೆಂದು ಗಣಪತರಾಯ, "ಇದೆಲ್ಲ ಶುದ್ಧ ನೆವ ಮಾಧವರಾವ್. ಕಲಿಯಬೇಕೆಂದರೆ, ಮನಸ್ಸಿದ್ದರೆ ಯಾವುದು ಅಸಾಧ್ಯ? ಕಾಲೇಜಿಗೆ ಹೋಗಿಯೇ ಕಲಿಯಬೇಕೆಂಬುದಾದರೂ ಎಲ್ಲಿದೆ? ಮನೆಯಲ್ಲೆ ಪುಸ್ತಕಗಳನ್ನು ಓದಬಹುದಲ್ಲ? ತನ್ನ ಅಭಿರುಚಿಯ ಪುಸ್ತಕ ಗಳು ಬೇಕಾದಷ್ಟಿವೆ ಮನೆಯಲ್ಲಿ. ಹತ್ತಾರು ಪತ್ರಿಕೆಗಳನ್ನು ತಂದಿಟ್ಟಿರುತ್ತೇನೆ. ಒಂದನ್ನಾದರೂ ಕಣ್ಣೆತ್ತಿ ನೋಡುವದಿಲ್ಲ ಇವಳು. ಬೇಸರ ಬಂದಾಗ ನೆರೆಮನೆ ಯವರೊಂದಿಗೆ ಹರಟೆಕೊಚ್ಚುತ್ತಾಳೆ. ಒಟ್ಟಿನ ಮೇಲೆ ಹೇಳಲಾ? ಇವರೆಲ್ಲ ಪರೀಕ್ಷೆಗಾಗಿ ಓದುವವರು."

"ಆಹಾ! ನೀವು ಅವಕಾಶಕೊಟ್ಟರಲ್ಲವೇ ನಾನು ಓದುವದು? ಮಗುವಿನಂತಿದ್ದೀರಿ ನೀವು. ನಿಮ್ಮ ಸ್ನಾನ, ಚಹ, ಬಟ್ಟೆ ಆರಿಸಿ ಕೊಡುವದು, ಊಟ – ಇವುಗಳ ಮೇಲ್ವಿಚಾರಣೆ ಮಾಡುವದರಲ್ಲಿಯೇ ನನ್ನ ಅರ್ಧ ದಿನ ಕಳೆಯುತ್ತದೆ." ಎಂದು ವಿನೋದವಾಗಿ ಹೇಳಿ ಅರುಣಾ, ಮತ್ತೆ ಮಾತು ಮುಂದರಿಸಿದಳು:

"ಅದೇಕೆ, ಇವರು ಮರೆತ ಸಾಮಾನುಗಳನ್ನೆಲ್ಲ ನಾನು ಹುಡಿಕಿಟ್ಟಿರಬೇಕು. ಇವರ P. A. ಆದಂತಾಗಿದ್ದೇನೆ ನಾನು! ಮೇಲೆ ಈ ತಂಗಿಯೊಬ್ಬಳು. ಅವಳೂ ಇವರಿಗಿಂತ ನೂರು ಪಾಲು ಆಲಸಿ. ಅವಳನ್ನು ಅಣಿಗೊಳಿಸಿ ಕಾಲೇಜಿಗೆ ಕಳಿಸಬೇಕಾದರೆ ಸಾಕುಸಾಕಾಗಿ ಹೋಗುತ್ತದೆ. ಇನ್ನು ಅವಕಾಶವೆಲ್ಲಿ ಹೇಳಿರಿ ಓದಲು? ಎಂದಾದರೊಮ್ಮೆ ಬಿಡುವು ಸಿಕ್ಕಾಗ ಚಿತ್ರಪಟಕ್ಕೆ ಕರೆದೊಯ್ಯುತ್ತಾರೆ" ಎಂದು ಅರುಣಾದೇವಿ ಹೇಳುತ್ತಿರುವಾಗ, ಪ್ರಸಂಗ ತನ್ನ ಕಡೆಗೇಕೆ ಹೊರಳಿತೋ ಎಂದು ಕರುಣಾ ಮುಖವೆತ್ತಿದಳು.

ಈ ವರೆಗಿನ ಮಾತುಗಳ ಕಡೆಗೆ ಅವಳ ಗಮನವಿದ್ದಂತಿರಲಿಲ್ಲ. ಏನೂ ತಿಳಿಯದಂತಾಗಿ ಅಕ್ಕನೆಡೆಗೆ ನೋಡಿದಳು ಅಷ್ಟೆ.

ಮೈಮರೆಯುವದು ಕರುಣಳ ಸ್ವಭಾವ. ಪರಿಚಿತರ ಮಧ್ಯದಲ್ಲಿ ಕುಳಿತಿದ್ದರೂ ಅವಳು ಮಾತನಾಡುವದು ಕಡಿಮೆ. ಅವಳಿಗೆ ಹೊರಗಿನ ಪ್ರಪಂಚಕ್ಕಿಂತ ಒಳಗಿನ ಪ್ರಪಂಚವೇ ಇಷ್ಟವಾಗಿತ್ತು. ಕನಸು ಕಾಣುವ ವಯಸ್ಸು ಅವಳಿಗೆ. ಯಾವಾಗಲೂ ಕಾವ್ಯ, ಕತೆಗಳಲ್ಲಿಯ ರಸಸೃಷ್ಟಿಯ ಮಧುರ ನೆನಹಿನ ಲೋಕದಲ್ಲಿಯೇ ಇರುತ್ತಿದ್ದಳು. ಚೆಲ್ಲುವರಿದ ಪ್ರಕೃತಿ, ನಭದಿಂದ ಸುರಿದ ಸಂಗೀತದ ಅಮೃತಧಾರೆಯಲ್ಲಿ ಅವಳು ತನ್ನ ಮನವನ್ನು ತೇಲಿಬಿಡುತ್ತಿದ್ದಳು ಅಷ್ಟು ಭಾವನಾಜೀವಿಯವಳು. ಮುಗ್ಧವಾದ ಕೋಮಲ ಭಾವನೆಗಳ ನಾಡಿನಲ್ಲಿರುವ ಕರುಣಾ ಈ ಪ್ರಸಂಗದಲ್ಲಿಯಂತೂ ಪೂರ್ತಿಯಾಗಿ ತನ್ನ ಪ್ರಿಯ ಪ್ರಪಂಚದಲ್ಲಿ ವಿಹರಿಸುತ್ತ ಬಹುದೂರ ತೇಲಿ ಹೋಗಿದ್ದಳು.

ಇವರ ಸಂಭಾಷಣೆಯಲ್ಲಿ ಭಾಗವಹಿಸಬೇಕೇ?... ಹೇಗೆ?

ಇಬ್ಬರೂ ಅಪರಿಚಿತರು. ತನ್ನ ಪರಿಚಯವನ್ನಾದರೂ ಅಕ್ಕ ಮಾಡಿಕೊಟ್ಟಿದ್ದರೆ, ಶಿಷ್ಟಾಚಾರಕ್ಕಾಗಿ ನಮಸ್ಕಾರ ಹೇಳಿ, ಅವರ ಮಾತಿನೆಡೆಗೆ ಗಮನವಿದ್ದವರಂತೆ ನಟಿಸಬಹುದಾಗಿತ್ತು.

ಮಾಧವರಾಯರು ತಮ್ಮ ಮನೆಗೆ ಬಂದುದನ್ನು ಒಮ್ಮೆ ನೋಡಿದ್ದರೂ

ಅವರು ಅಪರಿಚಿತರು. ಇನ್ನು ಸುಧಾಕರ? ಆತನಂತೂ ತೀರ ಅಪರಿಚಿತ. ಅಪರಿಚಿತರಿರುವಲ್ಲಿ ಅವಳಿಗೆ ಮಾತನಾಡಲು ಬಾರದು. ಅದು ಅವಳ ಬಿಂಕದ ಸ್ವಭಾವವಲ್ಲ; ಹುದುಗಿಕೊಳ್ಳುವ ಮುಗ್ಧ ಸ್ವಭಾವ.

ಅಷ್ಟು ಎತ್ತರವಿಲ್ಲದ ಅವಳ ನಿಲುವಿಕೆಗೆ ಅನುಗುಣವಾಗಿ ಅವಳ ಮೈಯು ಮಾಟವಿತ್ತು. ನೀಳ ಜಡೆಯಲ್ಲಿ ಅರಳಿದ ಒಂದೇ ಒಂದು ಗುಲಾಬಿ ಹೂ ಅವಳ ನಿರಾಡಂಬರ ಸ್ವಭಾವವನ್ನು ಸೂಚಿಸುತ್ತಿತ್ತು.

ಗೌರವರ್ಣದ ಅವಳ ದೇಹಕ್ಕೆ ನೂಪುರರವದಿಂದ ಅಡಿಯಿಡುತ್ತಿದ್ದ ಯೌವನವಸಂತ ಸಂಜೆಯ ರಾಗವನ್ನು ತಂದಿತ್ತು. ಹೂವಿನ ಮಧುವಿಗೆ ಎಳಸಿ ಬಂದ ಮಧುಕರ ಹೂವಿನತ್ತ ಸುಳಿಯಲಾಗದೆ, ಅದರಿಂದ ದೂರ ಹೋಗಲೂ ಆಗದೇ, ಚಂಚಲವಾಗಿರುವಂತಿದ್ದವು ಅವಳ ಕಣ್ಣಗೊಂಬೆಗಳು. ಅವಳ ಕಂಗಳಲ್ಲಿ ಸುಧೆಯ ಲೋಕವನ್ನು ಸುತ್ತಿಬರುವ ಸ್ವಪ್ನದ ಭಾವವಿತ್ತು. ನೋಡುವವರ ಮನವನ್ನು ತಟ್ಟನೆ ಸೆಳೆಯುವಂತಿತ್ತು ಅವಳ ಚೆಲುವು.

ದೂರದಿಂದ ಸುರಿದು ಧರೆಗಿಳಿದ ಇಂದುವಿನ ಹಾಲುಬೆಳಗಿನತ್ತ ನೋಡುತ್ತ ಕುಳಿತಿದ್ದಳು. ಅವಳ ಹೃದಯವನ್ನು ಮೃದುವಾಗಿ ತಟ್ಟಿ ಮೇಲಕ್ಕೆತ್ತುವಂತೆ ಗಾನದ ಅಲೆಯೊಂದು ಸುಳಿಯಿತು. ಆ ಅಲೆಯ ಸುಳಿಯ ಹಿಡಿದು ಭಾವ ಸಮಾಧಿಯನ್ನು ಹೊಂದಿದಂತಿತ್ತು. ಚಂದ್ರನ ಬೆಳಗಿನಲ್ಲಿ ಬೆಳಗುವ ಶುಭ್ರ ಮೋಡದ ಸ್ವಾರಳಾಗಿ ಹೊರಟಂತೆ ತೋರುತ್ತಿತ್ತು.

ಈ ಅಂತರ್ಮುಖ ಭಾವನಾಪ್ರಪಂಚದಲ್ಲಿಯೇ ಸುಳಿಯಬಯಸುವ ಅವಳ ಈ ಸ್ವಭಾವ ತುಸು ವಿಚಿತ್ರವಾದುದೇನೋ ನಿಜ. ಆದರೆ ಇಂದಿನ ಈ ಪ್ರಸಂಗದಲ್ಲಿಯಂತೂ ಅದೇ ನೆರವಿಗೆ ಬಂದಿತ್ತು.

ಆದರೂ ಅವರು ಆಡುತ್ತಿರುವ ಮಾತುಗಳಲ್ಲಿ ಆಸಕ್ತಿ ತೋರಿಸುತ್ತಿದ್ದಳು. ಸುತ್ತಲು ಅದೇ ಅರಳುತ್ತಿರುವ ಅರಳುಗಳನ್ನು ಸಸ್ನೇಹಭಾವದಿಂದೊಮ್ಮೆ ನೋಡುವಳು. ಅಕ್ಕ, ಭಾವ, ಮಾಧವರ ಕಡೆಗೊಮ್ಮೆ ದೃಷ್ಟಿ ಹಾಯಿಸುವಳು.

ಎದುರಲ್ಲಿ ಕುಳಿತಿದ್ದ ಸುಧಾಕರನನ್ನು ನೋಡದಿರಲಾಗಲಿಲ್ಲ.

"ಓ! ಟೇಬಲ್-ಟೆನಿಸ್ ಆಟಗಾರರಲ್ಲವೇ ?"

ಹತ್ತು ನಿಮಿಷಗಳ ಹಿಂದೆ ಅವರೆಲ್ಲ ಮಾತನಾಡಿದಾಗ ಕಿವಿಗೆ ಬಿದ್ದಿತ್ತು ಈ ಮಾತು. ಆದರೂ ಅದನ್ನು ಕೇಳಿ ಅದೆಷ್ಟೋ ವರುಷಗಳಾದಂತೆನಿಸಿತು.

ಆ ಆಟಗಾರನತ್ತ ಸಂಕೋಚ, ಸಂಯಮಗಳಿಂದ ಕೂಡಿ ನೋಡಿದಳು.

ನಸುಗುಂಗರು ಕೂದಲು ಓರಣವಾಗಿ ಹಿಕ್ಕಿದ್ದರೂ ಗಾಳಿಗೆ ಚೆದುರಿದ್ದವು. ತಿಳಿಗೆಂಪು ಮುಖ, ಹವಣು ಎತ್ತರದ ಆಳು. ತೊಟ್ಟಿದ್ದ ಬಿಳಿ ಪ್ಯಾಂಟು, ತಿಳಿನೀಲವರ್ಣದ ಬುಶ್‌ಶರ್ಟುಗಳಲ್ಲಿ ಆತನ ಸುದೃಢ ಕಾಯ ತುಂಬಿ ಕಾಣಿಸಿಕೊಳ್ಳುತ್ತಿತ್ತು.

ಕರುಣಳಂತೆ ಆತನ ಕಂಗಳಲ್ಲಿ ಕನಸುಗಾರನ ಭಾವವಿರಲಿಲ್ಲ. ಮುಗಿಲೆತ್ತರಕೆ ಚಿಗಿಯುವ ಲತೆಯಾಗಿದ್ದರೂ ಅದರ ಬೇರು ನೆಲದಾಳದಲ್ಲಿದ್ದುದನ್ನು ಮರೆಯುತ್ತಿರಲಿಲ್ಲ ಆತನ ಭಾವನೆಗಳು. ಬದುಕನ್ನು ನೇರವಾಗಿ, ವಾಸ್ತವವಾಗಿ ಕಾಣುವ ನಿಶ್ಚಿಲತೆ ಆತನ ಮುಖದ ಮೇಲೆ ಎದ್ದು ತೋರುತ್ತಿತ್ತು.

ನಿಮಿಷ ಮಾತ್ರದಲ್ಲಿ ಸ್ನೇಹಿತರನ್ನಾಗಿ ಮಾಡಿಕೊಳ್ಳುವ ಸ್ಮಿತನಗೆ ಆತನ ತುಟಿಯಂಚಿನಲ್ಲಿ ಮಿನುಗುತ್ತಿತ್ತು.

ಕರುಣಳಂತೆ ಆತನಿಗೂ ಈ ಸನ್ನಿವೇಶ ಸಂಕಟಕ್ಕೀಡುಮಾಡಿತ್ತು. ಗಣಪತರಾಯರು, ಅರುಣಾ, ಮತ್ತು ಮಾಧವರು ತಮ್ಮ ತಮ್ಮ ಹಿಂದಿನ ದಿನಗಳನ್ನು ನೆನೆಯುತ್ತ ಮೋಜಿನಿಂದ ಹರಟುತ್ತಿದ್ದರು. ಕಾಲೇಜಿಗೆ ಸಂಬಂಧಿಸಿದ ವಿಷಯ ಯಾವುದಾದರೂ ಬಂದರೆ ಸುಧಾಕರ ತಾನೂ ಭಾಗವಹಿಸುತ್ತಿದ್ದ. ಉಳಿದ ವಿಷಯವೆಲ್ಲ ಆತನಿಗೆ ಸಂಬಂಧಿಸಿರುತ್ತಿರಲಿಲ್ಲ. ಹೀಗಾಗಿ ಆತನಿಗೆ ಏನು ಮಾಡಬೇಕೆಂಬುದು ತಿಳಿಯುತ್ತಿರಲಿಲ್ಲ.

ಕರುಣಳಂತೆ ಚಂದ್ರನತ್ತ ನೋಡಬೇಕೇ?

ಆತನ ದೃಷ್ಟಿಯಲ್ಲಿ ಚಂದ್ರನೆಂದರೆ ಒಂದು ಗ್ರಹ; ಸುರಮ್ಯ ಕನಸಿನ ಬಿಂಬವಲ್ಲ.

ಹೂಗಿಡಗಳ ಚೆಲುವಿನತ್ತ ನೋಡುವಾಗ ಆತನ ಭಾವನೆಗಳು ಆ ಹೂಗಳ ಬಣ್ಣ ವಾಸನೆಗಳನ್ನು ಮೀರಿ ಮುಂದಕ್ಕೆ ಓಡುತ್ತಿರಲಿಲ್ಲ. ತೇಲಿ ಬರುವ ಗೀತಲಹರಿಯಲ್ಲಿ ಇಳೆಯೆಲ್ಲ ವೀಣೆಯಾಗಿ ನುಡಿದಂತೆ ಹೇಗೆ ತೋರಬೇಕು ಆತನಿಗೆ? ಅರುಣಾಬಾಯಿಯ ಮಾತುಗಳಲ್ಲಿಯ ಆತ್ಮೀಯತೆ, ನಿರ್ಮಲ ಸ್ನೇಹದ ಭಾವನೆ ಕಂಡು ಬೆರಗಾಗಿದ್ದ. ಒಂದು ಮನೆಯವರಂತೆ ಮಾತನಾಡುತ್ತಿದ್ದ ಆ ಮೂವರನ್ನು ಕಂಡು ಆತನಿಗೆ ಮೊದಲು ಸೋಜಿಗವೆನಿಸಿದರೂ ಸಂತೋಷವಾಯ್ತು. ಅಕೃತ್ರಿಮ ರೀತಿಯಲ್ಲಿ ಸ್ನೇಹಿತರು ಮಾತನಾಡುವಾಗೆಲ್ಲ

ಸುಧಾಕರನಿಗೆ ಹೀಗೇ ಆಗುವದುಂಟು. ನಿರ್ಮಲವಾದ ಸ್ನೇಹ ಆತನ ದೃಷ್ಟಿ ಯಲ್ಲಿ ಬಹು ಬೆಲೆಯುಳ್ಳ ವಸ್ತುವಾಗಿತ್ತು.

ಅರಳಿದ ಗುಲಾಬಿಯನ್ನು ನೋಡುತ್ತಿರುವಂತೆಯೇ ಕರುಣಳತ್ತ ನೋಡಿದ. ಆ ನೋಟ ಸ್ವಾಭಾವಿಕವಾಗಿತ್ತು.

ಸುಧಾಕರನತ್ತ ನೋಡುತ್ತಿರುವಾಗಲೆಲ್ಲ ಅಪರಿಚಿತನಾಗಿದ್ದರೂ ಆತನ ವಿಷಯವಾಗಿ ಕರುಣಳ ಊಹೆ ಅಸ್ಪಷ್ಟ ಚಿತ್ರವನ್ನು ಬರೆದು ಆತನ ವ್ಯಕ್ತಿತ್ವಕ್ಕೆ ತನ್ನದೂ ಆದ ವರ್ಣವೈಖರಿಯನ್ನು ಬೀರುತ್ತಿತ್ತು.

ಸುಧಾಕರ ಆಟಗಾರ.

ನೆರೆದ ಸಾವಿರಾರು ಪ್ರೇಕ್ಷಕರೆದುರು ನೈಪುಣ್ಯ ತೋರಿಸಿದಾಗ ಜನರೆಲ್ಲ ಹೇಗೆ ಹರುಷ ಉತ್ಸಾಹಭರಿತರಾಗಬಹುದು? ಆಗ ಸುಧಾಕರ ಹೇಗೆ ಗೆಲು ವಿನ ಉಬ್ಬಿನಿಂದ ಆಡಬಹುದು? ಆ ಎದುರಾಳಿಯೊಡನೆ ರಭಸದ ಆಟ, ನಿರಾಸೆ ಉತ್ಸಾಹ, ಹರುಷ, ಗೆಲುವು—ಹೀಗೆ ಹಲವಾರು ಭಾವಗಳಲ್ಲಿ ಹಾಯ್ದು ಬರು ವಾಗ ಆತ ಹೇಗೆ ಕಾಣಬಹುದು?

ಕೊನೆಗೆ ಆಟದಲ್ಲಿ ಗೆದ್ದಾಗ ಮೆಚ್ಚಿ ಪ್ರಶಂಸಿಸುವ ವಿದ್ಯಾರ್ಥಿಗಳ ಮಧ್ಯ ದಲ್ಲಿ ನಸುನಗುತ್ತ ಹೇಗೆ ನಿಲ್ಲಬಹುದು? ಉತ್ಸಾಹದ ಉಬ್ಬಿನಲ್ಲಿ ಆತನನ್ನು ಗೆಳೆಯರು ಹೆಗಲ ಮೇಲೆ ಕೂಡಿಸಿಕೊಂಡು ಕುಣಿದಾಡಬಹುದು ಅಲ್ಲವೇ?

ತಾನೂ ನಾಳಿನ ಆಟವನ್ನು ನೋಡಲಿಕ್ಕೆ ಹೋಗಬೇಕು! ಸ್ಪರ್ಧೆಯನ್ನು ನೋಡಬೇಕು!

ಹೀಗೆ ಅನೇಕ ಕಲ್ಪನೆಯ ಚಿತ್ರಗಳು ಸುಳಿಸುಳಿದು ಹೋಗುತ್ತಿದ್ದವು.

ಕಾಫಿಯನ್ನು ಕುಡಿದು ಮುಗಿಸಿದ್ದರೂ ಅವರ ಹರಟೆಯಿನ್ನೂ ಮುಗಿದಿರ ಲಿಲ್ಲ. ಚಿತ್ರಮಂದಿರದ ಗಂಟೆ ಬಾರಿಸಿದಾಗ ಆ ಮೂವರಿಗೂ ಎಚ್ಚರ.

ಅಪರಿಚಿತರಂತೆ ಸುಮ್ಮನೆ ಕುಳಿತ ಈ ಇಬ್ಬರಿಗೂ ಆಗಲೆ ಎಚ್ಚರ.

ಮಗ್ಗುಲಲ್ಲಿ ಕರುಣಳು ಕುಳಿತ ಕಲ್ಪನೆ ಆಗ ಬಂದಿತು ಅರುಣಳಿಗೆ.

"ಮರೆತೇ ಬಿಟ್ಟಿದ್ದೇನಲ್ಲ ನಿನ್ನನ್ನು ಕರುಣಾ!" ಎಂದು ಮುಂದುವರಿದು ಮಾಧವನಿಗೆ ಸೂಚಿಸಿ ಹೇಳಿದಳು:

"ಇವಳು ಕರುಣಾ, ನನ್ನ ತಂಗಿ, ಈ ವರುಷ ಇಂಟರ ಕ್ಲಾಸಿನಲ್ಲಿದ್ದಾಳೆ." ಎಂದು ಪರಿಚಯ ಮಾಡಿಕೊಟ್ಟಳು.

ಮಾಧವ ವಿನಯದಿಂದ ಹೇಳಿದ:

"ನಮಸ್ಕಾರ, ನಿಮಗೆ ಮೌನ ಶಿಕ್ಷೆ ಕೊಟ್ಟುದಕ್ಕಾಗಿ ಕ್ಷಮಿಸಿರಿ."

ಕರುಣಾ ಅವನತಮುಖಿಯಾಗಿದ್ದಳು. ಮಾತನಾಡಲು ಬರಲಿಲ್ಲ. ಅಕ್ಕನ ಮರೆಯಲ್ಲಿ ನಿಂತಳು. ಕೃತಜ್ಞತೆಯ ಭಾವ ಮುಖದ ಮೇಲೆ ಮಿಂಚಿತು. "ಅದಕ್ಕಾಗಿ ನೀವು ಸುಧಾಕರನ ಕ್ಷಮೆಯನ್ನು ಬೇಡಬೇಕು" ಎಂದು ಗಣಪತ ರಾಯರು ಹೇಳಿದರು.

"ಅಂತೂ ಬಹಳ ದಿನಗಳನಂತರ ಮತ್ತೆ ಸೇರಿದೆವು; ಸಂತೋಷವಾಯ್ತು. ಹರಟೆಯಲ್ಲಿ ಹೊತ್ತು ಹೋದರೂ ತಿಳಿಯಲಿಲ್ಲ. ಬಿಡುವು ಮಾಡಿಕೊಂಡು ಮನೆಯ ಕಡೆಗೆ ಬರಬೇಕು. ನಿಮ್ಮ ಸ್ನೇಹಿತರನ್ನೂ ಕರೆದುಕೊಂಡು ಬರಬೇಕು" ಎಂದು ಹೇಳಿದಳು ಅರುಣಾ.

ಎಲ್ಲರೂ ಹೊರಟು ನಿಂತರು. ಚಿತ್ರಮಂದಿರದ ಸಮೀಪಕ್ಕೆ ಬಂದರು.

"ಒಳ್ಳೆಯದು ಗಣಪತರಾವ್, ನೀವು ಹೊರಡಿರಿನ್ನು, ನಮಸ್ಕಾರ! ಮತ್ತೊಂದು ಸಲ ಭೇಟಿಯಾಗೋಣ" ಎಂದು ಹೇಳಿ ಮಾಧವ ಅರುಣಾ ಬಾಯಿ ಗಣಪತರಾಯರನ್ನು ಬೀಳ್ಕೊಟ್ಟ.

ಹೋಗುವಾಗ ಔಪಚಾರಿಕವಾಗಿ ಸುಧಾಕರನೂ ನಮಸ್ಕರಿಸಿದ. ಕರುಣಾ ಮತ್ತೆ ಅಕ್ಕನ ಜೊತೆಯಲ್ಲಿಯೇ ನಿಂತಿದ್ದಳು.

ಸ್ನೇಹಿತರಿಬ್ಬರೂ ಹೋಗುವದನ್ನು ಕರುಣಾ ಒಂದು ಬಾರಿ ತಿರುಗಿ ನೋಡಿದಳು.

ಇಬ್ಬರೂ ಅಪರಿಚಿತರು!

ಸುಧಾಕರ....ತೀರ ಅಪರಿಚಿತ!

ಹೊತ್ತು ಆಗಲೆ ಬಹಳಾಗಿತ್ತು. ಪೇಟೆಗೆ ಹೋಗುವದನ್ನು ಬಿಟ್ಟು ಕಾಲೇಜಿನ ಕಡೆಗೆ ತಿರುಗಿದರು.

ಸಹಜ ಕುತೂಹಲದಿಂದ ಸುಧಾಕರ ಕೇಳಿದ:

"ಇವರ ಪರಿಚಯವೆಲ್ಲಿಯದು ನಿನಗೆ?"

"ನಾನು ಕಾಲೇಜಿಗೆ ಸೇರಿದಾಗ ಕೆಲವು ದಿನ ಹಾಸ್ಟೆಲಿನಲ್ಲಿರುತ್ತಿರಲಿಲ್ಲ ಇವರ 'out-house'ನಲ್ಲಿಯೇ ಒಂದು ಕೋಣೆಯಲ್ಲಿರುತ್ತಿದ್ದೆ. ಬಹಳ ಒಳ್ಳೆಯ ಜನ. ಅರುಣಾಬಾಯಿಯವರು ಒಂದು ವರುಷ ಕಾಲೇಜಿನಲ್ಲಿ ಅಭ್ಯಾಸ

ಮಾಡಿದ್ದಾರೆ. ಸುಸಂಸ್ಕೃತ ಮನೆ ಅವರದು. ಪರಿಚಯವಾದ ಕೆಲವು ದಿನಗಳಲ್ಲಿಯೇ ನಾನು ಅವರ ಮನೆಯವರಲ್ಲಿ ಒಬ್ಬನಂತಾದೆ. ಗಣಪತರಾಯರು ಇನ್ನೂ ಚಿಕ್ಕವರೇ. ನನಗಿಂತ ಎರಡು-ಮೂರು ವರುಷಕ್ಕೆ ಹಿರಿಯರಿರಬೇಕು ಅಷ್ಟೇ. ಈಗ ಅವರು ದಿನಪತ್ರಿಕೆಯೊಂದರಲ್ಲಿ ಉಪಸಂಪಾದಕರಾಗಿದ್ದಾರೆ." ದಾರಿ ಸಾಗುತ್ತಿತ್ತು. ನಡುನಡುವೆ ಸುಧಾಕರ 'ಹೂಂ'ಗುಡುತ್ತಿದ್ದ.

ಗಣಪತರಾಯರ ಪರಿಚಯವಾದಂದಿನಿಂದ ಎಲ್ಲ ಕತೆಯನ್ನು ವಿವರಿಸುತ್ತಿರುವಾಗ ಮಾಧವನಿಗೆ ಆ ಒಂದು ವರುಷದ ರಸನಿಮಿಷಗಳೆಲ್ಲ ಸ್ಮೃತಿಯಲ್ಲಿ ಮೂಡಿ ನಿಂತವು.

"ಅಚ್ಚುಕಟ್ಟುತನ, ಮಿತವ್ಯಯಗಳನ್ನು ಅವರಿಂದ ಕಲಿಯುವಂತಿಪಿ ನೋಡು" ಎಂದು ಸುಧಾಕರನಿಗೆ ಹೇಳಿದ.

ಇಬ್ಬರೂ ಹಾಸ್ಟೆಲ್ ಸೇರುವ ಹೊತ್ತಿಗೆ ರಾತ್ರಿ ಹತ್ತುಗಂಟೆಯಾಗಿತ್ತು. ಇಬ್ಬರೂ ತಮ್ಮ ರೂಮುಗಳಿಗೆ ತೆರಳಿದರು. ಸುಧಾಕರ ತನ್ನ ಕೋಣೆಯೊಳಗೆ ಬಂದ. ಹರೀಶ ನಿದ್ರೆ ಹೋಗಿ ಬಹಳ ಹೊತ್ತಾಗಿತ್ತು. ಸುಧಾಕರನಿಗೆ ಬೇಗನೆ ನಿದ್ರೆ ಬರಲಿಲ್ಲ. ಎದ್ದು ಕಿಟಕಿಯ ಬಾಗಿಲನ್ನು ತೆರೆದಿಟ್ಟ. ಚಂದ್ರನ ಬೆಳಕು ಒಳಗೆಲ್ಲ ಪಸರಿಸಿತು. ಎದ್ದು ಕಿಟಕಿಯಲ್ಲಿ ಕುಳಿತ. ಹೊರಗೆ ವಿಸ್ತಾರವಾದ ಹಾಲ್ಗಡಲನ್ನು ನೋಡುತ್ತ ಕುಳಿತುಕೊಂಡ. ಇನ್ನೂ ಕೆಲವು ಕೋಣೆಗಳಲ್ಲಿ ದೀಪಗಳು ಉರಿಯುತ್ತಿದ್ದವು. ಕೆಲವರಿನ್ನೂ ಹರಟುತ್ತಿದ್ದರು. ಅವರ ಅಸ್ಪಷ್ಟವಾದ ಮಾತುಗಳು, ನಡುನಡುವೆ ನಗೆ, ಕೇಳಿಬರುತ್ತಿದ್ದವು. ಸುಧಾಕರ ಹಾಗೆಯೇ ಎಷ್ಟೋ ಹೊತ್ತು ಕುಳಿತುಕೊಂಡಿದ್ದ ಬಾನನ್ನು ನೋಡುತ್ತ.

ಅದೇಕೋ ನಿದ್ದೆ ಬೇಗನೆ ಬರಲಿಲ್ಲ. ಮರುದಿನದ ಆಟ ಆತನ ಮನದಲ್ಲಿ ಕಾತರವನ್ನು ತುಂಬಿತ್ತು. ಅದಕ್ಕಾಗಿ ಅವನ ಮನಸ್ಸು ಅವನಿಗರಿಯದಂತೆಯೇ ತುಸು ಕಲಕಿದ್ದಿತು. ಹೀಗಾಗಿ ಒಂದು ಬಗೆಯ ಹೊಯ್ದಾಟ ನಡೆದಿತ್ತು.

ಕುಳಿತಂತೆ ತಟ್ಟನೆ ಸುಧಾಕರನಿಗೆ ತಂದೆ, ಮನೆ, ಊರು, ತಮ್ಮಂದಿರ ನೆನಪಾಯ್ತು. ಈ ಮೌನದಿರುಳಿನ ಏಕಾಂತ ಆತನನ್ನು ಬಹುವಾಗಿ ಪೀಡಿಸಿರಬೇಕು; ತಾನು ಬಿಟ್ಟು ಬಂದ ಹಳ್ಳಿ, ವೃದ್ಧ ತಂದೆ, ಚಿಕ್ಕ ತಮ್ಮಂದಿರು ಕಣ್ಣೆದುರು ಬಂದು ನಿಂತಂತಾಯ್ತು; ಹೃದಯ ಆ ನೆನಹುಗಳಲ್ಲಿ ಕಂಬನಿಗರೆಯಿತು; ತಾನು ತಾಯಿಯನ್ನು ಕಳೆದುಕೊಂಡಾಗ ತಮ್ಮಂದಿರಿಬ್ಬರೂ ತೀರ ಚಿಕ್ಕವರು.

ತಂದೆಯವರೊಬ್ಬರೇ ಈಗ ಆ ಹುಡುಗರನ್ನು ನೋಡಿಕೊಳ್ಳಬೇಕು. ಅವರಿಗೆ ಬರುವ ಅರವತ್ತು ರೂಪಾಯಿಗಳ ನಿವೃತ್ತಿವೇತನದಲ್ಲಿ ಮನೆತನ ಸಾಗಬೇಕು! ತನ್ನ ಶಿಕ್ಷಣವೂ ಅದರಲ್ಲಿಯೇ ಸಾಗಬೇಕು. ಇದ್ದಬಿದ್ದ ಆಸ್ತಿಯೆಂದರೆ ಒಂದೆರಡು ಹೊಲಗಳು, ಈಗ ಇರುತ್ತಿರುವ ಮನೆ, ಇವಿಷ್ಟರಲ್ಲಿಯೇ ನಾಲ್ವರ ಬದುಕು ಸಾಗಬೇಕು ಈ ಕಠಿಣ ದಿನಗಳಲ್ಲಿ.

ಆ ಅನಾಥ ತಮ್ಮಂದಿರಿಗೆ ತಂದೆಯೊಬ್ಬರೇ ಆಸರ! ತನ್ನ ಭವಿಷ್ಯದ ಮೇಲೆ ಅವರೆಷ್ಟು ಆಸೆ ಇಟ್ಟುಕೊಂಡಿದ್ದಾರೆ! ತನಗಾಗಿ ಅವರು ಈಗೆಷ್ಟು ನವೆಯುತ್ತಿದ್ದಾರೆ! ಬಡತನದ ವ್ಯಥೆಯನ್ನೆಲ್ಲ ಮರೆಸುವ ಹೆಂಡತಿಯಿದ್ದಳು! ಈಗ ತಂದೆಯ ಬದುಕು ಒಣಗಿ ನಿಂತ ಗಿಡದಂತೆ! ಮಕ್ಕಳೇ ಆಸೆಯ ಹಸುರೆಲೆಗಳು!....ಹೀಗೆಲ್ಲ ಮನೆಯ ಕತೆಯೆಲ್ಲ ನೆನಪಾಗಿ ಕಂಣೀರು ಚಿಮ್ಮಿತು. ಆ ಒಂದು ಕ್ಷಣ ಆತನಿಗೆ ದುರ್ಧರವಾಯ್ತು.

ತಾನು ಇನ್ನೆರಡು ವರುಷ ಪ್ರಯಾಸಪಟ್ಟು ಓದಬೇಕು ಎಲ್ಲಿಯಾದರೂ ಉದ್ಯೋಗ ದೊರಕಿಸಬೇಕು. ವೃದ್ಧ ತಂದೆಗೆ ವಿಶ್ರಾಂತಿಯನ್ನು ಕೊಡಬೇಕು. ತಮ್ಮಂದಿರನ್ನು ಮುಂದೆ ಓದಿಸಬೇಕು. ಆಗ ತನ್ನ ಮನೆ ಒಂದು ರೂಪ ತಾಳುವದು. ಇದೆಲ್ಲ ತನ್ನೊಬ್ಬನ ಮೇಲೇ ಅವಲಂಬಿಸಿದೆ. ಬಂದುದನ್ನೆದುರಿಸಿ ಮೊದಲು ತನ್ನ ಕರ್ತವ್ಯವನ್ನು ಪೂರೈಸಬೇಕು. ತನ್ನ ಮೇಲೆ ದೊಡ್ಡ ಹೊಣೆಯಿದೆ! ಅದು ತನ್ನ ಕರ್ತವ್ಯ.....

ಹೀಗೆ ಒಂದೇಸವನೆ ವಿಚಾರಗಳು ಧಾರೆಯಾಗಿ ಹರಿದವು. ದೀರ್ಘ ಉಸಿರನ್ನೊಂದು ಬಿಟ್ಟ. ಮೆಲ್ಲನೆ ಎದ್ದು ಬಂದು ಮಲಗಿಕೊಂಡ.

ಬೆಳಗಿನ ಶೀತಲಗಾಳಿಯ ಸ್ಪರ್ಶಕ್ಕೆ ಸುಧಾಕರ ಎಚ್ಚತ್ತಾಗ ಆರು ಗಂಟೆಯಾಗಿತ್ತು.

* * *

ಮರುದಿನ ಮಧ್ಯಾಹ್ನದ ವೇಳೆಗಾಗಲೆ ಕಾಲೇಜಿನ ಎದುರಿನ ಬಯಲಿನಲ್ಲಿ ಜನರು ಗುಂಪುಗುಂಪಾಗಿ ಸೇರತೊಡಗಿದರು. ವಿದ್ಯಾರ್ಥಿಗಳು ಉಡಿಗೆತೊಡಿಗೆಗಳಲ್ಲಿ ತಮ್ಮ ಅಭಿರುಚಿಯ ವೈವಿಧ್ಯವನ್ನು ತೋರಿದ್ದರು. ಅವರ ತೊಡಿಗೆಯಂತೆ ಕೇಶಾಲಂಕಾರದಲ್ಲಿಯೂ ವೈವಿಧ್ಯ, ವೈಚಿತ್ರ್ಯಗಳಿದ್ದವು. ಗುಂಪುಗುಂಪುಗಳಲ್ಲಿ ಕುಳಿತು ಹರಟುತಿದ್ದರು. ಸಾಕಷ್ಟು ಹಿರಿಯ ವಿದ್ಯಾರ್ಥಿಗಳಾಗಿದ್ದ ಕೆಲವರು

ಸಿಗರೇಟು ಸೇದುವದಂತೂ ತೀರ ಸಹಜ. ಜಿಮ್ನಾಸ್ಟಿಕ್ ಹಾಲಿನಲ್ಲಿಯೇ ಅಂದಿನ ಟೇಬಲ್-ಟೆನಿಸ್ ಕೊನೆಯ ಪಂದ್ಯಾಟ ನಡೆಯುವದಿತ್ತು.

ಕಾರ್ಯದರ್ಶಿ ಬಿಡುವಿಲ್ಲದೇ ಓಡಾಡುತಿದ್ದ. ಎಲ್ಲ ಸಿದ್ಧತೆ ಮಾಡುವದರಲ್ಲಿ ಮಗ್ನನಾಗಿದ್ದ ಆತ. ಮತ್ತೊಂದೆಡೆ ವಿದ್ಯಾರ್ಥಿನಿಯರು ತಮ್ಮ ತಮ್ಮ ಸ್ನೇಹಿತೆಯರನ್ನೊಡಗೂಡಿ ಕ್ರಿಕೆಟ ಮೈದಾನದ ಅಂಚಿಗಿರುವ ಗಿಡಗಳ ನೆರಳಿನಲ್ಲಿ ಕುಳಿತಿದ್ದರು. ಶೃಂಗಾರಸಾಧನದಲ್ಲಿ ಅವರನ್ನು ಮೀರಿದವರಾರು? ಬಿಸಿಲಲ್ಲಿ ಓಡಾಡುವ ವಿದ್ಯಾರ್ಥಿಗಳು ಇವರೆಡೆಗೆ ದೃಷ್ಟಿ ಬೀರಿ "ಹಾಯ್" ಎನ್ನುತ್ತಿದ್ದರು.

ಅಂದಿನ ಆಟವನ್ನು ನೋಡಲು ಊರಲ್ಲಿಯ ಉತ್ಸಾಹಿ ಯುವಕರು, ಶಾಲೆಯ ವಿದ್ಯಾರ್ಥಿಗಳು ಆಗಲೆ ಬಂದು ಸೇರಿದ್ದರು.

ಎಲ್ಲ ಕಡೆಗೂ ಉತ್ಸಾಹ ಉಕ್ಕಿ ಹರಿಯುತ್ತಿತ್ತು.

ಇತ್ತ ಹಾಸ್ಟೆಲಿನ ಪ್ರತಿಯೊಂದು ಕೋಣೆಯೂ "ನಾಟಕ ಗೃಹದಲ್ಲಿಯ 'Green Room' ನಂತೆ ಭಾಸವಾಗುತ್ತಿತ್ತು. ಹೆಚ್ಚು ಆಕರ್ಷಕವಾಗಿ ಕಾಣಿಸಿಕೊಳ್ಳಲು ಸ್ಪರ್ಧೆ ನಡೆದಂತಿತ್ತು. ಶ್ಯಾಮಲವರ್ಣದವರಂತೂ ಸ್ನೋ ಬಳಿದದ್ದೇ ಬಳಿದದ್ದು; ಪೌಡರ ತಿಕ್ಕಿದ್ದೇ ತಿಕ್ಕಿದ್ದು. ಇದೆಲ್ಲ ಸಫಲವಾಗಲಿಲ್ಲವೆಂಬುದು ಕೆಲಹೊತ್ತಿನಲ್ಲಿಯೇ ತಿಳಿದರೂ ಭ್ರಮೆ ಮಾತ್ರ ಕಡಿಮೆಯಾಗಲಿಲ್ಲ.

ಮಾಧವ ಹಾಸ್ಟೆಲ್ಲಿನ ಎದುರಿನ ಬಾಗಿಲ ಬಳಿ ಬಂದು ನಿಂತ. ಗಣಪತರಾಯರು ಬರುವವರಿದ್ದುದರಿಂದ ಅವರಿಗಾಗಿ ದಾರಿ ಕಾಯುತ್ತಲಿದ್ದ. ಹೊತ್ತು ಆಗಲೆ ನಾಲ್ಕು ಗಂಟೆಗೆ ಸಮೀಪಿಸಿತ್ತು. ಜನರು ಒಬ್ಬೊಬ್ಬರಾಗಿ, ಗುಂಪಾಗಿ ಒಳಗೆ ಬರುತ್ತಲೇ ಇದ್ದರು.

"ಯಾರನ್ನೊ ವಿಶೇಷವಾಗಿ ಹುಡುಕುತ್ತದೆಯಲ್ಲ ದೃಷ್ಟಿ?" ಎಂದು ಕೇಳುತ್ತ ಬಂದ ಶಶಿ, ಮಾಧವನ ಭುಜ ಅಲುಗಿಸಿ ನಿಂತುಕೊಂಡ.

ಆತನ ಜೊತೆಯಲ್ಲಿ ಬಂದವರು ಬಾಳಕೃಷ್ಣ ಮತ್ತು ಗೋಪಾಲ.

ಶಶಿ ನೇರವಾಗಿ ಮಾತನಾಡುವದನ್ನು ಕಲಿತಿರಲೇ ಇಲ್ಲ. ಚೇಷ್ಟೆಯ ಮಾತಿನಲ್ಲಿ ಅನೇಕ ಬಾರಿ ಕುತ್ಸಿತ ಟೀಕೆಯನ್ನೊ, ವ್ಯಂಗ್ಯವನ್ನೊ ಸೇರಿಸಿ ಮಾತನಾಡುವದೇ ಆತನ ಸ್ವಭಾವ. ಸಂಭಾವಿತರನ್ನು, ಪುಕ್ಕರನ್ನು ಕಂಡರಂತೂ ಅವರನ್ನು ಕೆಣಕದೆ ಎಂದೂ ಬಿಡುತ್ತಿರಲಿಲ್ಲ. ಕುಚೇಷ್ಟೆ ಮಾಡುವಲ್ಲಿ ಆತನಿಗೆ ಸಾಟಿಯಾಗುವವರು ಕಡಿಮೆ. ಅಣಕದ ಹೆಸರಿಡುವದರಲ್ಲಿ, ವಿದ್ಯಾರ್ಥಿನಿಯರನ್ನು

ವರ್ಣಿಸುವದರಲ್ಲಿ ಆತ ಮಿಗಿಲು. ಪುಸ್ತಕದಲ್ಲಿ ಓದಿದ ಹೆಸರುಗಳನ್ನೆಲ್ಲ ಯಥಾ ಯೋಗ್ಯವಾಗಿ ಒಬ್ಬೊಬ್ಬರಿಗೆ ಅಂಟಿಸುತ್ತಿದ್ದ. ಶ್ರೀಮಂತರ ಮಗ. ವಿನೋದ ವಿಹಾರಗಳಿಗಾಗಿ ಆತ ಕಾಲೇಜಿಗೆ ಬರುತ್ತಿದ್ದ. ಕ್ಲಾಸಿನಲ್ಲಿ, ಆಟದ ಬಯಲಿ ನಲ್ಲಿ ಕೆಫೆಯಲ್ಲಿ,– ಎಲ್ಲಿ ಹೋದರೂ ಆತನು ಇರಬೇಕು. ಅಂದರೇನೇ ಕಳೆ ಗಟ್ಟುತ್ತಿತ್ತು.

ಜೊತೆಯಲ್ಲಿ ಬಂದ ಬಾಳಕೃಷ್ಣ ಗೋಪಾಲರಿಬ್ಬರೂ ಆತನ ಆಪ್ತ-ಸಚಿವರು. ಅವರ ಕಿಸೆ ಯಾವಾಗಲೂ ಬರಿದೇ ಇರುತ್ತಿತ್ತು. ಶಶಿಯ ಬೆಂಬಲಿಗ ರಾಗಿ, ಆತನು ಮಾಡುವ ಕುಚೋದ್ಯಗಳಿಗೆಲ್ಲ ನೀರೆರೆದು, ಸದಾ ಬೆಂಗಾವಲಿಗ ರಂತೆ ಇರುತ್ತಿದ್ದರು, ಅಂತರಂಗದಲ್ಲಿ ಶಶಿಯನ್ನು ಮೆಚ್ಚುತ್ತಿದ್ದರೋ ಇಲ್ಲವೋ ಹೇಳಲು ಬಾರದು.

ಜಾ:ನಿಯ ಕೊರಳ ಗೆಳೆಯನಾದ ಶಶಿ ಮಾತನಾಡಿಸಿದಾಗ ಮಾಧು ಏನೆಂದು ಉತ್ತರಿಸಬೇಕು ?

"ನನ್ನ ಸ್ನೇಹಿತರೊಬ್ಬರು ಬರುವವರಿದ್ದಾರೆ" ಎಂದಿಷ್ಟೆ ಹೇಳಿದ.

"ಸ್ನೇಹಿತನೇ ! ಹಃ !" ಎಂದು ತಿರಸ್ಕಾರದ ಧ್ವನಿಯಲ್ಲಿ ನಕ್ಕು, "ಸುಧಾಕರರೇನೆನ್ನುತ್ತಿದ್ದಾರೆ ? ಇವತ್ತು ಅವರ ಬಣ್ಣ ಹೊರಬೀಳಲಿದೆ" ಎಂದು ನಯವಾಗಿ ಆದರೂ ಮೊನಚಾಗಿಯೇ ಹೇಳಿದ.

"ಅದೃಷ್ಟವಿದ್ದರೆ 'Love set' ತಪ್ಪಿಸಿಕೊಳ್ಳಬಹುದು ಅಷ್ಟೆ" ಎಂದು ಬಾಳಕೃಷ್ಣ ಅದೃಷ್ಟವನ್ನು ಕಂಡವನಂತೆಯೇ ಹೇಳಿದ.

ಇವರಿಗೆ ಉತ್ತರ ಕೊಟ್ಟರೆ ಮಾತಿಗೆ ಮಾತು ಬೆಳೆದೀತೆಂದು ಮಾಧವ ಸುಮ್ಮನೇ ಇದ್ದ.

"ನೀವೂ ಬರುತ್ತೀರಲ್ಲವೇ ? ಮತ್ತೆ ಭೆಟ್ಟಿಯಾಗೋಣ" ಎಂದು ಶಶಿ ಮುಂದುವರಿಯುತ್ತಿರುವಷ್ಟರಲ್ಲಿಯೇ ಹಿಂದಿನಿಂದ ನಾಲ್ಕಾರು ಜನರ ಗುಂಪು ಬಂದಿತು.

"ಓ ! ಶ–ಶ್ಯೀ!" ಎಂದು ವಿಶಿಷ್ಟ ಶೈಲಿಯಲ್ಲಿ ಕೂಗಿದ, ಆ ಗುಂಪಿನ ಮಧ್ಯದಲ್ಲಿ ಠೀವಿಯಿಂದ ನಡೆದು ಬರುತ್ತಿರುವ ಜಾ:ನಿ.

ಶಶಿ ಹಿಂತಿರುಗಿ ನೋಡಿ "ಹೊ ! ಜಾ:ನಿ ! ಮೇರೀ ಜಾನ್ !" ಎಂದು ಸ್ನೇಹದ ಉನ್ಮಾದ ತುಂಬಿದವನಂತೆ ಭರದಿಂದ ಆತನೆಡೆಗೆ ಧಾವಿಸಿ ಭದ್ರವಾಗಿ

ಕೈ ಕುಲುಕಿದ. ಜಾ:ನಿಯೆದುರು ನಿಂತಾಗ ಶಶಿ ಹುಲಿಯೆದುರಿಗೆ ನಿಂತ ಕುರಿ ಯಂತೆ ಕಂಡ. ಜಾ:ನಿ ಹುಲಿಯಂತೆ ಬಲಶಾಲಿಯೂ ಅಹುದು, ಗಂಭೀರನೂ ಅಹುದು. ಅದಕ್ಕಿಂತ ಮಿಗಿಲಾಗಿ ಹುಲಿಯ ಕ್ರೌರ್ಯ ಆತನ ಕಂಣುಗಳಲ್ಲಿ ಮಿಂಚುತ್ತಿತ್ತು. ಒಳಗೊಂದು ಕೇಸರಿವರ್ಣದ 'Sport Shirt' ತೊಟ್ಟಿದ್ದ. ಅದರ ಮಧ್ಯಭಾಗದಲ್ಲಿ 'J' ಎಂದು ರೇಶಿಮೆಯ ದಾರದಿಂದ ಹೆಣೆದಿತ್ತು. ಮೇಲೆ ಕಂದು ಬಣ್ಣದ ಟ್ವೀಡ್ ಕೋಟು, ಶುಭ್ರ ಬಿಳಿಯ ಸಿಲ್ಕಿನ ಪ್ಯಾಂಟು ತೊಟ್ಟಿದ್ದ. ಮೈ ಬಿಗಿಯುವ ಆತನ ಉಡಿಗೆಯಲ್ಲಿ ಆತನ ಉಕ್ಕಿನ ದೇಹ ಎದ್ದು ಕಾಣುತ್ತಿತ್ತು.

ಗುಂಪು ದೊಡ್ಡದಾಯಿತು. ಜಾ:ನಿಯ ಅನುಚರನೊಬ್ಬನ ಕೈಯಲ್ಲಿ ರ್‍ಯಾಕೆಟ್ಟಿನ ಚೀಲವಿತ್ತು. ಜಟ್ಟಿಯ ಹಿಂದೆ ಬರುವ ಅನುಚರರಂತೆ ಅವರೆಲ್ಲ ಹಿಂಬಾಲಿಸಿದ್ದರು. ಮುಖದಲ್ಲಿ ಅಧ್ಯೈತೆ, ಸೆಟೆದ ಎದೆಯಲ್ಲಿ ಆನೆಯ ಗಂಡ ಸ್ಥಳವನ್ನು ಸೀಳುವೆನೆಂಬ ಉಕ್ಕು, ಇಡುವ ಹೆಜ್ಜೆಯಲ್ಲಿ ಇಂದಿನ ಗೆಲುವು ನನ್ನದೇ ಎಂಬ ಅಚಲ ಧೃತಿಗಳಿದ್ದವು.

ಮಾಧವನತ್ತ ಓರೆನೋಟ ಬೀರಿ ಮುಂದೆ ಸಾಗಿದ ಜಾ:ನಿ. ಪಾನಿಪತ್ತದಲ್ಲಿ ಎದುರಾಗುವ ಶತ್ರುಪಕ್ಷದ ಸೇನಾನಿಯನ್ನು ನೋಡುವ ವಕ್ರತೆಯಿತ್ತು ಅವನ ಆ ನೋಟದಲ್ಲಿ.

ಆ ಗುಂಪು ಮುಂದೆ ನಡೆಯಿತು. ಗಣಪತರಾಯರು ಇನ್ನೂ ಏಕೆ ಬರ ಲಿಲ್ಲವೆಂದು ಆಲೋಚಿಸುತ್ತ ನಿಂತಿರುವಾಗಲೆ ದೂರದಲ್ಲಿ ಕಾಣಿಸಿಕೊಂಡರು.

ಗಣಪತರಾಯರು ಅರುಣಾ ಬರುತ್ತಿದ್ದರು. ಜೊತೆಯಲ್ಲಿ ಅರುಣಳ ತಂಗಿ ಕರುಣಾ ಇದ್ದಳು. ಮೂವರನ್ನೂ ಕರೆದುಕೊಂಡು ತನ್ನ ಕೋಣೆಯತ್ತ ನಡೆದ. ದಾರಿಯಲ್ಲಿದ್ದ ಸುಧಾಕರನ ಕೋಣೆಯ ಎದುರಿಗೆ ನಿಂತು "ಸುಧಾಕರ್, ನಾನು ರೂಮಿನಲ್ಲಿರುತ್ತೇನೆ. ಬೇಗ ಬಂದುಬಿಡು." ಎಂದು ಹೇಳಿ ನಡೆದ.

"ಅಚ್ಛಾ:" ಎಂದಿಷ್ಟೆ ಒಳಗಿನಿಂದ ಉತ್ತರ ಬಂದಿತು.

ನಾಲ್ವರೂ ಕೋಣೆಗೆ ಬಂದರು.

ಅಂದು ವಿಶೇಷ ಶ್ರಮ ವಹಿಸಿ ಕೋಣೆಯನ್ನು ಅಚ್ಚುಕಟ್ಟಾಗಿರಿಸಿದ್ದ. ಅಸ್ತವ್ಯಸ್ತವಾಗಿ ಹರಡಿದ ಪುಸ್ತಕ, ಕಾಗದ, ಮಾಸಿದ ಬಟ್ಟೆಗಳನ್ನೆಲ್ಲ ಸರಿ ಯಾಗಿರಿಸಿದ್ದ. ಒಂದೆರಡು ನಿಮಿಷ ಕೂಡಲು ಹೇಳಿ, ಅರಿವೆ ಬದಲಾಯಿಸಿ

ಓರಣವಾಗಿ ಹಿಕ್ಕಿಕೊಂಡು ಬಂದ.

"ನಿಮಗೆ ಬಹಳ ತೊಂದರೆಯಾಯಿತು" ಎಂದರು ಗಣಪತರಾಯರು.

"ತೊಂದರೆಯೇನು ? ನಿಮಗೆ ಕೋಣೆ ಗೊತ್ತಿದ್ದಿಲ್ಲವಾದ್ದರಿಂದ ಬಂದಿದ್ದೆ. ಅತಿಥಿಗಳನ್ನು ಸ್ವಾಗತಿಸಬೇಡವೇ ?" ಎಂದು ಮುಗುಳ್ನಗೆ ನಕ್ಕ.

ಅಷ್ಟರಲ್ಲಿ "ಮಾಧವ!" ಎಂದು ಬಾಗಿಲ ಬಳಿ ಯಾರೋ ಕೂಗಿದ್ದು ಕೇಳಿಸಿತು. ಸುಧಾಕರನಿರಬೇಕೆಂದು "ಒಳಗೆ ಬಾ" ಎಂದು ಮಾಧವ ಒಳಗಿನಿಂದಲೇ ಹೇಳಿದ.

ಬಾಗಿಲನ್ನು ಅರೆತೆರೆದು ಸುಧಾಕರ ಒಳಗೆ ಕಾಲಿಟ್ಟು "ಇಲ್ಲ, ಹೊರಗೆ ಸ್ನೇಹಿತರಿದ್ದಾರೆ ನಾಲ್ಕೆಂಟು ಜನ. ನಾನು ಮುಂದೆ ಹೋಗಿರಲಾ ?" ಎಂದು ಕೇಳಿದ.

"ನಮ್ಮಗೇನು ಕೆಲಸವಿದೆ ಇಲ್ಲಿ ? ನಾವೂ ಹೊರಟೆವು." ಎಂದು ಎಲ್ಲರೂ ಹೊರಗೇ ಬಂದರು.

ತೀರ ಸಾದಾ ಉಡುಪಿನಲ್ಲಿ ಸುಧಾಕರ ನಡೆದಿದ್ದ. ಅದೇ ಸ್ನಾನಮಾಡಿದ್ದುದರಿಂದ ಮುಖ ಕಳೆಗೊಂಡಿತ್ತು.

* * *

ಆ ವಿಶಾಲ ಕಟ್ಟಡವು ನಿರೀಕ್ಷೆಗಿಂತ ಹೆಚ್ಚಾಗಿಯೇ ಜನರಿಂದ ತುಂಬಿತ್ತು. ಉಳಿದ ಪಂದ್ಯಾಟಗಳು ಅದೇ ಕಾಲಕ್ಕೆ ನಡೆಯುತ್ತಿದ್ದರೂ ಇಲ್ಲಿಯೇ ಹೆಚ್ಚು ಜನ ಸೇರಿದ್ದರು. ಇವರು ಒಳಗೆ ಕಾಲಿಟ್ಟೊಡನೆ ಲಯಬದ್ಧವಾಗಿ ವಿದ್ಯಾರ್ಥಿಗಳು ಚಪ್ಪಾಳೆ ಬಡಿಯಲು ಪ್ರಾರಂಭಿಸಿದರು.

ಕುಳಿತಲ್ಲಿಂದಲೇ ಸ್ವಾಗತವನ್ನು ಕೋರುವ ಕಂಗಳನ್ನೆಲ್ಲ ನೋಡಿ ಸುಧಾಕರನ ಮೈ ಪುಲಕಿತವಾಯಿತು.

ಒಂದು ಬದಿಯಲ್ಲಿ ತನ್ನ "ಶಿಷ್ಯ"ರೊಂದಿಗೆ ನಿಂತಿದ್ದ ಜಾ:ನಿ. ಅಂಕಕ್ಕೆ ಇಳಿಯುವ ಹುಂಜನ ಬಿಂಕ ಆತನ ನಿಲುವಿಕೆಯಲ್ಲಿತ್ತು.

ಮಾಧವ, ಗಣಪತರಾಯರನ್ನು ಸಮೀಪದ ಕುರ್ಚಿಯಲ್ಲಿ ಕೂಡಿಸಿದ. ಸ್ತ್ರೀಯರಿಗಾಗಿರಿಸಿದ ಪ್ರತ್ಯೇಕ ಆಸನಗಳತ್ತ ಹೋಗಿ ಅರುಣಾ ಮತ್ತು ಅವಳ ತಂಗಿಯನ್ನು ಕೂಡಿಸಿದ.

ಜಾ:ನಿಯ ಗಮನ ಇವರೆಡೆಗೇ ಹರಿದಿತ್ತು. ಅರ್ಥಪೂರ್ಣವಾಗಿ ಶಶಿ

ಯತ್ತ ನೋಡಿ ನಗುತ್ತ ಪಿಸುಮಾತಿನಲ್ಲಿ "ಲಾಯಾ ಹೈ ಪಂಛೀ !" ಎಂದು ಕಣ್ಣು ಹುಬ್ಬು ಹಾರಿಸಿದ. ಅದಕ್ಕೆ ಶಶಿಯೂ "ರಂಗೀಲೀ ಹೈ !" ಎಂದು ಹುರಿದುಂಬಿಸಿದ.

ಸಮಯ ಸಮೀಪಿಸುತ್ತಿರುವಂತೆ ಪ್ರೇಕ್ಷಕರ ಕುತೂಹಲ ಹೆಚ್ಚಾಯಿತು. ಎಲ್ಲರ ದೃಷ್ಟಿಯೂ ಸುಧಾಕರನ ಕಡೆಗೆ. ಈ ಹೊಸ ವ್ಯಕ್ತಿ, ನೋಡಲು ತೀರ 'ಹುಡುಗ'ನಂತೆ ಕಾಣುವ ಈ ವ್ಯಕ್ತಿ ಇಂದು ಹೇಗೆ ಆಡುತ್ತಾನೆಂದು ತಮ್ಮ ತಮ್ಮೊಳಗೇ ಮಾತನಾಡುತ್ತಿದ್ದರು.

ಕುಳಿತುಕೊಳ್ಳಲು ಸ್ಥಳವಿದ್ದರೂ ಮೇಜಿನ ಮೇಲೆ, ಕಿಟಕಿಗಳಲ್ಲಿ ನಿಂತ ಕಾಲೇಜ ವಿದ್ಯಾರ್ಥಿಗಳಿಗೂ ಆತುರತೆ.

ಸರಿಯಾಗಿ ೪–೩೦ರ ಗಂಟೆ ಬಾರಿಸಿತು. ನಿರ್ಣಾಯಕರು, ಕಾರ್ಯದರ್ಶಿ, ಇನ್ನಿತರ ಅಧಿಕಾರಿಗಳೆಲ್ಲ ಬಂದರು.

ಗದ್ದಲ ನಿದಾನವಾಗಿ ಕಡಿಮೆಯಾಗಹತ್ತಿತು.

ಸೀಟಿಯನ್ನೂದಿದರು, ಅಂಪಾಯರ್. ಒಂದು ಬದಿಯಿಂದ ಜಾ:ನಿ ಕಣಕ್ಕಿಳಿದ. ತೊಟ್ಟ ಕೋಟನ್ನು ಕಳಚಿ, ಶಶಿಯ ಕೈಯಲ್ಲಿತ್ತು ಮುಂದೆ ನಡೆದ. ಆತನ ಬೆಂಬಲಿಗರೆಲ್ಲರೂ ಉತ್ಸಾಹದಿಂದ ಕೂಗಾಡಹತ್ತಿದರು.

ವಿರುದ್ಧ ದಿಕ್ಕಿನಿಂದ ಸುಧಾಕರ ಮೆಲ್ಲಗೆ ಹೆಜ್ಜೆಯಿಕ್ಕುತ್ತ ಬಂದ. "ಈಗಲೇ ಡರೋ ಮತ್ ಬೇಟಾ!" ಎಂದು ಯಾವನೋ ಒಬ್ಬ ಮಹಾಶಯ ಕೂಗಿದ. ನೆರೆದಿದ್ದವರೆಲ್ಲ ಖೊಳ್ಳನೆ ನಕ್ಕರು. ಮತ್ತೆ ಒಮ್ಮೆಲೆ ಸುಮ್ಮನಾದರು.

'Trials' ಪ್ರಾರಂಭವಾಯ್ತು. ಪರಸ್ಪರರು ಒಬ್ಬರೊಬ್ಬರ ಆಳ, ಅಳತೆಗಳನ್ನು ತಿಳಿಯಲೆತ್ನಿಸಿದರು. ಇಬ್ಬರೂ ತಮ್ಮ "ಗೆಲುವನ್ನು ತರುವ" ಆಟದ ರೀತಿಯನ್ನು ಒಬ್ಬರೊಬ್ಬರಿಗೆ ಪ್ರದರ್ಶಿಸಲಿಲ್ಲ.

ಮತ್ತೊಮ್ಮೆ ಸೀಟಿಯನ್ನೂದಿದರು.

"Reals begin" ಎಂದು ಧ್ವನಿವರ್ಧಕಯಂತ್ರದಲ್ಲಿ ಕೂಗಿದಾಗ, ಕುಳಿತವರಲ್ಲಿಯೂ ಸ್ಪರ್ಧೆಯ ಕಾವು ಏರಿದಂತಾಯ್ತು. ಏಕಾಗ್ರಚಿತ್ತರಾಗಿ ಚಿತ್ರದ ಗೊಂಬೆಗಳಂತೆ ಕುಳಿತುಕೊಂಡರು.

ಎಲ್ಲೆಡೆಗೂ ಶಾಂತತೆ. ಮನಮನಗಳಲ್ಲಿ ನೂರಾರು ಎಣಿಕೆಗಳು, ಮಾತುಗಳು, ಉತ್ಸಾಹದ ಧ್ವನಿಗಳಿದ್ದರೂ ಹೊರಗೆ ಎಲ್ಲವೂ ಮೌನ.

'Reals' ಪ್ರಾರಂಭವಾಯ್ತು.

"Yes, start.." ಎಂದೊಡನೆ ಬಿಳಿ ಚಂಡು ಓಡಾಡಲು ಪ್ರಾರಂಭವಾಯ್ತು.

ಮೊದಲಿಗೆ ಒಂದೆರಡು ನಿಮಿಷ ಯಾವ ವಿಶೇಷವಿಲ್ಲದೇ ಆಟ ಸಾಗಿತು. ಒಬ್ಬರೊಬ್ಬರು ಹೊಡೆತ ಪ್ರತಿಹೊಡೆತಗಳಲ್ಲಿಯೇ ನಿರತರಾಗಿದ್ದರು.

ಗೂಗೆಯ ಧ್ವನಿಯಂತೆ ಯಾವನೊ ಒಬ್ಬ "Shoooot ಜಾ:ನೀ! " ಎಂದು ಆರ್ಭಟಿಸಿದ.

ಆ ನಿನಾದವನ್ನು ಕೇಳುತ್ತಲೇ ರಣಭೇರಿಯನ್ನು ಕೇಳಿದಂತಾಯ್ತು ಜಾ:ನಿಗೆ. ಮೈಯುಬ್ಬತೊಡಗಿತು. ಸಮಯ ಸಾಧಿಸಿ ಒಂದು ನಿಸ್ತರಿಸಲಾರದ ಏಟನ್ನು ಕೊಡಬೇಕೆಂದು ಹವಣಿಸುತ್ತಿದ್ದ.

ಆ ಸಂಧಿ ಸಿಕ್ಕಿತು.

ದೂರ ನಿಂತಿದ್ದ ಜಾ:ನಿಗೆ ನಿಲುಕದಂತೆ ಜಾಳಿಗೆಗುಂಟ ಚೆಂಡನ್ನು ಜಾರಿಸಬೇಕೆಂದು ಹೊಂಚಿಸಿದ್ದ ಸುಧಾಕರ. ಆದರೆ ಹೊಡೆತ ತುಸು ಜೋರಾಯಿತು. ಚೆಂಡು ಅನಾಯಾಸವಾಗಿ ಜಾ:ನಿಯ ಅಳವಿನಲ್ಲಿಯೇ ಸಿಕ್ಕಿತು.

ಮೇರುಗಿರಿಯನ್ನು ಪುಡಿಪುಡಿ ಮಾಡಬಂದ ವಜ್ರಾಯುಧನಂತೆ ಜಾ:ನಿ ಹೊಡೆದ. ಪೆಟ್ಟು ತಿಂದ ಚೆಂಡು ಎಲ್ಲಿ ಬಿದ್ದಿತೆಂಬುದು ಸುಧಾಕರನ ಸೂಕ್ಷ್ಮ ಕಣ್ಣಿಗೂ ಬೀಳಲಿಲ್ಲ. ಪ್ರೇಕ್ಷಕರೆಲ್ಲ ಏಕಕಂಠದಿಂದ "B-e-a-u-t-i-f-u-l" ಎಂದು ಕೂಗಿದರು.

"ಕ್ಯಾ ಮಾರ್‍ಯಾ! ವ್ಹಾ....ವ್ಹಾ! " ಎಂದು ಒಬ್ಬ ಉದ್ಗಾರ ತೆಗೆದ.

ಮತ್ತೊಬ್ಬ ಹೆಣ್ಣುಧ್ವನಿಯಲ್ಲಿ "ಕಾಯ ಸುಂದಽಽರ್! ಅಗಽ ಬಾಯಿ!" ಎಂದು ಕೂಗಿದ.

ಆತನ ಸುತ್ತಲಿದ್ದವರೆಲ್ಲರೂ ನಕ್ಕರು.

ಇಷ್ಟು ವೇಳೆಗೆ ಜಾ:ನಿ '6 Points' ದೊರಕಿಸಿದ್ದ. ಸುಧಾಕರ ಇನ್ನೂ ಎರಡು ಅಂಕೆ ಹಿಂದಿದ್ದ. ಈವರೆಗೂ ಸುಧಾಕರ ಒಂದೂ 'Shot' ಹೊಡೆದಿರಲಿಲ್ಲ. ಅದಕ್ಕೆ ಅವಕಾಶ ಸಿಕ್ಕಿರಲಿಲ್ಲವೆಂದಲ್ಲ. ಆತನ ಹಂಚಿಕೆಯೇ ಬೇರೆಯಾಗಿತ್ತು. ರಭಸದ ಆಟಕ್ಕಿಂತ ಹೆಚ್ಚಾಗಿ ಚಾತುರ್ಯ, ಬುದ್ಧಿವಂತಿಕೆಯ ಆಟದಲ್ಲಿ ಆತ ಪಳಗಿದವ. ಎದುರಾಳಿಯ ನಿರೀಕ್ಷೆಯನ್ನು ತಪ್ಪಿಸಿ ಆತನಿಗೆ ನಿಲುಕ

ಲಾರದ ಸ್ಥಳದಲ್ಲಿ ಚಂತನ್ನು ಹೊಡೆಯುತ್ತಿದ್ದ.

ಆತನ ಆಟದಲ್ಲಿ ನಯವಿತ್ತು, ಚೆಲುವಿತ್ತು, ಕಲ್ಪನೆಯಿತ್ತು. ಸುಧಾಕರ ತನ್ನ ವ್ಯೂಹವನ್ನು ಬದಲಿಸಬೇಕೆಂಬ ಆಲೋಚನೆಯಲ್ಲಿದ್ದ. ಅಷ್ಟರಲ್ಲಿ ಜಾ:ನಿ ಮತ್ತೊಂದು 'Shot' ಬಿಗಿದ. ಈ ಸಲ ಅದು ತಪ್ಪಿಸಿಕೊಂಡು ಹೋಗುವಂತಿರಲಿಲ್ಲ. ಸುಧಾಕರ ಅದನ್ನು ಸಹಜವಾಗಿ ಹಿಂತಿರುಗಿಸಿದ. ಮತ್ತೆ ಅದೇ ರಭಸದಿಂದ ಜಾ:ನಿ ಹೊಡೆದ. ಅಷ್ಟೇ ಸಹಜವಾಗಿ ಮತ್ತೆ ಸುಧಾಕರ ಹಿಂದಿರುಗಿಸಿದ.

ಪ್ರೇಕ್ಷಕರೆಲ್ಲ ಮೆಚ್ಚಿದರು. ಆ ಮೆಚ್ಚಿಕೆಯನ್ನೂ ನಾನಾವಿಧವಾಗಿ ತೋರ್ಪಡಿಸಿದರು, ತಮ್ಮ ತಮ್ಮ ಸ್ವಭಾವವೈಶಿಷ್ಟ್ಯಕ್ಕನುಸಾರವಾಗಿ.

ಈವರೆಗೂ ಕರುಣಾ ಬಹಳ ಏಕಾಗ್ರತೆಯಿಂದ ನೋಡುತ್ತಿದ್ದಳು. ಮೊದಲುಬಾರಿ ಸುಧಾಕರ ತಪ್ಪಿದಾಗ ಅವಳಿಗೆ ಹೇಗೋ ಅನಿಸಿತು. ಆತನ ನಿಲುವು, ಆಟದ ವೈಖರಿ, ಕೆಲಕೆಲವು ಮೋಹಕ ನಿಲುವುಗಳಲ್ಲಿ ಮಗ್ನಳಾಗಿದ್ದಳು. ಆತ ಆಟದಲ್ಲಿ ತೋರುತ್ತಿದ್ದ ನಯ, ಸೂಕ್ಷ್ಮಕೌಶಲ್ಯಗಳನ್ನು ಕಂಡು ಹರುಷ ಉಕ್ಕೇರಿಬಂದಿತ್ತು. ಆಗಲೇ ಎದ್ದು ಹೋಗಿ ಆತನ ಕೈ ಕುಲುಕಿ ಬರಲೇ ಎಂದೆನಿಸುತ್ತಿತ್ತು.

ಮುಂದೆ ಜಾ:ನಿಯ ಕೈ ಮೇಲಾಗಹತ್ತಿದಾಗ ಅವಳಿಗೇಕೋ ವ್ಯಥೆ, ಅಸಮಾಧಾನ! ಆತನೂ ಒಳ್ಳೇ ಆಟಗಾರನಲ್ಲವೇ? ಅದನ್ನೇಕೆ ಮೆಚ್ಚಬಾರದು? ಆಟಕ್ಕಿಂತ ಆಟಗಾರನ ವ್ಯಕ್ತಿತ್ವ ಅದು ಹೇಗೋ ಒಮ್ಮೆ ಮನದಲ್ಲಿ ಬಿಂಬಿಸಿ ಬಿಟ್ಟಿರುತ್ತದೆ. ಒಬ್ಬೊಬ್ಬರಿಗೆ ಒಬ್ಬೊಬ್ಬ ಆಟಗಾರನ ಬಗ್ಗೆ ಹೆಮ್ಮೆ, ಅಭಿಮಾನ, ಆದರ, ಪ್ರೀತಿ. ಇತರರ ಆಟಗಾರಿಕೆಯನ್ನು ಹೊಗಳಿದರೂ ಅವರ 'ಮೆಚ್ಚಿನ ಆಟಗಾರ' ಬೇರೆಯೇ ಇರುತ್ತಾನೆ. ಅವರ ಬಗೆಗೆ ಆತ್ಮೀಯ ಭಾವನೆಗಳನ್ನೂ ಬೆಳೆಸಿಕೊಂಡು ಬಂದಿರುತ್ತಾರೆ.

ಹೀಗಾಯ್ತು ಕರುಣಾಳ ಸ್ಥಿತಿ. ತಮ್ಮ ಮೆಚ್ಚಿಗೆಯ ಆಟಗಾರ ಸೋಲುವದು ಯಾರಿಗೆ ಸಹನವಾಗುವದು? ಆಟಗಾರನಿಗಿಂತ ಹೆಚ್ಚಿನ ದುಃಖ, ಮರುಕ, ಸಂಕಟ, ಇವರಿಗಾಗುತ್ತದೆ.

ಜಾ:ನಿಯ ಅಲಕ್ಷ್ಯವನ್ನು ನೋಡಿ, ಹೊಂಚಿಸಿ, ಸುಧಾಕರ ಒಂದು 'ಭಾರಿ' ಹೊಡೆತವನ್ನು ಬಿಗಿದ. ಆ ಹೊಡೆತವನ್ನು ನಿಸ್ತರಿಸಲಾಗಲಿಲ್ಲ ಜಾ:ನಿಗೆ.

ಚೆಂಡು ಟೇಬಲ್ಲಿನ ಅಂಚಿಗೇ ಬಿದ್ದು ದೂರ ಪುಟಿಯಿತು.

"ವ್ಹಾ ! ವ್ಹಾ !" ಎಂಬ ಉದ್ಗಾರ, ಗಡಚಿಕ್ಕುವ ಚಪ್ಪಾಳೆಯ ಧ್ವನಿಯನ್ನೂ ಮೀರಿ ಕಟ್ಟಡವನ್ನೆಲ್ಲ ತುಂಬಿ ಮರುನುಡಿಯಿತು.

ಎಲ್ಲರೂ ಸ್ತಬ್ಧರಾದ ಮೇಲೆ ಯಾವನೋ ಒಬ್ಬ "ಲಾಖೋಮೆ ಏಕ್ !" ಎಂದು ಕೂಗಿದ.

ಕರುಣಳಿಗಂತೂ ಸಂತೋಷ ಉಕ್ಕಿ ಬಂದಿತು.

ಜಾ:ನಿ ಹತಾಶನಾಗದಿದ್ದರೂ ಪೆಟ್ಟು ಮಾರ್ಮಿಕವಾಗಿತ್ತು. ಬಿರುಗಾಳಿಯಂತೆ ಮುನ್ನುಗ್ಗಿದ. ಒಂದರ ಮೇಲೊಂದು 'Shot' ಹೊಡೆಯಹತ್ತಿದ. ಅಭಿಮಾನಕ್ಕೆ ಕಿಚ್ಚನಿಟ್ಟಂತಾಗಿತ್ತು ಆತನಿಗೆ. ಆಟದ ರಭಸಕ್ಕಿಂತ ಕೋಪದ ಆವೇಶ ಹೆಚ್ಚಾಗಿತ್ತು. ಅದಕ್ಕೆ ದ್ವೇಷದ ಮದವೂ ಸೇರಿತು.

ಜಾ:ನಿ ಹೊಡೆದ ಒಂದೊಂದು 'Shot' ಸುಧಾಕರ ತಿರುಗಿಸಹತ್ತಿದ. ಸುಧಾಕರನಿಗೆ ಯಾವ ಆವೇಗ, ಆವೇಶವೂ ಇರಲಿಲ್ಲ. ಚಿತ್ತಸ್ಥೈರ್ಯವನ್ನು ಕದಡಿಕೊಳ್ಳದೇ, ಪ್ರಶಾಂತವಾಗಿ ಸೌಮ್ಯವಾಗಿ ಆಡುತ್ತಿದ್ದ. ಮುಗುಳುನಗೆ ಸದಾ ಮಿನುಗುತ್ತಿತ್ತು. ಅದೇ ಜನರನ್ನು ಸೆಳೆದಿತ್ತು. ಯಾವ ಅರ್ಭಟೆ ಆಟೋಪಗಳಿಲ್ಲದೇ ನಿದಾನವಾಗಿ, ಸೌಮ್ಯವಾಗಿ ಆಡುತ್ತಿದ್ದ. ಅಷ್ಟು ಜನರ ಕೂಗಾಟದ ಮಧ್ಯೆ, ಅಂತಹ 'ಭಾರಿ' ಎದುರಾಳಿಯ ಸಮ್ಮುಖದಲ್ಲಿ ಹೀಗೆ ಆಡುವದೆಂದರೆ ಎಂತಹ ಮಾತು !

ಒಮ್ಮೆಯೂ ಸಂಯಮ ತಪ್ಪಲಿಲ್ಲ. ಚಾಕಚಕ್ಯತೆ, ನಯ, ಆತನ ಆಟದಲ್ಲಿ ಕುಸುರುಕುಸುರಾಗಿದ್ದವು. ಎಲ್ಲರ ಹೃದಯಗಳನ್ನು ಗೆಲ್ಲುವ ಚೆಲುವಿಕೆ ಆತನ ಅಂದಿನ ಆಟದಲ್ಲಿತ್ತು.

ತನ್ನ ಹೊಡೆತಗಳೆಲ್ಲ ತನಗೇ ತಿರುಗುಬಾಣಗಳಾಗಿ ಬರುತ್ತಿರುವದನ್ನು ಕಂಡು ಜಾ:ನಿ ಕಂಗೆಟ್ಟ; ಹತಾಶನಾದ; ಕೋಪದಿಂದ ಉರಿದೆದ್ದ. ಇವೆಲ್ಲ ಆತನಿಗೆ ಯಾವ ಫಲವನ್ನೂ ಕೊಡಲಿಲ್ಲ.

ಮುಂದೆ ಆತನ ಗುರಿಗಳೆಲ್ಲ ತಪ್ಪಹತ್ತಿದವು. ಜನರಲ್ಲಿ ಅಭಾಸವಾಗಹತ್ತಿತು. ಆತನ ಬೆಂಬಲಿಗರೆಷ್ಟು ಹುರಿದುಂಬಿಸಿದರೂ ಆಟ ಕೈಯ ಅಳವನ್ನು ಮೀರಹತ್ತಿತು.

ಜಾ:ನಿಯ ಎದೆ ಜೊಳ್ಳೆಸಿದುದನ್ನು ಸುಧಾಕರ ನೋಡದಿರಲಿಲ್ಲ. ಮೂರು

ನಾಲ್ಕು ಬಾರಿ ಗುರಿ ತಪ್ಪಿದಾಗಲೇ ತಿಳಿದಿತ್ತು ಆತನಿಗೆ.

ಈಗ ಆಟ ಸುಧಾಕರನ ಹಿಡಿತದಲ್ಲಿ ಬರಹತ್ತಿತ್ತು. ಪ್ರೇಕ್ಷಕರೆಲ್ಲ ಆತನನ್ನೇ "ಗೆಲುವಿನ ಮೂರ್ತಿ"ಯನ್ನಾಗಿ ಮೂಡಿಸಿಕೊಂಡರು. ಜಾ:ನಿಯ ಬೆಂಬಲಿಗರು ತೆಪ್ಪಗಾಗಹತ್ತಿದರು.

ವಾತಾವರಣ ಗಂಭೀರವಾಯ್ತು.

ಸುಧಾಕರ ಆಟದ ತಂತ್ರವನ್ನು ಈಗ ಬದಲಿಸಿದ. ಜಾ:ನಿಯ ಮರ್ಮಸ್ಥಾನಗಳೆಲ್ಲ ಗೊತ್ತು ಆತನಿಗೆ. ಸುತ್ತೆಲ್ಲ ಓಡಾಡಿಸಿ ಆತನನ್ನು ಹಣ್ಣುಗಾಯಿ ನೀರುಗಾಯಿ ಮಾಡಿದ. ಆಮೇಲೆ ಅವ್ಯಾಹತವಾಗಿ ರಭಸದಿಂದ ಹೊಡೆಯಹತ್ತಿದ.

ಆಟ ೧೯–೧೫ಕ್ಕೆ ಬಂದು ನಿಂತಿತು.

ನೋಟಕರ ಉತ್ಸಾಹ ಮಿತಿ ಮೀರಿತು. ಕುಳಿತವರೆಲ್ಲ ತಮ್ಮ ಆಸನ ಬಿಟ್ಟು ಎದ್ದು ನಿಂತರು.

ಕೊನೆಯ ಒಂದು ನಿಮಿಷದಲ್ಲಿ ಸುಧಾಕರ ಹೊಡೆದ ಎರಡೂ 'Shot'ಗಳ ರಭಸಕ್ಕೆ ಜಾ:ನಿ ಕಕ್ಕಾವಿಕ್ಕಿಯಾದ.

ಮೊದಲನೆಯ ಸುದೀರ್ಘ ಆಟ ಹೀಗೆ ಕೊನೆಗೊಂಡಿತು.

ಮಾಧವ ಬಂದು ಸುಧಾಕರನನ್ನಪ್ಪಿಕೊಂಡ. ಸುತ್ತಲೂ ನೆರೆದ ವಿದ್ಯಾರ್ಥಿಗಳು ಆತನ ಕೈ ಬಿಡಲೇ ಇಲ್ಲ. ಅರುಣಾ ಮುಖ ಹೊರಳಿಸಿ "ಸುಂದರವಾಗಿ ಆಡಿದರಲ್ಲವೇ ?" ಎಂದು ತಂಗಿಯನ್ನು ಕೇಳಿದಳು. ಕರುಣಾ ಮೈಮರೆತಿದ್ದಳು. ತನ್ನ ಹೃದಯದೊಳಗೇ ಅನೇಕ ಬಾರಿ ಮೃದುವಾಗಿ 'ಸುಂದರ-ಸುಂದರ' ಎಂದು ಹೇಳಿಕೊಂಡಿದ್ದಳು.

ಎರಡನೆಯ ಆಟ, ಸುಧಾಕರನ ಆಟವೇ ಆಗಿತ್ತು. ಸರ್ಕಸ್ಸಿನಲ್ಲಿಯ ಹುಲಿಯನ್ನು ಚಾಬೂಕಿನ ಸನ್ನೆಯಿಂದ ಓಡಾಡಿಸುವಂತೆ ಜಾ:ನಿಯನ್ನು ಓಡಾಡಿಸಿದ. ಪಳಗಿಸಿದ ಮೃಗದಂತೆ ಜಾ:ನಿಯನ್ನು ಹಿಡಿತದಲ್ಲಿಟ್ಟದ್ದ.

ಈ ಆಘಾತ, ಅವಮಾನದಿಂದ ಚೇತರಿಸಿಕೊಳ್ಳಲಾಗದ ಜಾ:ನಿ, ಬೇಗನೆ ಕುಸಿದುಹೋದ. ಗುರಿಗಳೆಲ್ಲ ತಪ್ಪಿದವು. ಒಂದಾದರೂ ಸರಿಯಾಗಿ ಹೋಗಲಿಲ್ಲ. ಹೀಗಾಗಿ ಎರಡನೆಯ ಆಟದ ಹಣೆಬರಹ ಮೊದಲೇ ತಿಳಿದಂತಾಯ್ತು.

ಹತ್ತೇ ನಿಮಿಷಗಳಲ್ಲಿ ಸುಧಾಕರ ಆಟಕ್ಕೆ ಮಂಗಳವನ್ನೆತ್ತಿದ. ಆತ

'ವಿಜಯಿ' ಎಂದು ಘೋಷಿಸಲ್ಪಟ್ಟಾಗ, ಸಭೆಯೆಲ್ಲ ಹರುಷೋನ್ಮಾದದಲ್ಲಿ ತೇಲಾಡಿತು.

ಆಟ ಕೊನೆಗೊಂಡರೂ ಜನರಿನ್ನೂ ಸುಧಾಕರನ ಸುತ್ತುವರಿದು ನಿಂತಿದ್ದರು. ಪರಿಚಯವಿಲ್ಲದಿದ್ದರೂ ಆತನನ್ನು ಕಂಡು ಮೆಚ್ಚಿಗೆಯನ್ನು ವ್ಯಕ್ತಗೊಳಿಸಿ ಹೋಗಲು ನಿಂತಿದ್ದರು. ಅವರೆಲ್ಲರಿಗೂ ನಮಸ್ಕರಿಸಿದ ಸುಧಾಕರ.

ಹೋಗುವಾಗ ಪ್ರೇಕ್ಷಕರೆಲ್ಲ ಈ ಕೌತುಕದ ಮೂರ್ತಿಯನ್ನು ಮನದಲ್ಲಿ ಬಿಂಬಿಸಿಕೊಂಡು ಹೋದರು. ಕ್ರೀಡಾಪ್ರಿಯ ಬಾಲಕರೆಲ್ಲ ಸುತ್ತುವರಿದು ನಿಂತು ನೋಡೇ ನೋಡಿದರು. ಅವರೆಲ್ಲರ ಆದರ್ಶ ಆಟಗಾರನಾಗಿ ಹೃದಯದಲ್ಲಿ ಮೂಡಿ ನಿಂತ ಸುಧಾಕರ. ಕಾಲೇಜಿನ ವಿದ್ಯಾರ್ಥಿನಿಯರು ಗುಂಪುಗಟ್ಟಿಕೊಂಡು ಬಂದು "Congratulations!" ಎಂದು ಹಾರ್ದಿಕವಾಗಿ ಅಭಿನಂದಿಸಿದರು. ಅವರಿಗೆ ಪ್ರತಿಯಾಗಿ "Thanks" ಹೇಳಬೇಕಾದರೆ ಸುಧಾಕರನಿಗೆ ವಿಚಿತ್ರ ಅನುಭವವಾಯ್ತು. ಕೋಮಲೆಯರ ಗುಂಪಿನಲ್ಲಿ ಸಿಲುಕಿದುದು ಇದೇ ಮೊದಲ ಸಲ. ಸಂಕೋಚ, ಲಜ್ಜೆಯಿಂದ ಮುಖ ಕೆಳಗೆ ಹಾಕಿ ಉತ್ತರಿಸಿದ. ಈ ಪ್ರಮೀಳೆಯರ ಗುಂಪು ಹೊರಗೆ ಸಾಗಿತು. ಬಳಲಿದ್ದರೂ ಒಂದು ಬಗೆಯ ಸೊಬಗಿನಿಂದ ಕೂಡಿದ್ದ ಆತನ ಚೆಲುವು ಹಲವಾರು ಕಂಗಳನ್ನು ಮತ್ತೆ ಮತ್ತೆ ಸೆಳೆಯುತ್ತಿತ್ತು.

ಜಾ:ನಿಯ ಗುಂಪು ಆಗಲೇ ಕಣ್ಮರೆಯಾಗಿತ್ತು.

ಆಟ ಮುಗಿದ ಮೇಲೆ ಕೈಕುಲುಕಬೇಕೆಂದರೆ ಆತ ಅಲ್ಲಿರಲಿಲ್ಲ. ಅಷ್ಟು ಅವಮಾನವಾಗಿತ್ತು ಆತನಿಗೆ.

ಉಳಿದವರು ಕೆಲವೇ ಜನ. ಸ್ನೇಹಿತರಾದ ಕೆಲವು ಹಾಸ್ಟೆಲ್ ವಿದ್ಯಾರ್ಥಿಗಳು, ಮಾಧವ, ಸುಧಾಕರ. ಗಣಪತರಾಯರಂತೂ ಹೊಗಳಿದ್ದೇ ಹೊಗಳಿದ್ದು. "ನಿಜವಾಗಿಯೂ ನಿಮ್ಮಂತೆ ಸಹನೆ, ಧೃತಿಯುಳ್ಳ ಕಲಾಪೂರ್ಣ ಆಟಗಾರರನ್ನೇ ನೋಡಿರಲಿಲ್ಲ!" ಎಂದರು.

ಅವರೆಲ್ಲ ಆಡುವ ಪ್ರಶಂಸೆಯ ಮಾತುಗಳಿಗೆ ಸುಧಾಕರ ವಿನಿಮ್ರತೆಯಿಂದ ತಲೆವಾಗಿದ್ದ.

ಅರುಣಾಬಾಯಿಯಂತೂ ಬೆರಗಾಗಿಹೋಗಿದ್ದಳು. "ನಿಮ್ಮನ್ನು ನೋಡಿದಾಗ ಹೀಗಿದ್ದೀರೆಂಬೆನಿಸುವದೇ ಇಲ್ಲ. ಪಾಪ, ನಿಮ್ಮ ಎದುರಾಳಿಯನ್ನು ಎಷು

ಸಿಟ್ಟಿಗೆಬ್ಬಿಸಿದ್ದಿರಿ ನೀವು ?"

ಎಲ್ಲರೂ ನಕ್ಕರು.

ಕರುಣಳಿಗೆ ಹೃದಯ ಉಕ್ಕಿ ಬಂದು, ತಾನೂ ಮಾತನಾಡಬೇಕೆಂದೆನಿಸು ತ್ತಿತ್ತು. ಮಾತು ನಾಲಿಗೆಯವರೆಗೆ ಬಂದು ಬಂದು, ನಾಚಿ ಒಳಗೆ ಜಾರಿಕೊಳ್ಳು ತ್ತಿದ್ದವು. ಹೃದಯದಲ್ಲಿಯೇ ಅಭಿನಂದಿಸಿದಳು ನೂರು ಬಾರಿ. ಹೃದಯ ಅನಿರ್ವಚನೀಯ ಹರುಷಸ್ಪರ್ಶದಿಂದ ಪುಲಕಿತವಾಗಿತ್ತು.

ಎಲ್ಲರೂ ಮಾಧವನ ಕೋಣೆಯೆಡೆಗೆ ಬಂದರು. "ಸ್ವಲ್ಪ ವಿಶ್ರಮಿಸಿಕೊಂಡು ಹೋಗಿರಿ. ಬನ್ನಿರಿ ಒಳಕ್ಕೆ" ಎಂದು ಒಳಗೆ ಕರೆದ ಮಾಧವ.

ಒಳಗೆ ಕಾಲಿಡುತ್ತಲೇ ಗಣಪತರಾಯರು "ವಿಶ್ರಾಂತಿ ಸುಧಾಕರರಿಗೆ ಅವಶ್ಯ. ನಾವೇನು ನೋಡಿ ಸಂತೋಷ ಹೊಂದಿದವರು" ಎಂದರು.

ಅರುಣಾ ನಡುವೆ ಬಂದು "ಕೆಲವರಿಗೆ ನೋಡಿದರೂ ಆಯಾಸವಾಗುವದು" ಎಂದಳು.

ಸುಧಾಕರ ಮಾಧವನನ್ನು ಹತ್ತಿರ ಕರೆದು ಮೆಲುದನಿಯಲ್ಲಿ "ನಾನು ರೂಮಿಗೆ ಹೋಗುತ್ತೇನೆ. ಆಮೇಲೆ ಬರುತ್ತೇನೆ" ಎಂದ.

"ಮಹಾರಾಯಾ, ಮದುಮಗನಿಲ್ಲದೇ ಮದುವೆಗೆ ಹೋದರಂತೆ!! ನಿನ್ನ ಗೆಲುವಿಗಾಗಿಯೇ ಈ ಚಿಕ್ಕ ಅಲ್ಪೋಪಹಾರ, ತಿಳಿಯಿತೇ ? ಹೋಗು, ಬೇಡೆನ್ನುವದಿಲ್ಲ. ಬೆವೆತಿದ್ದೀ. ಒಂದು ಬಾರಿ 'fine' ಆಗಿ ಸ್ನಾನ ಮಾಡಿಕೊಂಡು ಬಂದುಬಿಡು. ನಿನಗಾಗಿ ನಾವೆಲ್ಲ ಕಾಯುತ್ತಿರುತ್ತೇವೆ" ಎಂದು ಉತ್ತರಿಸಿದ ಮಾಧವ.

"ನೀವೆಲ್ಲಿ ಹೋಗುವಿರಿ ಸುಧಾಕರ? ಇಂದಿನ 'Hero' ನೀವು. ನೀವಿಲ್ಲದೆ ನಾವು ಯಾರ ಜೊತೆ ಚಹ ಕುಡಿಯಬೇಕು ? ಈಗ ನೀವು ನಮಗೇನು ಹೊರಗಿನವರಲ್ಲ !" ಹೋಗುತ್ತಿರುವ ಸುಧಾಕರನಿಗೆ ಗಣಪತರಾಯರು ಅಂದರು.

"ಈಗ ಬಂದುಬಿಡುತ್ತೇನೆ" ಎಂದು ಹೇಳಿ ಸುಧಾಕರ ಹೊರಗೆ ನಡೆದ.

"ಈಗ ಒಂದೆರಡು ನಿಮಿಷಗಳಲ್ಲಿ ಬರುತ್ತೇನೆ" ಎಂದು ಹೇಳಿ ಮಾಧವನೂ ಹೊರಗೆ ಬಂದ. ಸಮೀಪದಲ್ಲಿಯೇ ಕೆಫೆ. ಅಲ್ಲಿ ಹೋಗಿ ಒಳ್ಳೆಯ ಬಿಸ್ಕೀಟು, ಅವಲಕ್ಕಿ ತೆಗೆದುಕೊಂಡು ಬಂದ.

ಅರುಣಾಬಾಯಿಗೆ ಇದು ಸಂಕೋಚವೆನಿಸಿತು. "ಸುಮ್ಮನೆ ನೀವೆಷ್ಟು

ತೊಂದರೆ ವಹಿಸುತ್ತಿದ್ದೀರಿ? ಇಷ್ಟೆಲ್ಲ ಸತ್ಕಾರ ಮಾಡಲು ನಾವೇನು ಹೊಸ ದಾಗಿ ಪರಿಚಿತರಾದವರೇ ?" ಎಂದು ಹೇಳಿದಳು.

"ನಿಜ ಹೇಳಿರಿ ಅರುಣಾಬಾಯಿ, ನೀವು ಈ ಕಡೆಗೆ ಎಂದು ಬಂದಿದ್ದೀರಿ? ನಾನು ಆಗ ದಿನಾಲು ನಿಮ್ಮ ಮನೆಯಲ್ಲಿ ಒಂದಿಲ್ಲೊಂದು ಕಾರಣದಿಂದ ಚಹ ಕುಡಿಯದೇ ಇರುತ್ತಿರಲಿಲ್ಲ. ಅಪರೂಪಕ್ಕೆ ಬಂದಿದ್ದೀರಿ. ನಾನೇನು ಅಂತಹ ದೊಡ್ಡ ಔತಣ ಮಾಡಿಸಿದ್ದೇನೆ? ಚಹದಂಗಡಿಯ ಚೂಡಾ...." ಎಂದು ಹೇಳುತ್ತ ಮೂಲೆಯಲ್ಲಿರಿಸಿದ ಟೇಬಲ್ ಎಳೆದು ಮಧ್ಯರಂಗಕ್ಕೆ ತಂದಿಟ್ಟು ಅದರ ಮೇಲೆ ತಂದ ಸಾಮಾನಿಟ್ಟು ಚಹಾದ ತಯಾರಿ ತಾನೇ ನಡಿಸಿದ.

"ನೀವು ಕುಳಿತುಕೊಳ್ಳಿರಿ, ನಾನು ಚಹ ಮಾಡುತ್ತೇನೆ" ಎಂದು ಎದ್ದು ಬಂದಳು ಅರುಣಾ.

"ನೀವು ಈ ಕಡೆ ಬಂದುಬಿಡಿರಿ ಮಾಧವರಾವ್. ಅವಳು ಚಹ ಮಾಡು ತ್ತಾಳೆ." ಎಂದು ಗಣಪತರಾಯರು ಪತ್ರಿಕೆಯೊಂದರಲ್ಲಿ ತಲೆ ಹಾಕಿ ಮಾತನಾಡಿ ದರು.

"ನಿಮ್ಮದು ಬಲು ಸಂಕೋಚ ಸ್ವಭಾವ ಅರುಣಾಬಾಯಿ. ಒಳ್ಳೆಯದು; ಅತಿಥಿಯಾದ ನೀವೇ ಚಹ ಸಿದ್ಧಗೊಳಿಸಿರಿ." ಎಂದು ನಸುನಗುತ್ತ ಈಜಿಗೆ ಬಂದು ಕುಳಿತ.

ಏನು ಮಾಡಲು ತೋಚದೆ ಕರುಣಾ ಪುಸ್ತಕದ ಹಾಳೆಗಳನ್ನು ತಿರುವುತ್ತ ಕುಳಿತಿದ್ದಳು. ಈಗ ಅವಳಿಗೆ ಕೆಲಸ ದೊರೆತಂತಾಯಿತು. ಅಕ್ಕನ ಸಹಾಯಕ್ಕೆ ಹೋದಳು.

ಅಷ್ಟರಲ್ಲಿ ಸುಧಾಕರ ಒಳಗೆ ಬಂದ.

ಬರುತ್ತಲೇ ಆತನನ್ನು ಸ್ವಾಗತಿಸುವ ಧ್ವನಿಯಲ್ಲಿ ಗಣಪತರಾಯರು "ಬರ್ರಿ, ಬರ್ರಿ; ಇವತ್ತು ನೀವು ಆಟದ ಬಣ್ಣವನ್ನೇ ಬದಲಿಸಿಬಿಟ್ಟಿರಿ." ಎಂದು ಪ್ರಶಂಸಿಸಿದರು.

ಮೂವರೂ ಮಾತನಾಡುತ್ತ ಕುಳಿತರು.

ಅಂದಿನ ಪಂದ್ಯಾಟ, ಸುಧಾಕರನ ಕೌಶಲ್ಯದ ಆಟ, ಇವೇ ವಿಷಯಗಳೇ ಮತ್ತೆ ಮತ್ತೆ ಸುಳಿಯುತ್ತಿದ್ದವು.

"ಜಾನಿಯ ಆಟದ ಬಗ್ಗೆ ನಿಮ್ಮ ಅಭಿಪ್ರಾಯವೇನು ಸುಧಾಕರ ?"

ಕುತೂಹಲದಿಂದ ಪ್ರಶ್ನಿಸಿದರು ಗಣಪತರಾಯರು.

"ಅವನೊಬ್ಬ ಪಳಗಿದ ಆಟಗಾರ. ಈ ದಿನದ ಆಟದ ಮೇಲಿಂದ ಆತನ ಮೇಲ್ಮೆಯನ್ನು ಕಡೆಗಣಿಸುವಂತಿಲ್ಲ. ನಿಜವಾಗಿಯೂ ಆತನ ರಭಸ ಅದ್ವಿತೀಯ. ಆದರೆ ಅದಕ್ಕೆ ತುಸು ಸುಯೋಜಿತ ಮಾರ್ಗ ಬೇಕು. ಒಂದೇಸವನೆ 'Shots' ಹೊಡೆಯುತ್ತಾನೆ. ಎದುರಾಳಿಯು ಅವನ್ನೆಲ್ಲ ತಿರುಗಿಸಹತ್ತಿದರೆ ಧೈರ್ಯಗೆಡು ತ್ತಾನೆ." ಎಂದು ಸುಧಾಕರ ಉತ್ತರಿಸಿದ.

"ಈ ದಿನ ಹಾಗೆಯೇ ಆಯ್ತು. ಮುಂದೆ ಅದೇ ಅವನ ಮನದ ಸ್ತಿಮಿತ ವನ್ನು ತಪ್ಪಿಸಿತು." ಎಂದು ಮಾಧವ ವಿವರಿಸಿದ.

"ಹಾಂ! ಒಮ್ಮೆ ಸ್ತಿಮಿತ ತಪ್ಪಿತೆಂದರೆ ಆಟದ 'Grip' ಹೋಗಿಬಿಡು ತ್ತದೆ. ಒಂದೆರಡು ಗುರಿ ತಪ್ಪಿದ ಮೇಲಂತೂ ಆಟ ಕುಸಿದೇ ಹೋಗುವದು. ಬರಿ ಆವೇಶ, ರೋಷ, ತುಂಬಿದರೆ ಗೆಲುವು ಬರಲಾರದು." ಸುಧಾಕರನ ಈ ಮಾತಿನಲ್ಲಿ ಅನುಭವದ ಸತ್ಯವಿತ್ತು. ನಿಜವಾದ ಆಟಗಾರನ ವ್ಯಕ್ತಿತ್ವದ ಚಿತ್ರಣ ವಿತ್ತು.

ಮಾಧವನಿಗೆ ಜಾ:ನಿಯ ಆಗಿನ ದಿಙ್ಮೂಢ ಮುಖ, ಕೈಲಾಗದ ಕೋಪ, ನೆನಪಾಗಿ ನಗೆ ಬಂದಿತು. "ಅವನ ರೋಷವೇ ಅವನನ್ನು ಕೊಂದಿತು ನೋಡು ಸುಧಾಕರ. ಅವನ ಪ್ರತಿಯೊಂದು ಹೊಡೆತವನ್ನು ನೀನು ಅವನಿಗೇ ತಿರುಗಿಸು ವಾಗಂತೂ ಪ್ರತಿ ಹೊಡೆತಕ್ಕೆ ಆತನ ಮರ್ಮಸ್ಥಾನ ಪುಡಿಗುಟ್ಟಿದಂತಾಗಿರಬೇಕು. ಅದಕ್ಕೇ ಗಾಯಗೊಂಡ ಹುಲಿಯಂತೆ ಎಗರಾಡಿದ" ಎಂದು ನಗೆ ತಡೆಯದೆ ಮಾಧವ ಹೇಳಿದ.

"ಏನೇ ಹೇಳಿರಿ ನೀವು. ಆತ ಆಟಗಾರನಿದ್ದಾನೆ. ಇನ್ನೊಂದು ಬಾರಿ ಆಡಿದಾಗ ಗೆಲ್ಲಬಹುದು. ಆದರೆ ಆತ ಎಂದಿಗೂ ಒಳ್ಳೆಯ ಆಟಗಾರನಾಗಲಾರ." ಎಂದು ಗಣಪತರಾಯರು ಹೇಳುವದರಲ್ಲಿ ನಿಜವಾದ ಗುಣಗ್ರಹಣವಿತ್ತು.

"ಇಂದು ಸಾಯಂಕಾಲ ನಾನೇ ಅವನನ್ನು ಕಾಣಬೇಕೆಂದಿದ್ದೇನೆ. ಆಟ ಮುಗಿದುದೇ ತಡ, ಹೋಗಿಯೇ ಬಿಟ್ಟಿದ್ದ. ನಿಜವಾಗಿ ನನಗೆ ಅದು ತುಂಬ ಅಸಮಾಧಾನವನ್ನುಂಟುಮಾಡಿದೆ. ಹೃದಯಪೂರ್ವಕವಾಗಿ ಆತನನ್ನು ಅಭಿ ನಂದಿಸಿ ಬರುವವನಿದ್ದೇನೆ." ಸುಧಾಕರನ ಈ ಮಾತಿನಲ್ಲಿ ಅನುಕಂಪ, ನಿಜವಾದ ಆಟಗಾರನ ಹೃದಯ ಎದ್ದು ಕಾಣುತ್ತಿತ್ತು.

ಅರುಣಾ ಕೆಲಸದಲ್ಲಿ ತೊಡಗಿದ್ದರೂ ಈ ಸಂಭಾಷಣೆಯನ್ನೂ ಕೇಳು ತ್ತಿದ್ದಳು ನಡನಡುವೆ ಅವರ ಕಡೆಗೆ ನೋಡುತ್ತ ತನ್ನ ವಿಚಾರಗಳನ್ನು ಹೇಳು ತ್ತಿದ್ದಳು.

ಕರುಣಾ ಮಾತ್ರ ಮನವನ್ನು ತೊಡಗಿಸಲು ಒಂದಿಲ್ಲೊಂದು ಕೆಲಸವನ್ನು ಹುಡುಕುತ್ತಿದ್ದಳು. ಸಕ್ಕರೆ, ಚಹ ಪುಡಿಯನ್ನು ಕೊಡುವದು, ಹಾಲಿನ ಪಾತ್ರೆ ಯನ್ನು ಕೆಳಗಿಡುವದು, ಕಪ್ಪುಬಸಿಗಳನ್ನು ಅಣಿಗೊಳಿಸುವದು, ಹೀಗೆ ಚಹ ಸಿದ್ಧವಾಗುವವರೆಗೂ ಅವಳ ಚಟುವಟಿಕೆಗಳು ನಡೆಸೇ ಇದ್ದವು.

ಚಹ ಅಣಿಯಾಯ್ತು. ಒಂದೊಂದೇ ಕಪ್ಪುಗಳನ್ನು ತಂದು ಅರುಣಾ-ಬಾಯಿಯು ಮಧ್ಯದಲ್ಲಿರಿಸಿದ ಟೇಬಲ್ ಮೇಲೆ ಇಟ್ಟಳು.

ಕೊನೆಯ ಕಪ್ಪೊಂದನ್ನು ತೆಗೆದುಕೊಂಡು ಕರುಣಾ ಸಂಕೋಚದಿಂದ ಬಂದಳು. ಮಾಧವನೆದ್ದು ಇದ್ದ ಒಂದೆರಡು ಬಸಿಗಳಲ್ಲಿ ಅವಲಕ್ಕಿ ಬಿಸ್ಕೀಟು ಗಳನ್ನು ಹಾಕಿಕೊಂಡು, ಅತಿಥಿಗಳೆದುರಿಗೆ ಇಟ್ಟು ತಾನೂ ಕುಳಿತುಕೊಂಡ. ಎಲ್ಲರೂ ಹರಟುತ್ತಲೇ ಚಹ ಕುಡಿಯಹತ್ತಿದ್ದರು. ಕರುಣಳಿಗೆ ಮಾತ್ರ ಈ ಸಾಮೀಪ್ಯ ಎಂದೂ ಇಲ್ಲದಷ್ಟು ಸಂಕೋಚವನ್ನುಂಟುಮಾಡಿತ್ತು. ಮೂಕಳಂತೆ ಕುಳಿತಿದ್ದಳು. ಅವಳನ್ನು ಮಾತಿನಲ್ಲಿ ತೊಡಗಿಸಬೇಕೆಂದು ಅರುಣಾ ಮಾತ ನಾಡಿದಳು: "ನಿಮ್ಮ 'College-Day' ಎಂದು ಕರುಣಾ ?"

"ಮುಂದಿನವಾರದಲ್ಲಿದೆ."

"ನಿಮಗೆ ಯಾವ ಆಟದಲ್ಲಿ ಅಭಿರುಚಿಯಿದೆ ?" ಎಂದು ಮಾಧವ ಕೇಳಿದ.

ಕರುಣಳಿಗೆ ಈ ಪ್ರಶ್ನೆ 'ಏಕಾಏಕಿ' ಬಂದಿದ್ದರಿಂದ ಸ್ವಲ್ಪ ಗಾಬರಿಯೆನಿ ಸಿತು. ಆದರೂ ಸಾವರಿಸಿಕೊಂಡು ಮೆಲುನುಡಿಯಲ್ಲಿ ಉತ್ತರಿಸಿದಳು: "ನನಗೆ ಆಡುವದಕ್ಕಿಂತ ನೋಡುವವರಲ್ಲಿ ಹೆಚ್ಚು ಆಸಕ್ತಿ."

ತಾನು ಹೀಗೆ ಉತ್ತರಿಸಬಹುದೆಂದು ಅವಳಿಗೇ ಅನಿಸಿರಲಿಲ್ಲ.

"ಹಾಗಾದರೆ ನೀವು ಯಾವ ಚಟುವಟಿಕೆಯಲ್ಲೂ ಬರೀ ಪ್ರೇಕ್ಷಕರು, ನನ್ನಂತೆ ಅಲ್ಲವೇ ?" ಎಂದು ಮುಂದುವರಿಸಿದ ಮಾಧವ.

ಈಗ ತುಸು ಮೈಚಳಿ ಬಿಟ್ಟಂತಾಗಿತ್ತು ಕರುಣಳಿಗೆ. ಮುಖ ಮೇಲೆತ್ತಿ ಸ್ವಾಭಾವಿಕವಾಗಿ ಮಾಧವನತ್ತ ನೋಡುತ್ತ ಮಾತನಾಡಲು ಧೈರ್ಯ ತಂದು ಕೊಂಡಳು.

"ಅವಳ ಪ್ರೀತಿಯ ವಸ್ತುಗಳೆಂದರೆ, ನಾಟಕ ಇಲ್ಲವೇ ಭಾವಗೀತ. ಸದಾ ಮನೆಯಲ್ಲಿ ಅವಳ ತನನನ ನಡೆದೇ ಇರುತ್ತದೆ." ಎಂದು ಗಣಪತರಾಯರು ಕರುಣಳು ಹೇಳಬೇಕೆಂದುದನ್ನೇ ಹೇಳಿದರು.

"ಇವಳು ಹಾಡುವದನ್ನು ಕೇಳಿ ನಾನೂ ಈಗ ಕಲಿತುಕೊಂಡಿದ್ದೇನೆ." ಎಂದು ತಂಗಿಯನ್ನು ಪ್ರಶಂಸಿಸಿ ಅರುಣಾ ಹೇಳಿದಳು.

"ನಿಮ್ಮ ಹಾಡು ಎಂದು ಕೇಳಿಸುತ್ತೀರಿ ಹಾಗಾದರೆ?" ಎಂದು ಮಾಧವ ಪ್ರಶ್ನಿಸಿದ.

"ನಾಲ್ಕು ಜನರೆದುರು ಹಾಡುವಷ್ಟು ಪಾರಂಗತಳಲ್ಲ ನಾನು." ತುಂಬ ವಿನಯವಾಗಿ ಹೇಳಿದಳು ಕರುಣಾ.

"ಅದಕ್ಕೇನು, ಮುಂದಿನ ಭಾನುವಾರ ನಮ್ಮ ಮನೆಗೆ ಬನ್ನಿ. ತಲೆ-ಬೇಸರಾಗುವಷ್ಟು ಹಾಡು ಹೇಳಿಸುತ್ತೇನೆ." ಎಂದು ಕರುಣಳ ಪರವಾಗಿ ಆಶ್ವಾಸನವಿತ್ತರು ಗಣಪತರಾಯರು.

"ಇವಳಿಗೆ ಅದೊಂದು ಹುಚ್ಚು ನೋಡಿರಿ. ನೋಡಿದಾಗೆಲ್ಲ ಹಾಡು, ಇಲ್ಲವೇ ಯಾವುದಾದರೊಂದು ಪುಸ್ತಕ, ಇವೆರಡಿದ್ದರಾಯ್ತು. ಮನೆಯನ್ನೂ ಮರೆಯುತ್ತಾಳೆ; ತನ್ನನ್ನೂ ಮರೆಯುತ್ತಾಳೆ." ಎಂದು ಅರುಣಾ ಹೇಳಿದಳು. ಅವಳ ಮಾತಿನಲ್ಲಿ ತಂಗಿಯ ಬಗೆಗಿರುವ ಅಭಿಮಾನ ಮೂಡಿ ನಿಂತಿತ್ತು.

"ಇನ್ನು ಹೊರಡುತ್ತೇವೆ ನಾವು. ಮಾಧವರಾವ್, ನಿಮಗೆ ತುಂಬ 'Thanks.'" ಎಂದು ಅಭಿವಂದಿಸಿ ಸುಧಾಕರನತ್ತ ತಿರುಗಿ "ನೀವಿಂದು ಆಟದ ರಸದೂಟವನ್ನೇ ಒದಗಿಸಿದಿರಿ. ನಿಮ್ಮ ಪರಿಚಯವಾದುದು ಬಹಳ ಸಂತೋಷ ನಮಗೆ." ಎಂದು ನಮಸ್ಕರಿಸಿದ ಗಣಪತರಾಯರಿಗೆ ಪ್ರತಿಯಾಗಿ ಸುಧಾಕರನೂ ನಮಸ್ಕರಿಸಿದ.

ಅರುಣಾ ತಂಗಿಯೊಂದಿಗೆ ಮುಂದೆ ನಡೆದಳು. ಬಾಗಿಲವರೆಗೆ ಹೋಗಿದ್ದ ಗಣಪತರಾಯರು ತಿರುಗಿ, "ಅಲ್ಲ ಮಾಧವರಾವ್, ನೀವೂ ಹೊರಗೆ ಬರುವ ದಿಲ್ಲವೇ? ಸಾಯಂಕಾಲವಾಗಿದೆ. ನೀವೂ ತುಸು ತಿರುಗಾಡಿದಂತಾಯ್ತು, ನಮ್ಮನ್ನು ಕಳಿಸಿದಂತೆಯೂ ಆಯ್ತು. ಬಹಳ ದೂರ ಬೇಡ, ಕಾಲೇಜ ಬೀದಿಯು ವರೆಗೆ ಬರಬಹುದಲ್ಲ?" ಎಂದು ಕರೆದರು.

ಎಲ್ಲರೂ ಕಾಲೇಜಿನ ಬದಿಯ ತೋಟದಲ್ಲಿ ಹಾಯ್ದು ನಡೆದರು.

ಅಂದಿನ ಆ ಗೆಲುವಿನ ವಾತಾವರಣ, ಹೊಸ ಪರಿಚಯದ ಹರುಷ ಒಬ್ಬೊಬ್ಬರ ಮನದಲ್ಲಿ ಹಲವಾರು ಭಾವತರಂಗಗಳನ್ನೆಬ್ಬಿಸಿದ್ದವು.

ಬಹಳ ದಿನಗಳ ಮೇಲೆ ಆತ್ಮೀಯ ಸ್ನೇಹಿತರನ್ನು ಕೂಡಿಕೊಂಡ ತೃಪ್ತಿ ಮಾಧವನಿಗೆ.

ಇದರ ಜೊತೆಗೆ ಸುಧಾಕರನಂತಹ ಸೊಗಸು ಆಟಗಾರನ ಸ್ನೇಹದ ಲಾಭ ಗಣಪತರಾಯರಿಗೆ ಹೆಚ್ಚಾಗಿ ದೊರಕಿದ್ದಿತು.

ಈ ದಿನ ಮೋಜಿನಿಂದ ಕಳೆದುದರ ಆನಂದ ಅರುಣಳಿಗೆ.

ಸಂಜೆಯ ರಾಗರಂಗದಲ್ಲಿ ಮಿಂದ ಆ ಹೂಗಿಡಗಳ ಮಧ್ಯೆ ಮೆಲ್ಲಡಿಯಿಡುತ್ತ ನಡೆವ ಕರುಣಾಳ ಹೃದಯ ಹೇಳಲಾಗದ ಹರುಷದಲೆಯ ಸ್ಪರ್ಶದಲ್ಲಿ ಪುಲಕಗೊಂಡಿತ್ತು.

ಅವಳ ಹೃದಯದಲ್ಲಿ ಈ ವಿಚಿತ್ರ ಹರುಷಲಹರಿಗಳೇಕೋ ಅವಳಿಗೇ ತಿಳಿಯದು !

ಈ ಸಂಜೆಯ ಪ್ರಕೃತಿಯ ಚೆಲುವೋ ?

ನಿನ್ನಿನ ಬೆಳುದಿಂಗಳ ಸೊಗಸೋ ?

ಇವೆರಡರಲ್ಲಿ ಮೂಡಿ ಬಂದ ಸುಧಾಕರನ ಆಟವೋ ?

ಇಲ್ಲವೆ ಇವೆಲ್ಲವುಗಳ ಸಾಮರಸ್ಯಭಾವದ ಸುಖದ ಸುಳಿಯಲ್ಲಿ ಹೃದಯ ಅಲೆಯುತ್ತದೆಯೋ ?

ಕಾರಣವನ್ನು ವಿಂಗಡಿಸಿ ಗುರುತಿಸಿ ಹೇಳಲು ಬಾರದು.

ಅದು ಮಾತಿಗೆ ನಿಲುಕದುದು.

ಈ ಬಗೆಯ ಭಾವಸಂಮೋಹದಲ್ಲಿ ನಡೆದ ಕರುಣಾಳನ್ನು ಗುಲಾಬಿಯ ಕಂಟಿಯೊಂದು ತಡೆಯಿತು, ಮುಂದೆ ಹೋಗಗೊಡದಂತೆ.

ಹಸುರೆಲೆಯ ಮರೆಯಲ್ಲಿ ಅದೇ ಅರಳುತ್ತಲಿದೆ ಚೆಂಗುಲಾಬಿ!

ತಿಳಿಹಸಿರು ಸೀರೆ, ಗುಲಾಬಿಗೆಂಪಿನ ರವಿಕೆಯನ್ನು ತೊಟ್ಟ ಕರುಣಾ ಆ ಮುಗ್ಧ ಹೂವಿನತ್ತ ನೋಡಿದಳು.

ಎಷ್ಟಾದರೂ ಸಮಾನಧರ್ಮಿಗಳಲ್ಲವೇ ?

ರಸ್ತೆಗೆ ಬರುವವರೆಗೆ ಯಾರೂ ಹೆಚ್ಚಾಗಿ ಮಾತನಾಡಿರಲಿಲ್ಲ.

ಹೋಗುವಾಗ ಗಣಪತರಾಯರು ಮತ್ತೊಂದು ಬಾರಿ ಸುಧಾಕರನನ್ನು

ಅಭಿವಂದಿಸಿ, ಮಾಧವನಿಗೆ ನಮಸ್ಕಾರ ಹೇಳಿ "ನಮ್ಮನ್ನು ಬೀಳ್ಕೊಡಿರಿ ಇನ್ನು. ನಮ್ಮ ನೆನಪಿರಲಿ ಸುಧಾಕರ." ಎಂದು ಹೇಳಿದರು.

ಅರುಣಾಬಾಯಿಯು, "ನಿಮ್ಮ ಸ್ನೇಹಿತರನ್ನು ಕರೆದುಕೊಂಡು ಒಂದು ಸಲ ಬರಬೇಕು." ಎಂದು ಮಾಧವನಿಗೆ ಹೇಳಿ "ನಮಸ್ಕಾರ, ಹೋಗಿಬರುತ್ತೇವೆ." ಎಂದು ಮುಗುಳ್ನಗೆಯಿಂದ ನಮಸ್ಕರಿಸಿದಳು. ಕರುಣಾಳೂ ಅಕ್ಕನ ಜೊತೆಯಲ್ಲಿಯೇ ನಿಂತಿದ್ದಳು.

ಅವರಿಬ್ಬರಿಗೂ ಕೃತಜ್ಞತೆಯಿಂದ ಅಭಿವಂದಿಸಿದ ಸುಧಾಕರ.

ಕರುಣಾಳಿಗೆ ಮಾತು ಬರಲಿಲ್ಲ. ಹೃದಯದಲ್ಲಿಯೇ ತನ್ನ ಮೆಚ್ಚಿಕೆ, ಅಭಿವಂದನೆಗಳನ್ನು ಸಲ್ಲಿಸುವಾಗ ಆವಳಿಗೆ ಹೊಸ ಅನುಭವವೊಂದು ಸುಳಿದು ಮೈಯೆಲ್ಲ ಹಿತವಾದ ಕಂಪನಕ್ಕೊಳಗಾಯಿತು.

## ಪ್ರಕರಣ : ೨

ಬಚ್ಚಲುಮನೆಯಲ್ಲಿ ಆರುಣಾ ಪಾತ್ರೆ ತೊಳೆಯುತ್ತಿದ್ದಳು. ಎದುರಿಗೆ ತಾಟು ಬಟ್ಟಲು, ಮತ್ತೆ ನಾಲ್ಕಾರು ಪಾತ್ರೆಗಳಿದ್ದವು. ಅವುಗಳಿಗೆಲ್ಲ ಮಣ್ಣು ಹಚ್ಚಿ ತಿಕ್ಕಿ ಇಟ್ಟಳು. ದೀಪದ ಹುಳುವೊಂದು ಆವಳ ಗಲ್ಲದ ಮೇಲೆ ಕೂತಿತು. ಕೈಯೆಲ್ಲ ಮುಸುರೆ, ಮಣ್ಣು. ಹಾಗೆಯೇ ಅಂಗೈಯ ಹಿಂಬದಿಯಿಂಡ ಅದನ್ನು ಅಟ್ಟಿದಳು.

ಮತ್ತೆ ಪಾತ್ರೆ ತೊಳೆಯಹತ್ತಿದಳು.

ಓದಲು ಕುಳಿತ ಕರುಣಾಳಿಗೆ ಮನಸ್ಸು ಹಿಡಿಯಲಿಲ್ಲ. ತೆರೆದ ಪುಸ್ತಕ ಹಾಗೆಯೇ ಇತ್ತು. ಗೋಡೆಯ ನೀಲವರ್ಣದ ಹಿನ್ನೆಲೆಯಲ್ಲಿ ಕಂಗೊಳಿಸುವ ವಿವಿಧ ಭಾವಚಿತ್ರಗಳು ಇವಳೆಡೆಗೇ ನೋಡುತ್ತಿದ್ದವು.

ಪ್ರಕೃತಿಯ ಕೆಲವು ಸುಂದರ ಚಿತ್ರಗಳಿದ್ದವು. ವನ, ಬೆಟ್ಟ, ಭೋರ್ಗರೆವ ತಡಸಲುಗಳ ಚಿತ್ರಗಳು. ಅವಳ ಮೆಚ್ಚಿನ ಕವಿಗಳ ಚಿತ್ರ ಕೆಲವು. ಒಂದು ಬದಿಗೆ ಶ್ರೇಷ್ಠ ಕಲಾವಿದರ ಭಾವಚಿತ್ರಗಳು. ಅವುಗಳಲ್ಲಿ ಕೈಯಲ್ಲಿ 'ತಾನಪುರಾ' ಹಿಡಿದು ನಾದಸಮಾಧಿಯಲ್ಲಿದ್ದ ಅಮೀರಖಾನ ಒಂದು. ಹೃದಯತಂತಿಯನ್ನು ಮೀಟುವಂತೆ ಸಿತಾರದ ತಂತಿಗಳನ್ನು ಮೀಟಿ ಮನದ ಭಾವಗಳಿಗಿಂತ ಮೃದುಳ, ಕೋಮಲವಾದ ಸ್ವರಜಾಲವನ್ನು ನೇಯುತ್ತಿರುವ ರವಿಶಂಕರ

ಇನ್ನೊಂದು.

ಪುಸ್ತಕವನ್ನು ಬದಿಗಿರಿಸಿದಳು. ತಲೆದಿಂಬಿಗೆ ಮುಖವನ್ನಿಟ್ಟು ಹಾಗೆಯೇ ಕೆಲನಿಮಿಷ ಮಲಗಿದಳು. ಹುಂಣಿವೆ ಕಳೆದು ಒಂದೆರಡು ದಿನಗಳಾಗಿದ್ದವು.

ಮತ್ತೆ ಎದ್ದು ಕುಳಿತಳು. ಆ ಏಕಾಂತದ ಮೌನ ಅವಳನ್ನು ಪೀಡಿಸಿತು. ತುಂಟ ಹುಡುಗರು ಅಕ್ಕನನ್ನು "ನನ್ನೊಡನೆ ಆಡಲು ಬಾ" ಎಂದು ಅತ್ತಿತ್ತ ಎಳೆದಾಡುವದಿಲ್ಲವೇ? ಹಾಗೆ ಕರುಣಾಳನ್ನು ಅನೇಕ ಭಾವನೆಗಳು ಸೆಳೆದಾಡ ಹತ್ತಿದವು.

ಕೋಣೆಯಲ್ಲಿ ಅತ್ತಿತ್ತ ತಿರುಗಾಡಹತ್ತಿದಳು. ಮತ್ತೆ ದೀಪ ಹಚ್ಚಿದಳು, ಆ ಬೆಳಕಿನಲ್ಲಾದರೂ ಮನವನ್ನು ಕಾಡುವ ತುಂಟ ಭಾವವನ್ನು ನೋಡ ಬೇಕೆಂದು. ಅದೆಂತಹ ಚಪಲ? ದೀಪ ಹತ್ತುವದರಲ್ಲಿಯೇ ಮಾಯವಾಗಿ ಬಿಟ್ಟಿತ್ತು ಆ ಭಾವನೆ. ಕರುಣಾಳಿಗೆ ತುಂಬ ಸಿಟ್ಟು ಬಂದಿತು. ಮೃದುವಾಗಿ ನಕ್ಕುಬಿಟ್ಟಳು.

ಒಂದೊಂದಾಗಿ ಭಾವಚಿತ್ರಗಳನ್ನು ನೋಡಹತ್ತಿದಳು. ಅನಂತ ಸೊಬಗಿನ ವಿಕಸಿತ ಹೃದಯದಲ್ಲಿ ಕುಳಿತು ಮಧುರಗೀತವನ್ನು ಕೇಳುತ್ತಿರುವ ಚಿತ್ರ ಅವಳ ಕಣ್ಣನ್ನು ಸೆಳೆದಿತ್ತು.

ಮತ್ತೆ ಪುಸ್ತಕ ತೆರೆದಳು. ನಿರ್ಜೀವ ಕರಿ ಅಕ್ಷರಗಳು! ಬೇಡವಾಯ್ತು. ಎದುರಿಗಿದ್ದ ಕಪಾಟು ತೆರೆದಳು. ಸಾಲಾಗಿರಿಸಿದ್ದ ಪುಸ್ತಕಗಳನ್ನು ನೋಡಹತ್ತಿದಳು. ಅದರಲ್ಲೊಂದನ್ನು ಎತ್ತಿಕೊಂಡಳು.

"ಭಾವಗೀತಗಳು."

ಮಗ್ನಳಾಗಿ ಓದಹತ್ತಿದಳು:

............

ಕೊಳಲನೂದಿದನ್ನ । ಸ್ವಾಮಿ
ಕೊಳಲನೂದಿದ । ಎಲ್ಲೋ
ಕೊಳಲನೂದಿದ......
ಯಾವ ಜನ್ಮದಲ್ಲೊ ಏನೊ
ನಾವು ತೊರೆದು ಬಂದ ಕರುಳು
ಜೀವ ಮಿಡಿಸಿ ನುಡಿಸಿ ನುಗಿಸಿ
ತಾಯಿ ಬಾರೆ ಎನ್ನುವಂತೆ......

............
ರಂಗ ತಾನು ಇದ್ದಲ್ಲಿಂದ
ತನ್ನ ನಲ್ಲೆಯುರಿಗೆಲ್ಲ
ಗಾಳಿಸುಳಿಯ ತಾನ ಮಿಡಿದು
ಮುದ್ದ ತೇಲಿಬಿಟ್ಟನೇನಽ.......

"....ಮುದ್ದ ತೇಲಿಬಿಟ್ಟನೇನ!"

ಕವನ ಹೃದಯದಲ್ಲಿ ಬೆರೆತು ನಾದದಲ್ಲಿ ಕಳೆಗೊಂಡಿತು. ಕರುಣಾಳ ಮಧುರ ಕಂಠದಲ್ಲಿ ಅದು ಮತ್ತೂ ಇಂಪಾಯ್ತು. ಮತ್ತೆ ಮತ್ತೆ ಹಾಡಿದಳು.

"....ತೇಲಿ ಬಿಟ್ಟನೇನಽ ?"

ಅರೆಕ್ಷಣ ಕಂಣೆವೆಗಳು ಮುಚ್ಚಿಕೊಂಡವು.

"ರಂಗ ಮುದ್ದು ತೇಲಿಬಿಟ್ಟರೆ ನಿನ್ನ ಗಲ್ಲವೇಕೆ ಕೆಂಪೇರಿತು ?" ಎಂದು ಕೇಳಿತು, ಒಳಗೇ ಅವಿತಿದ್ದ ಆ ತುಂಟ ಭಾವನೆ.

ಕರುಣಾಳಿಗೆ ನಾಚಿಗೆಯಾಯ್ತು. ಮೃದುವಾಗಿ ತನ್ನ ಗಲ್ಲವನ್ನು ನೇವರಿಸಿ ಕೊಂಡಳು.

ಆ ಗಾಳಿಗುಂಟೆ ತಾನೂ ತೇಲುತ್ತಿದ್ದಳು.

"ಕರುಣಾ!" ದೂರದಿಂದ ಧ್ವನಿ ಬಂತು.

"ಕರುಣಾ!" ಆ ಧ್ವನಿ ಈ ಸಲ ಸಮೀಪದಿಂದಲೇ ಕೇಳಬಂದಿತು.

ಕಣ್ದೆರೆದು ಹಿಂಪೆ ತಿರುಗಿ ಕರುಣಾ ನೋಡಿದಳು.

ಗಣಪತರಾಯರು ಬಾಗಿಲಲ್ಲಿ ಬಂದು ನಿಂತಿದ್ದರು.

"ನಾನು ಕರೆದದ್ದು ಕೇಳಿಸಲಿಲ್ಲವೇ ?"

ಕರುಣಾಳಿಗೆ ಮುಖವೆತ್ತದಂತಾಯ್ತು. ಅಷ್ಟು ನಾಚಿಕೆ. "ತಪ್ಪಾಯ್ತು.. ಮಾಮಾ!" ಕಂಗಳಲ್ಲಿ ನೀರು ತುಂಬಿತ್ತು.

"ಹೀಗೇಕೆ ಕರುಣಾ ? ನೀರು ಬೇಕಾಗಿತ್ತು, ಕೂಗಿದೆ. ಉತ್ತರ ಬರಲಿಲ್ಲ. ಕೋಣೆಯಲ್ಲಿ ದೀಪವಿತ್ತು. ಮಲಗಿದ್ದೀಯೋ ಏನೋ ಎಂದು ನೋಡಲು ಬಂದೆ ಅಷ್ಟೆ."

ನೀರು ತರಲು ಕರುಣಾ ಎದ್ದಳು. ತನ್ನ ಈ ಮುಟ್ಟೆದರೆ ಮುರುಟುವ

ಸ್ವಭಾವವನ್ನು ನೆನೆದು ತನ್ನನ್ನೇ ಹಳಿದುಕೊಂಡಳು. ಎಂತಹ ಅರಿವುಗೇಡಿತನ!

"ನಾನೇ ತೆಗೆದುಕೊಳ್ಳುತ್ತೇನೆ. ನೀನು ಮಲಗು ಕರುಣಾ."

"ಇಲ್ಲ ಮಾಮಾ, ನಾನೇ ತಂದು ಕೊಡುತ್ತೇನೆ." ಎಂದು ಕರುಣಾ ಒಳಗೆ ಓಡಿದಳು.

ಕರುಣಾ ತಂದುಕೊಟ್ಟ ತುಂಬಿದ ತಂಬಿಗೆ ತೆಗೆದುಕೊಂಡು ತಮ್ಮ ಕೋಣೆಗೆ ಹೋದರು ಗಣಪತರಾಯರು. ಕರುಣಾ ಮತ್ತೆ ತನ್ನ ಕೋಣೆಯ ಕಡೆಗೆ ಹೊರಟಳು. ಒಳಗೆ ಹೋಗಲು ಮನಸ್ಸಾಗಲಿಲ್ಲ. ಹಿಂತಿರುಗಿದಳು. ಏನು ಮಾಡಲೂ ತಿಳಿಯದಾಯ್ತು. ಬಚ್ಚಲುಮನೆಗೆ ಬಂದಳು. ಅಕ್ಕ ಪಾತ್ರೆ ತೊಳೆದು ಮುಗಿಸಿದ್ದಳು. ಅಕ್ಕನ ಬದಿಯಲ್ಲಿಯೇ ಕುಳಿತುಕೊಂಡಳು. ತೊಳೆದ ಪಾತ್ರೆಯೊಂದನ್ನು ಪಂಚೆಯಿಂದ ಒರೆಸಹತ್ತಿದಳು.

"ಕರುಣಾ, ಓದು ಮುಗಿಯಿತೇ?" ಎಂದು ಅರುಣಾ ಕೇಳಿದಳು.

"ಬೇಸರ ಬಂದಿತು."

"ಮಲಗಿದ್ದೆಯಲ್ಲವೇ ?"

"ಇಲ್ಲ."

"ಇವರು ಕರೆಯಲಿಲ್ಲವೇ ?"

"ಹೌದು. ನನಗೆ ಬೇಗ ಕೇಳಿಸಲಿಲ್ಲ. ಮಾಮಾನಿಗೆ ನೀರು ಬೇಕಾಗಿತ್ತು.."

ತಂಗಿಯ ಮುಖಪಟಿಗೆ ನೋಡಿದಳು. ಕಂದಿತ್ತು. ಕಕ್ಕುಲತೆಯಿಂದ ಅವಳ ಗದ್ದವನ್ನು ಒಂದು ಕೈಯಿಂದ ಹಿಡಿದೆತ್ತಿ "ಹಾಡುತ್ತ ಕುಳಿತಿದ್ದೆ ಅಹುದಲ್ಲೊ?" ಎಂದು ನಗುತ್ತ ಕೇಳಿದಳು.

ಕರುಣಾಳ ಕಂಣುಗಳು ಅಹುದೆಂದು ಉತ್ತರಿಸಿದವು.

"ನೀನು ಮಲಗು ಹೋಗು ಕರುಣಾ. ಇವನ್ನಿಷ್ಟು ಒರೆಸಿಟ್ಟು ಬರುತ್ತೇನೆ ನಾನು."

"ನಾನೂ ಒರೆಸುತ್ತೇನಕ್ಕಾ" ಹಟಮಾರಿ ಮಗುವಿನ ಧ್ವನಿಯಲ್ಲಿ ಹೇಳಿದಳು ಕರುಣಾ.

"ಬೇಡ ಕರುಣಾ! ನೀನು ಮತ್ತೆ ಬೆಳಿಗ್ಗೆ ಬೇಗನೆ ಏಳಬೇಕು, ಹೋಗು. ಮಲಗು...." ಎಂದು ತಾಯಿಯಂತೆ ವಾತ್ಸಲ್ಯದಿಂದ ಹೇಳಿದಳು.

ಮನಸ್ಸಿಲ್ಲದೆ ಬೇಸರದಿಂದ ಕರುಣಾ ತನ್ನ ಕೋಣೆಯತ್ತ ಸಾಗಿದಳು.

...."A. I. R. Bombay : (ರಾಗ : ಮಿಶ್ರ ಖಮಾಜ)

ಚಂಚಲಮನವಾ ಚೈನ ನ ಪಾಯೆ,
ಪ್ರೀತಮು ಪ್ಯಾರಾ ದೂರಬಸಾಯೆ
ರಹರಹಕೆ ಘಬರಾಯೇ !
ಪಲಕೊಮೆ ನಹಿ ನೀಂದ
ಪಿಯುಬಿನ ಅಗನಿ ವಿರಹಜಲಾಯೇ !

"ನೀನು ಮಲಗು ಹೋಗು ಅರುಣಾ !"

....ಅಹುದು. ಅರುಣಳ ಸೋದರತ್ತೆ ಅಂದಿದ್ದಳು ಹಿಂದಕ್ಕೆ. ಹತ್ತು, ಹನ್ನೆರಡು ವರುಷದ ಅರಣಾ ಆಗ ಬಳಲಿ, ಮಲಗಲು ಹೊರಟಿದ್ದಳು.

ಹಿಂದಿನಿಂದಲೇ ಗರ್ಜನೆ ಕೇಳಿ ಬಂದಿತು: "ಹೋಗೆಂದೊಡನೆ ಹೊರಟಳು! ಇವನ್ನೆಲ್ಲ ಯಾರು ಬಳಿಯಬೇಕು? ನೀನೇನು ಮಹಾರಾಜನ ಮಗಳೇ?" ಎಂದು ಹಿಂದಿನಿಂದ ಬಂದು ಅತ್ತೆ ರಟ್ಟೆ ಹಿಡಿದು ಎಳೆದಿದ್ದಳು.

ಅಂದು ದೇಹಕ್ಕಿಂತ ಮನಸ್ಸಿಗೆ ಬಳಲಿಕೆ ಹೆಚ್ಚಾಗಿತ್ತು. ಎಲ್ಲಿಯಾದರೂ ಪ್ರಾಣಕೊಡಬೇಕೆಂದಿದ್ದಳು ಅರುಣಾ. ತಾಯಿಯನ್ನು ನೆನೆದು ಇಡೀ ರಾತ್ರಿ ಕಂಬನಿಗರೆದಿದ್ದಳು. ಅದೂ ಹೆದರಿ ಹೆದರಿ ! ತನ್ನ ಅಳು ಅತ್ತೆಗೆ ಕೇಳಿಸದಂತೆ !

ಒಂದೊಂದಾಗಿ ನೆನಪಾದವು. ತಂದೆ ತೀರಿಕೊಂಡಾಗ ತಾನು ಏನನ್ನೂ ಅರಿಯದ ಮಗು. ಕರುಣಳಂತೂ ತೊಟ್ಟಿಲ ಕೂಸು.

ತಾಯಿ ತೀರಿದಾಗ ಕರುಣಾಳು ನಾಲ್ಕೈದು ವರುಷದ ಹುಡಿಗೆ.

ಅರುಣಳಿಗೆ ಬಾಲ್ಯದ ನೆನಹು ಕಹಿಯಾಗಿತ್ತು. ಬದುಕಿನಲ್ಲಿ ಬಾಲ್ಯ ಅತಿ ಮಧುರವೆಂದು ಹೇಳುತ್ತಾರೆ. ಆದರೆ ಅವಳ ಪಾಲಿಗೆ ಅದು ಇರಲಿಲ್ಲ. ಉಳಿದವರೆಲ್ಲ ತಮ್ಮ ಬಾಲ್ಯದ ಹರುಷದ ದಿನಗಳನ್ನು ನೆನೆಯುತ್ತಾರೆ. ಅರುಣಳಿಗೆ ಅದಾವುದರ ನೆನಪೂ ಇಲ್ಲ. ಅವಳಿಗೆ ಜೇಡವಾದ ನೆನಪೆಂದರೆ ಒಂದೇ ಒಂದು. ಅತ್ತೆಯ ಪೀಡೆ, ಹಿಂಸೆ. ಸೋದರಮಾವನ ನಿರ್ಲಿಪ್ತತೆ. ಆತ ಆಗಾಗ ಹೆಂಡತಿಯ ಮುಖವನ್ನು ತಪ್ಪಿಸಿ ತನ್ನಲ್ಲಿ ತೋರುತ್ತಿದ್ದ ಮಮತೆ. ಅವನ ಮುಖ ನೋಡಿದಾಗ ಅರುಣಳಿಗೇ ಮರುಕವಾಗುತ್ತಿತ್ತು. ಮತ್ತೇನು ? ತಾಯಿಯಂತೆಯೇ ಬೆಳೆದ ಅವಳ ಮಕ್ಕಳು. ತಬ್ಬಲಿ ಕರುಣಳನ್ನು, ಮಮತೆಯ ಆಸರಕ್ಕೆರವಾದ ಕರುಣಳನ್ನು ಅಸಡ್ಡೆಯಿಂದ ಕಾಣುವ ಆ ಹುಡುಗರು !

............

"ನೀನು ಮಲಗು ಹೋಗು ಅರುಣಾ." ದೂರದ ಅಸ್ಪಷ್ಟ ಕರ್ಕಶ ಧ್ವನಿ.

............

"ನೀನು ಮಲಗು ಹೋಗು ಕರುಣಾ."

ಅರುಣಳಿಗೆ ತಾನಂದ ಮಾತು ತನಗೇ ಹಿಂದಿನ ನೆನಪು ತಂದುಕೊಟ್ಟಿತು. ಕಣ್ಣೀರು ಚಿಮ್ಮಿ ಬಂದವು.

ತನ್ನ ಬದುಕೆಲ್ಲ ಒಮ್ಮೆ ಕಣ್ಣೆದುರು ಹಾಯ್ದುಹೋಯಿತು. ಆ ಕಂಬನಿ ದುಂಬಿದ ಕಂಗಳಲ್ಲಿ, ಅವಳುಂಡ ಸಿಹಿಕಹಿಗಳ ಭಾವವಿತ್ತು, ಕೃತಜ್ಞತೆಯಿತ್ತು.

ಕೈಯಲ್ಲಿಯ ಪಾತ್ರೆ ಜಾರಿ ಬಿದ್ದಾಗ ಅರುಣಳು ಈ ಪ್ರಪಂಚಕ್ಕಿಳಿದಳು. "ಹಾಳು ನೆನಪುಗಳು...." ಎಂದುಕೊಂಡು ಕಣ್ಣೊರೆಸಿಕೊಂಡೆದ್ದಳು.

ಪಾತ್ರೆಗಳನ್ನೆಲ್ಲ ಒಳಗಿರಿಸಿ, ಬಾಗಿಲನ್ನು ಮುಚ್ಚಿ, ನಡುಮನೆಗೆ ಬಂದಳು. ಗ್ಲಾಸಿನಲ್ಲಿ ಹಾಲು ತೆಗೆದುಕೊಂಡು ಕೋಣೆಯತ್ತ ಹೊರಟಳು.

ಕರುಣಾಳ ಕೋಣೆಯ ಬಾಗಿಲಿಗೆ ಬಂದಳು. ಮೃದುವಾಗಿ ಬಾಗಿಲ ನ್ನೊತ್ತಿದಳು. ದೀಪ ಹಚ್ಚಿದಳು. ಕರುಣಾ ಮಗುವಿನಂತೆ ಮಲಗಿದ್ದಳು. ತಂಗಿಯ ಮುಖ ನೋಡಿ ಅರುಣಳ ಕರುಳಿನಲ್ಲಿ ಹಾಲು ಹರಿಸಿದಂತೆ ನೆಮ್ಮದಿ, ತೃಪ್ತಿ. "ಮುಗ್ಧ ಹುಡಿಗೆ, ಕನಸು ಕಾಣುತ್ತಿದ್ದಾಳೆ." ಎಂದು ಮನಸ್ಸಿನಲ್ಲಿ ಅಂದುಕೊಂಡಳು. ಮತ್ತೆ ದೀಪವಾರಿಸಿ ಬಾಗಿಲನ್ನು ಮುಂದಕ್ಕೆಳೆದು ಮುಂವೆ ಸಾಗಿದಳು. ತನ್ನ ಕೋಣೆಯಲ್ಲಿ ಕಾಲಿಟ್ಟಳು.

ಗಣಪತರಾಯರು ಮಲಗಿ ಇನ್ನೂ ಪತ್ರಿಕೆಯನ್ನು ತಿರುವಿ ಹಾಕುತ್ತಲೇ ಇದ್ದರು. ಬಾಗಿಲ ಬಳಿ ಸದ್ದನ್ನು ಕೇಳಿ ಮಲಗಿದಲ್ಲಿಂದಲೇ "ಅರುಣಾ!" ಎಂದು ಕರೆದರು.

ಇದು ಅವರ ನಿತ್ಯದ ರೂಢಿ. ಹೆಂಡತಿಯನ್ನು ಹೀಗೆ ಬಾಯಿತುಂಬ ಕರೆಯುವದರಲ್ಲಿ ಒಂದು ಬಗೆಯ ಆತ್ಮಿಕ ಸುಖ, ಸಂತೋಷ ಅವರಿಗಿತ್ತು.

"ಆಂ!" ಎಂದು ಅರುಣ ಉತ್ತರಿಸಿದಳು.

ಹಾಲಿನ ಗ್ಲಾಸನ್ನು ಬದಿಯಲ್ಲಿದ್ದ ಕರೀಮರದ ಹೊಳಪಿನ ಚಿಕ್ಕ ಟೇಬಲ್ಲಿನ ಮೇಲೆ ಇಟ್ಟಳು. ಅಸ್ತವ್ಯಸ್ತವಾಗಿ ಹರವಿದ ಪುಸ್ತಕಗಳನ್ನು ಕಪಾಟಿನಲ್ಲಿ ಹೊಂದಿಸಿಟ್ಟಳು. ಕೋಣೆಯಲ್ಲಿ ಅತ್ತಿತ್ತ ಬಿದ್ದ ವೃತ್ತಪತ್ರಿಕೆಯ ಬಿಡಿ ಕಾಗದ

ಗಳನ್ನೆಲ್ಲ ಮತ್ತೆ ಹೊಂದಿಸಿಡುವದರೊಳಗೆ ಅರುಣಳ ತಾಳ್ಮೆ ಮೀರಿತು. "ಸಣ್ಣ ಹುಡುಗರಾಗಿದ್ದಾರೆ. ಒಂದಿಷ್ಟಾದರೂ ಅಚ್ಚುಕಟ್ಟು ಬೇಡ ಇವರಿಗೆ!" ಎಂದು ಕೊಂಡಳು.

ಗಣಪತರಾಯರು ಯಾವ ಪ್ರತಿಕ್ರಿಯೆಯನ್ನೂ ತೋರಲಿಲ್ಲ. ಸುಮ್ಮನೆ ಓದುತ್ತಿದ್ದರು ಮಾತ್ರ.

"ಓದುವದು ಮುಗಿಯಿತಿಲ್ಲೊ?" ತುಸು ಏರಿದ ಧ್ವನಿಯಲ್ಲಿಯೇ ಕೇಳುತ್ತ ಅವಳು ಮಂಚದ ಬಳಿ ಬಂದಳು.

"ಇನ್ನೂ ಸ್ವಲ್ಪ ಇದೆ." ಮುಖವೆತ್ತದೆ ವಿಕಾರರಹಿತವಾಗಿ ಉತ್ತರಿಸಿದರು.

ಅರುಣಳಿಗೆ ಶಿಸ್ತು, ಅಚ್ಚುಕಟ್ಟುತನ ಎಷ್ಟು ಬೇಕೋ ಅಷ್ಟೇ ಗಣಪತ ರಾಯರಿಗೆ ಬೇಡ. ದಿನಕ್ಕೆ ಒಂದು ಸಲವಾದರೂ ಈ ಅಚ್ಚುಕಟ್ಟು, ಓರಣಗಳ ವಿಷಯವಾಗಿ ಭಾಷಣ ಮಾಡೇ ಮಾಡುತ್ತಿದ್ದಳು. ಆದರೆ ಅದೆಲ್ಲ ನಿರುಪಯುಕ್ತ ವಾಗುತ್ತಿತ್ತು. ಅದಕ್ಕಾಗಿಯೇ ಆಗಾಗ ಅವಳು ರೇಗುತ್ತಿದ್ದಳು. ಅವಳು ರೇಗಿ-ದಷ್ಟೂ ರಾಯರು ಮೌನವಾಗಿರುತ್ತಿದ್ದರು. ಒಂಸೊಂದು ಬಾರಿ ಅವಳನ್ನು ಬೇಕೆಂಪೇ ರೇಗಿಸಿ ಮೋಜು ನೋಡುತ್ತಿದ್ದರು.

ಕೈಯಲ್ಲಿಯ ಪತ್ರಿಕೆಯನ್ನು ಕಸಿದುಕೊಳ್ಳಬೇಕೆಂದಳು. ಅದಕ್ಕಿಂತ ದೀಪವನ್ನೇ ಆರಿಸಿಬಿಡಬೇಕೆಂದು ತಟ್ಟನೆ ಎದ್ದಳು. ಹೋಗುವಾಗ ಕಾಲಲ್ಲಿದ್ದ ಕಪ್ಪುಗಳನ್ನೆಡವಿದಳು. ಕಪ್ಪುಗಳು ಜಲತರಂಗ ಬಾರಿಸಿದವು.

"ಸಂಗೀತ ಚೆನ್ನಾಗಿದೆ." ಎಂದು ನಕ್ಕು ಗಣಪತರಾಯರು ಕೈಯಲ್ಲಿಯ ಪತ್ರಿಕೆಯನ್ನೆಸೆದು ಎದ್ದು ಕುಳಿತರು.

"ಕಪ್ಪನ್ನು ಗೋಡೆಗಿರಿಸಿದ್ದರೆ ನಿಮಗೇನಾಗುತ್ತಿತ್ತು? ಅದೂ ಬೇಡ ನಿಮಗೆ. ಅಷ್ಟು ಆಲಸ್ಯ ಮೈಯುಂಡಿದೆ. ಇದೆಲ್ಲ ನನಗೆ ಸಾಕಾಗಿ ಹೋಗಿದೆ...." ಎಂದು ರೋಸಿಹೋದ ಧ್ವನಿಯಲ್ಲಿ ಹೇಳುತ್ತ ಉರುಳಿದ ಕಪ್ಪುಗಳನ್ನೆತ್ತಿ ಬದಿ ಗಿರಿಸಿದಳು.

"ನಾನು ಮಹಾ ಆಲಸಿಯಲ್ಲವೇ ಅರುಣಾ? ನಿನಗೆಷ್ಟು ತೊಂದರೆ ಕೊಡುತ್ತಿದ್ದೇನೆ ನೋಡು! ಯಾವನಾದರೊಬ್ಬ ಶ್ರೀಮಂತನನ್ನು ನೀನು ಮದುವೆಯಾಗಬೇಕಿತ್ತು!" ಎಂದು ಮುಗುಳುನಗೆ ನಗುತ್ತ ಅರುಣಳ ಕೈಕಡೆಗೆ ನೋಡಿದರು.

ಅರುಣಳಿಗೆ ತಿವಿದಂತಾಯ್ತು. ತಕ್ಷಣ ಅಳು ಬಂದೇಬಿಟ್ಟಿತು.

"ಸುಮ್ಮನೆ ವಿನೋದ ಮಾಡಿದರೆ ಅತ್ತುಬಿಡುವದೇ? ಏನು ಹುಚ್ಚಿ ನೀನು !" ಪಶ್ಚಾತ್ತಾಪದ ಧ್ವನಿಯಲ್ಲಿ ನುಡಿದರು. ಅರುಣಳನ್ನು ಎಳೆದು ತಮ್ಮ ಬದಿಗೆ ಕುಳ್ಳಿರಿಸಿಕೊಂಡರು. ಕಂಣೀರನ್ನೊರೆಸುತ್ತ "ತಪ್ಪಿ ಅಂದುಬಿಟ್ಟೆ ಅರುಣಾ. ನನ್ನ ಸ್ವಭಾವ ನಿನಗೆ ಗೊತ್ತಿಲ್ಲವೇ ?" ಎಂದು ಹೇಳುವಾಗಿನ ಗಣಪತರಾಯರ ಧ್ವನಿಯಲ್ಲಿ ಮರುಕ ಅನುಕಂಪಗಳಿದ್ದವು.

"ಅದೆಂತಹ ನಿಮ್ಮ ಸ್ವಭಾವ ! ಗೊತ್ತಿದ್ದೂ ನನ್ನನ್ನು ಅಳಿಸುವದಲ್ಲವೇ ನಿಮ್ಮ ಸ್ವಭಾವ ?"

"ಅರುಣಾ, ಹಾಗಲ್ಲ ಅದು....ಅದು ನಿನ್ನ ಮೇಲಿನ ಪ್ರೇಮ...." ಎಂದು ಮಮತೆಯಿಂದ ಅವಳ ಭುಜದ ಮೇಲೆ ಕೈಯಿಟ್ಟರು.

ಒಂದೇ ಕಾಲಕ್ಕೆ ಕಾಣಿಸಿಕೊಳ್ಳುವ ಮಳೆ ಬಿಸಿಲುಗಳಂತೆ ಅವಳ ಮುಖದ ಮೇಲೆ ಕಂಬನಿ ಹರುಷಗಳು ಕಾಣಿಸಿಕೊಂಡವು. ಅವಳ ದುಃಖ ಕರಗಿತು.

"ಅರುಣಾ, ನನ್ನ ಜೀವನದಲ್ಲಿ ನೀನು ಹೇಗೆ ಮೂಡಿ ಬಂದಿರುವಿ ನೋಡು! ನೀನಿದ್ದುದರಿಂದಲೇ ನನ್ನ ಜೀವನಕ್ಕೆ ಸಾರ್ಥಕತೆ ಬಂದಿದೆ. ಸಮಾಧಾನ, ಸುಖ ಇವು ನನ್ನ ಅಂಗರಕ್ಷಕವಾಗಿವೆ. ನಾನೆಷ್ಟು ಆಲಸಿಯಾಗಿದ್ದರೂ ನನ್ನನ್ನು ನೀನು ಮಗುವಿನಂತೆ ಆರೈಕೆ ಮಾಡುತ್ತೀ. ನಿನ್ನಂತಹಳನ್ನು ಪಡೆಯಬೇಕಾದರೆ ನಾನು ಜನ್ಮಾಂತರದ ಪುಣ್ಯ ಮಾಡಿ ಬಂದಿರಬೇಕು, ಅರುಣಾ!" ಎನ್ನುತ್ತ ಸಂಪ್ರೀತಿಯಿಂದ ಅವಳ ತಲೆ ನೇವರಿಸಿದರು.

ಒಂದು ನಿಮಿಷ ಇಬ್ಬರೂ ಮಾತನಾಡಲಿಲ್ಲ. ಇಬ್ಬರ ಹೃದಯಗಳೂ ತುಂಬಿ ಬಂದಿದ್ದವು.

"ಅರುಣಾ!" ಎಂದು ಮತ್ತೆ ಮೆಲ್ಲಗೆ ಅವಳ ಕಿವಿಯಲ್ಲಿ ಗಣಪತರಾಯರು ಉಸುರಿದರು.

"ಏನು ?" ಎಂದು ಅರುಣಾ ಮುಖ ನೋಡಿದಳು.

"ನಿಮ್ಮ ಸೋದರಮಾವನ ಕಾಗದ ಬಂದಿದೆಯಲ್ಲ ?"

ಅನಿರೀಕ್ಷಿತವಾದ ಈ ಮಾತಿನಿಂದ ಅರುಣಾ ಅಚ್ಚರಿಪಟ್ಟಳು. ತನ್ನ ಮದುವೆಯಾದ ಒಂದು ವರುಷದಲ್ಲಿ ಕರುಣಾಳನ್ನೂ ತನ್ನ ಜೊತೆಗೆ ಕರೆದು ಕೊಂಡು ಬಂದಿದ್ದಳು. ಆಂದಿಗೆ ಆ ಮನೆಯ ಋಣ ಮುಗಿದಿತ್ತು. ತನಗೊಬ್ಬ

ಸೋದರಮಾವನಿದ್ದಾನೆಂಬ ನೆನಪು ಕೂಡ ಅವಳಿಗೆ ಬೇಡಾಗಿತ್ತು. ಮಾವ ಮೃದುಹೃದಯದವನಿದ್ದರೂ ಅತ್ತೆಯ ಕಠಿಣತೆಗೆ ಆತ ಹೆದರುತ್ತಿದ್ದ. ಮನಸ್ಸಿಲ್ಲದೇ ಕರುಣಾಳನ್ನು ಮನೆ ಬಿಟ್ಟು ಹೋಗೆನ್ನುವ ಪ್ರಸಂಗಕ್ಕೆ ಸಿಲುಕಿದ್ದ.

....ಆ ದಿನ!

....ಇನ್ನೂ ಅರುಣಳಿಗೆ ನೆನಪಿದೆ!

....ಗಾಡಿ ಹೋಟು ನಿಂತಾಗ ಸೋದರಮಾವ ಧಾವಿಸುತ್ತ ನಿಲ್ದಾಣಕ್ಕೆ ಬಂದಿದ್ದ. ಕಣ್ಣೀರು ತುಂಬಿ "ಅರುಣಾ, ನನ್ನನ್ನು ಕ್ಷಮಿಸುತ್ತೀಯಾ? ನನ್ನ ಅಸ್ತಿತ್ವ ಈ ಮನೆಯಲ್ಲಿಲ್ಲವೆಂಬುದು ನಿನಗೆ ಗೊತ್ತಿದೆ. ನಿನಗಾಗುತ್ತಿರುವ ಯಾತನೆಗಳನ್ನು.... ನಾನು ನೋಡಿಯೂ ಮೂಕನಾಗಿರುತ್ತಿದ್ದೆ.....ದೇವರು ನಿನಗೆ ಕಲ್ಯಾಣವನ್ನುಂಟುಮಾಡಿದ್ದಾನೆ.." ಗಣಪತರಾಯರೆಡೆಗೆ ತಿರುಗಿ, "ಇವಳು ನನ್ನ ತಬ್ಬಲಿ ಸೊಸೆ. ನನ್ನನ್ನು...ನನ್ನ ಮನೆಯನ್ನು ಇವಳು ಮರೆಯುದಂತೆ ನೋಡಿಕೊಳ್ಳಿರಿ...." ಎಂದು ಹೇಳುವಾಗ ಮಾವನ ಕೊರಳ ಸೆರೆ ತುಂಬಿ ಬಂದಿತ್ತು...ಕರುಣಳನ್ನು ತಬ್ಬಿಕೊಂಡು "ಕ-ರು-ಣಾ" ಎಂದು ಆರ್ತರಾಗಿ ನುಡಿದಿದ್ದರು....!

ಮರುಕವನ್ನುಂಟುಮಾಡುವ ಮಾವನ ಆ ಮುಖ ಮತ್ತೆ ಕಣ್ಣೆದುರು ಬಂದು ನಿಂತಿತು. "ಏನೆಂದು ಬರೆದಿದ್ದಾರೆ?" ಎಂದು ಕೇಳಿದಳು.

"ಹೆಂಡತಿಗೆ ಜಡ್ಡು....ಸಂಸಾರದ ತೊಂದರೆಗಳು...ಇವನ್ನೆಲ್ಲ ಬರೆದಿದ್ದಾರೆ. ಕೊನೆಗೆ ಕರುಣಾಳ ವಿಷಯವಾಗಿಯೂ ಬರೆದಿದ್ದಾರೆ...." ಎಂದು ಅರ್ಥಪೂರ್ಣವಾದ ಮೌನ ತಾಳಿದರು.

"ಕರುಣಾಳ ವಿಷಯವಾಗಿ? ಎಲ್ಲಿ ನೋಡೋಣ? ಪತ್ರ ಎಲ್ಲಿದೆ?" ಎಂದು ಆತುರ ತೋರಿದಳು.

ಗಣಪತರಾಯರು ಎದ್ದು ಹೋಗಿ ತಮ್ಮ ಕಿಸೆಯಲ್ಲಿದ್ದ ಕಾಗದವನ್ನು ತಂದು ಅರುಣಳ ಕೈಗಿತ್ತರು.

ಅರುಣಾ ಅದನ್ನು ಕೆಲಹೊತ್ತು ಮೌನವಾಗಿಯೇ ಓದಿಕೊಂಡು ಒಮ್ಮೆಲೆ ಓದರಿ ಓದುತ್ತ ಪಾನು ತಿರುವಿದಳು. ಆಗ,—

"....ಅರುಣಳ ತಂದೆಯ ಹೊಲವನ್ನು ಮಾರಿದಾಗ ಎರಡು ಸಾವಿರ ರೂಪಾಯಿಗಳು ಬಂದಿದ್ದವು, ನಿಜ. ಆಗ ನಾನು ದ್ರೋಹ ಮಾಡಿದೆ. ನನಗೀಗ ಪಶ್ಚಾತ್ತಾಪವಾಗಿದೆ. ಒಂದು ಸಾವಿರ ರೂಪಾಯಿಗಳನ್ನು ನಾನು ಎತ್ತಿ ಹಾಕಿದೆ.

ಇದನ್ನು ಹೇಳಲು ನನಗೆ ಈಗ ನಾಚಿಕೆಯೆನಿಸುವದಿಲ್ಲ. ಹೃದಯ ಬಿಂದು ಹೇಳುತ್ತಿದ್ದೇನೆ. ಈ ತಪ್ಪಿಗೆ ಪ್ರಾಯಶ್ಚಿತ್ತವೆಂದು ನಾನು ಹೀಗೆ ಸಂಕಲ್ಪಿಸಿದ್ದೇನೆ:

ಕರುಣಾಳ ಮದುವೆಯನ್ನು ನಾನೇ ಮಾಡುವೆ. ಒಳ್ಳೆಯ ಮನೆತನದ ಸಂಬಂಧ ಹುಡುಕುತ್ತಿದ್ದೇನೆ. ಹಿಂದೆ ಮಾಡಿದ ತಪ್ಪನ್ನು ತೊಳದುಕೊಳ್ಳಬಯಸುವೆ. ಈಗಾಗಲೇ ಕರುಣಾ ಬೆಳೆದಿರಬಹುದು. ಆದಷ್ಟು ಬೇಗನೆ ಮದುವೆ ಮಾಡಿಕೊಡಬೇಕೆಂದಿದ್ದೇನೆ. ನನ್ನ ಮನೆಯ ಸ್ಥಿತಿ ಇಂದು ಇದ್ದಂತೆ ನಾಳೆಗೆ ಇದ್ದೀತೋ ಇಲ್ಲವೋ ಹೇಳಲುಬಾರದು. ದಯವಿಟ್ಟು ಈ ಅವಕಾಶವನ್ನು ನನಗೆ ಕರುಣಿಸಬೇಕು. ಒಂದೆರಡು ಕಡೆಗೆ ವಿಚಾರಿಸಿ ನೋಡಿದ್ದೇನೆ, ಒಳ್ಳೆಯ ಮನೆತನಗಳನ್ನು ನಿಮ್ಮ ಉತ್ತರವನ್ನು ನೋಡಿಕೊಂಡು ಮುಂದಿನ ಕ್ರಮ ಕೈಕೊಳ್ಳುವೆ..."

"ಬಹಳ ನೊಂದುಕೊಂಡಿದ್ದಾರೆ ಅರುಣಾ !" ಗಣಪತರಾಯರು ಪತ್ರದ ಧಾಟಿಗೆ ಒಪ್ಪಿದರು.

ಮಾವನ ಸ್ಥಿತಿ ನೋಡಿ ಅರುಣಳಿಗೆ ಕನಿಕರವೆನಿಸಿದರೂ, ಆತ ಕೊಟ್ಟ ಹಿಂಸೆ, ಒದೆತ, ಬಿರುನುಡಿಗಳು ಅವಳ ಎಳೆ ಹೃದಯದ ಮೇಲೆ ಮಾಸಲಾರದಂತೆ ಪರಿಣಾಮವನ್ನುಂಟುಮಾಡಿದ್ದವು. ಅವೆಲ್ಲ ಒಮ್ಮೆಲೆ ನೆನಪಾಗಿ ಸಿಟ್ಟು ಉಕ್ಕೇರಿತು. "ಈಗೆಲ್ಲ ಅಳುತ್ತಾರೆ. ಆಗ ನಮ್ಮನ್ನು ಹಿಂಸಿಸುವಾಗ ಈ ಅಂತಃಕರಣ ಎಲ್ಲಿ ಓಡಿಹೋಗಿತ್ತೋ !" ಎಂದಳು.

"ಹಾಗಲ್ಲ ಕರುಣಾ. ಮನುಷ್ಯ ಕೆಲವು ಸಲ ಪರಿಸ್ಥಿತಿಯ ಒತ್ತಡಕ್ಕಾಗಿ ತನ್ನ ಮನಸ್ಸಿನ ವಿರುದ್ಧ ಅನ್ಯಾಯಗಳನ್ನೆಸಗಬೇಕಾಗುತ್ತದೆ. ಅದು ಪೂರ್ತಿ ಅವರ ದೋಷವಲ್ಲ. ಈಗ ನೋಡು, ಶಂಕರರಾಯರಿಗೆ ತಮ್ಮ ಹಿಂದಿನ ಕೃತಿಗಳೆಲ್ಲ ಪಶ್ಚಾತ್ತಾಪವನ್ನುಂಟುಮಾಡಿಲ್ಲವೇ ? "

ಅರುಣಳಿಗೆ ಈ ವಿಚಾರ ಸರಿಯಾದುದೆಂಬನಿಸಿತು. ಆದರೂ ಅವಳ ಗಾಯಗೊಂಡ ಮನಸ್ಸಿಗೆ ಮಾತ್ರ ಇನ್ನೂ ಸಮಾಧಾನವೆನಿಸಲಿಲ್ಲ.

"ಆದುದು ಆಗಿಹೋಗಿದೆ. ಅವರ ಮೇಲೆ ನೀನು ಇನ್ನೂ ಕೋಪವಿರಿಸಿಕೊಳ್ಳುವದು ಸರಿಯಲ್ಲ. ಅದು ಹೋಗಲಿ, ಅವರಿಗೆ ಏನೆಂದು ಉತ್ತರ ಬರೆಯಬೇಕು ಹೇಳು ? "

ಅರುಣಾ ಯಾವ ನಿರ್ಧಾರಕ್ಕೂ ಬರುವಂತಿರಲಿಲ್ಲ. ಕುಳಿತಲ್ಲಿಯೇ ನಿರ್ಧರಿಸಬಹುದಾದ ಪ್ರಶ್ನೆಯೇ ಅದು ? ಪರಸ್ಪರರ ಮನಗಳು ಕದಡಿ, ಈ

ಮಧ್ಯೆ ವಿರಸದ ಇಷ್ಟೊಂದು ದಿನಗಳು ಕಳೆದಿವೆ. ಅವೆಲ್ಲ ನೊಂದ ಭಾವನೆಗಳು ಸರಿಪಟ್ಟು, ಮಾವನ ಮನೆಗೆ ಕಾಲಿಡಬೇಕಲ್ಲ! ಮಾವನಿಗಾಗಿ ಅನುತಾಪವಿತ್ತಾದರೂ, ಆ ಅತ್ತೆಯನ್ನು ಹೇಗೆ ಮರೆಯಬೇಕು? ಅರುಣಳಿಗೆ ಯಾವುದೂ ತೋಚದಂತಾಯ್ತು. "ಸಾವಕಾಶವಾಗಿ ಆಲೋಚಿಸಿ ಬರೆದರಾಯಿತು." ಎಂದು ಆಕಳಿಸುತ್ತ ಹೇಳಿ, ಏಳುವ ಗಡಿಬಿಡಿ ತೋರಿಸಿದಳು ಅರುಣಾ.

"ನಿದ್ರೆ ಬಂದಿತೇನು ಅರುಣಾ?" ಎಂದು ಕೇಳಿದರು ಗಣಪತರಾಯರು.

"ಇಲ್ಲ. ಯಾಕೆ? ಏನು ಬೇಕಾಗಿತ್ತು? ಇನ್ನೂ ಕೂಡಲೇ?" ಎದ್ದು ನಿಂತೇ ಕೇಳಿದಳು ಅರುಣಾ.

"ಕೂಡು, ಕೂಡು. ಅಷ್ಟೇಕೆ ಅವಸರ?" ಅರುಣಾ ಕುಳಿತನಂತರ "ಯಾಕಿಲ್ಲ.... ಒಂದು ಮಾತು.... ನಿಮ್ಮ ಮಾವನಿಗೆ ಕಾಗದ ಬರೆಯುವ ವಿಷಯ... 'ಹಿಂದುಗಡೆಯಿಂದ ಆಲೋಚಿಸಿ ಬರೆಯಬಹುದು' ಎಂದು ಅಂದರೂ ಕರುಣಾಳ ಮದುವೆಯ ಬಗೆಗೆ ನಾವಾದರೂ ಆಲೋಚನೆ ಮಾಡಬೇಕೋ ಬೇಡವೋ?"

"ನಾವೇನು ಆಲೋಚಿಸಬೇಕು? ಅಂತಹ ಅವಸರವೇನಿದೆ ಈಗ?"

"ಹಾಗಲ್ಲ ಅರುಣಾ. ಅವಳ ಭವಿಷ್ಯದ ವಿಷಯವಾಗಿ ನಮ್ಮ ಆಲೋಚನೆ ಬೇಡವೇ? ನಿನ್ನ ವಿಚಾರವೇನಿದೆ?"

"ನನ್ನ ವಿಚಾರವೇನು? ನೀವಿದ್ದೀರಲ್ಲ. ಸದ್ಯಕ್ಕಂತೂ ಕಲಿಯುತ್ತಿದ್ದಾಳೆ, ಕಲಿಯಲಿ."

"ಮುಂದೆ?"

"ಮುಂದೆ ಮದುವೆಯ ವಿಚಾರ ಮಾಡೋಣ."

"ಅದಕ್ಕೇ ನಾನು ಹೇಳುವದು, ಈಗಿನಿಂದಲೇ ಆ ದಿಶೆಯಲ್ಲಿ ನಾವೂ ಪ್ರಯತ್ನಿಸುತ್ತಿರಬೇಕು ಎಂದು."

"ನನಗೂ ಆ ವಿಚಾರವಿದೆ."

ಕರುಣಳು ಬೆಳೆಯುತ್ತಿರುವದು ತಮ್ಮ ಹೊಣೆಯನ್ನೂ ಹೆಚ್ಚಿಸುತ್ತಿದೆ ಯೆಂಬುವ ವಿಚಾರ ಬಂದು ಅರುಣಳೆದುರು ನಿಂತಿತು. ಅದೇನು ಅಂತಹ ಗಂಭೀರ ಸಮಸ್ಯೆಯಾಗಿರದಿದ್ದರೂ, ಹೆಣ್ಣಿನ ಮದುವೆಯೆಂದರೆ ಅದೊಂದು ಸಮಸ್ಯೆಯೇ. ರೂಪ, ಗುಣ, ಇವುಗಳು ನಾಲಗೆಯ ತುದಿಯ ಮಾತಾಗಿ,

ಹಣ, ವರದಕ್ಷಿಣೆಗಳು ಪ್ರಧಾನ ಅಂಶಗಳಾಗಿ ಮಧ್ಯಮವರ್ಗವನ್ನು ಪೀಡಿಸುತ್ತಿರುವ ಚಿತ್ರ ಅವಳ ಕಂಣೆದುರು ಬಂದಿತು. ಅದೆಷ್ಟೇ ಕಲಿತವರು ಹೊಸ ವಿಚಾರದ ಯುವಕರಿದ್ದರೂ ರೂಪ, ಗುಣಗಳನ್ನು ಮೆಚ್ಚುವ ಅಧಿಕಾರವನ್ನು ತಮಗಿಟ್ಟುಕೊಂಡು, ಹಣದ ವಿಷಯವನ್ನು ಮಾತ್ರ ತಂದೆಗೆ, ಹಿರಿಯರಿಗೆ ಬಿಟ್ಟುಬಿಡುತ್ತಿದ್ದುದೂ ಅವಳಿಗೆ ಅರಿಯದ ವಿಷಯವಾಗಿರಲಿಲ್ಲ. ಅದನ್ನು ನೆನೆದಾಗ ಮಾತ್ರ ನಿರಾಸೆಯಾಯ್ತು. ಗಣಪತರಾಯರಂತಹರು ಎಷ್ಟು ಜನ ಇರುತ್ತಾರೆ ನಮ್ಮಲ್ಲಿ? ಹೀಗೇ ಅನೇಕ ವಿಚಾರಗಳ ಸುಳಿಯಲ್ಲಿ ಸಿಲುಕಿದಳು ಅರುಣಾ.

"ಏನು ಅರುಣಾ, ಸುಮ್ಮನಾಗಿಬಿಟ್ಟಿಯಲ್ಲ ? ಏನು ವಿಚಾರ ?"

"ಕರುಣಳನ್ನೂ ಕೇಳಿ ನೋಡಬೇಕಲ್ಲ ? ಅವಳಂತೂ ತುಂಬ ಸೂಕ್ಷ್ಮ ಹುಡಿಗೆ. ಅವಳ ಮನಸ್ಸಿನ ವಿರುದ್ಧ ನಾವು ಹೇಗೆ ಹೋಗಲಾದೀತು ? ನನ್ನ ಪಾಲಿಗೆ ಅವಳೊಬ್ಬಳೇ ತಂಗಿ. ಪರದೇಶಿಯಾಗಿ ಬೆಳೆದಿದ್ದಾಳೆ."

"ಅವಳನ್ನು ಕೇಳುವದಂತೂ ಯೋಗ್ಯವೇ. ಇಂದಿನಿಂದಲೇ ಅಷ್ಟು ಗಂಭೀರವಾಗಿ ಆಲೋಚಿಸಬೇಕಾದ ವಿಷಯವೇನಲ್ಲ ಅದು. ಆದರೂ ಹೇಳಿದೆ ಅಷ್ಟೆ. ಪಾಪ, ಅವಳು ಬೇರೆ ಕನಸನ್ನೇ ಕಟ್ಟುತ್ತಿದ್ದಾಳೆ. 'ಹೀಗೆಯೇ ಎಲ್ಲಿಯವರೆಗೆ ಕಲಿಯುವಿ ? ಮುಂದೇನು ಮಾಡುವಿ ?' ಎಂದು ನಾನೊಮ್ಮೆ ಸಹಜವಾಗಿ ಕೇಳಿದ್ದೆ ಅವಳನ್ನು. ಅರುಣಾ, ಅವಳು ಏನು ಉತ್ತರಿಸಿದಳು ಗೊತ್ತೇ ? "ಮಾಮಾ, ನಾನು B.A. ಆಗಿ ಒಂದು ಒಳ್ಳೆಯ ಕೆಲಸ ಹುಡುಕುತ್ತೇನೆ. ನನ್ನ ಕಾಲಮೇಲೆ ನಿಲ್ಲುತ್ತೇನೆ." ಎಂದು ಹೇಳಿಬಿಟ್ಟಳು. "ಮದುವೆ ಬೇಡವೇ ?" ಎಂದು ನಾನು ಕೇಳಿದುದಕ್ಕೆ ನಾಚಿದಳು. "ಅದೆಲ್ಲ ಆಮೇಲೆ. ಬೇಗನೆ ಮದುವೆಯಾಗುವದು ನನಗೆ ಇಷ್ಟವಿಲ್ಲ." ಎಂದು ಹೇಳಿಬಿಟ್ಟಳು.

"ನನ್ನೆದುರೂ ಹಾಗೆಯೇ ಹೇಳಿದ್ದಾಳೆ. ಅವಳು ಒಪ್ಪಿದರೆ, ಒಳ್ಳೆಯ ಸಂಬಂಧ ಕೂಡಿಬಂದರೆ ನೋಡೋಣ. ಈಗಿನಿಂದಲೇ ಯಾಕೆ ತಲೆ ಕೆಡಿಸಿಕೊಳ್ಳಬೇಕು ?"

"ನಾಳೆ ಒಂದು ಮಾತು ಸಹಜವಾಗಿ ಅವಳನ್ನು ಕೇಳಿ ನೋಡು ಅರುಣಾ. ನಾವೇ ಸುಮ್ಮನೆ ಕುಳಿತರೆ ಹೇಗೆ ?"

"ಬೇಡ ಮಹಾರಾಯರೇ, ಸಮಯ ನೋಡಿ ನಾನೆಲ್ಲ ಕೇಳುತ್ತೇನೆ.

ನಾಳೆಯೇ ಎಂದರೆ ಆಗದು. ಕೇಳಿದ್ದಕ್ಕೆ ನೇರವಾಗಿ ಮಾತನಾಡಿದರೆ ಆಡಿದಳು; ಇಲ್ಲವಾದರೆ ಸೆಡವು ಬಂದೇಬಿಡುವದು ಅವಳಿಗೆ. ಬಹಳ ಸೂಕ್ಷ್ಮದ ಹುಡಿಗಿ. ಸುಮ್ಮನೆ ಏನಾದರೂ ಕಲ್ಪನೆ ಮಾಡಿಕೊಂಡು ಕುಳಿತುಬಿಡುತ್ತಾಳೆ. ಮನಸ್ಸಿನಲ್ಲಿದ್ದುದನ್ನು ಹೇಳದೇ ಕುಳಿತುಬಿಡಬಹುದು. ಹೆಚ್ಚು ಪೀಡಿಸಿದರೆ ಏನು ಮಾಡುವಳು ಗೊತ್ತೇ? ತನ್ನ ಮೇಲೆ ತಾನೇ ಕೋಪಿಸಿಕೊಂಡು ಮುಳುಮುಳು ಅಳುತ್ತ ಕೂಡುವಳು. ಒಮ್ಮೊಮ್ಮೆ ಅವಳ ಸ್ವಭಾವದ ರೀತಿಯೇ ತಿಳಿಯುವದಿಲ್ಲ ನನಗೆ."

"ಹಾಗಾದರೆ ಇವತ್ತು ಒಂದು ಸಣ್ಣ ಪ್ರಸಂಗ ನಡೆಯಿತು ಅರುಣಾ..."

"ಏನು ?"

"ಅವಳು ಕೋಣೆಯಲ್ಲಿ ಓದುತ್ತಿದ್ದಳು. ನನಗೆ ನೀರು ಬೇಕಾಗಿತ್ತು. ಅವಳನ್ನು ಕರೆದೆ. ಉತ್ತರ ಬರಲಿಲ್ಲ. ಹಾಗಾದರೆ ಮಲಗಿರಬೇಕು ಎಂದುಕೊಂಡು ಹೋಗಿ ನೋಡಿದೆ. ಕೈಯಲ್ಲಿ ಪುಸ್ತಕವಿತ್ತು. ಕಣ್ಣುಮುಚ್ಚಿಕೊಂಡು ಯಾವುದೋ ಹಾಡೊಂದನ್ನು ಬಲು ಹಗುರಾಗಿ – ತನಗೂ ಕೇಳಿಸದಷ್ಟು ಹಗುರಾಗಿ – ಅನ್ನುತ್ತಿದ್ದಳು. ಬಾಗಿಲಲ್ಲಿ ನಿಂತು ನಾನು ಜೋರಾಗಿ ಎರಡು ಬಾರಿ ಕೂಗಿದಾಗಲೇ ಅವಳಿಗೆ ಎಚ್ಚರ. ಅವಳಿಗೆ ನಾನು ಏನೂ ಅಂದಿರಲಿಲ್ಲ ನೋಡು ಅರುಣಾ. ಆದರೂ ಆಗಲೇ ನನ್ನನ್ನು ನೋಡಿ ಕಣ್ಣಲ್ಲಿ ನೀರು ಬಂದೇಬಿಟ್ಟಿತ್ತು."

ಅರುಣಳಿಗೇನು ತಂಗಿಯ ಈ ಸ್ವಭಾವ ಹೊಸದಾಗಿರಲಿಲ್ಲ. "ಚಿಕ್ಕಂದಿನಿಂದಲೂ ಅವಳು ಹಾಗೆಯೇ. ಅಲ್ಲಿ ತಾಯಿ ತೀರಿದ ಮೇಲಂತೂ ಅವಳ ಸ್ವಭಾವ ಒಂದು ರೀತಿ ಬೇರೆಯೇ ಆಗುತ್ತ ನಡೆಯಿತು. ನನ್ನೊಬ್ಬಳೊಡನೆ ಅವಳು ಮಾತನಾಡುತ್ತಿದ್ದಳು. ಇವಳನ್ನು ಸೇರದ ಆ ಮಾವನ ಮಕ್ಕಳಿಂದ ಇವಳು ಸದಾ ದೂರವಿರುತ್ತಿದ್ದಳು. ನಾನಂತೂ ಅತ್ತೆಯ ಆಳು. ಸದಾ ದುಡಿತ. ಹೀಗಾಗಿ ಕರುಣಳ ಏಕಾಂತಪ್ರಿಯತೆ ಬೆಳೆದು ಬಂದಿತು. ಬಾಲ್ಯದಲ್ಲಿ ಸ್ನೇಹ, ಮಮತೆ, ಅವಳಿಗಂತೂ ದೊರೆಯಲೇ ಇಲ್ಲ. ಆವೆಲ್ಲ ಕೊರತೆಗಳನ್ನು ಅವಳು ಪುಸ್ತಕಗಳಲ್ಲಿ ಪಡೆಯುತ್ತಿದ್ದಳೇನೋ! ಈಗಂತೂ ನೋಡುತ್ತೀರಲ್ಲ, ಅವಳಿರುವ ಲೋಕವೇ ಬೇರೆಯಾಗಿರುವಂತಿದೆ...."

ಹೆಂಡತಿ ಹೇಳುತ್ತಿರುವದನ್ನೆಲ್ಲ ಕೇಳುತ್ತಿದ್ದ ಗಣಪತರಾಯರಿಗೆ, ಸೋಜಿಗವೆನಿಸಿತು. "ನೀನು ಮನೋವಿಜ್ಞಾನಿಯೂ ಇದ್ದೀ ಎಂಬುದು ನನಗೆ ಈವರೆಗೂ ಗೊತ್ತಿರಲಿಲ್ಲ ನೋಡು !" ಎಂದು ನಕ್ಕರು.

"ನಿಮ್ಮ ಮಾತೇ ನನಗೆ ಅರ್ಥವಾಗುವದಿಲ್ಲ. ಏನು ಹೊಗಳುತ್ತೀರೋ, ಬಯ್ಯುತ್ತೀರೋ? ಆಯ್ತು, ಸುಮ್ಮನೆ ಮಲಗಿರಿನ್ನು ಹೊತ್ತಾಯ್ತು." ಎಂದು ಹೊರಟಳು.

"ಬೆಳಿಗ್ಗೆ ಬೇಗನೆ ಎಬ್ಬಿಸು ಅರುಣಾ." ಎಂದು ಹೇಳಿ ಗಣಪತರಾಯರು ಮುಸುಕನ್ನೆಳೆದರು.

ಅರುಣಾ ತನ್ನ ಕೋಣೆಗೆ ಬಂದು ಮಲಗಿದರೂ ನಿದ್ದೆ ಮಾತ್ರ ಬರಲಿಲ್ಲ. ಮಳೆಗಾಲದಲ್ಲಿ ಒಮ್ಮಿಂದೊಮ್ಮೆಲೇ ಅಸಂಖ್ಯ ಹುಳಗಳು ದೀಪವನ್ನು ಮುತ್ತು-ವದಿಲ್ಲವೇ? ಹಾಗೆ ಎಲ್ಲಿಂದಲೋ ಅನೇಕ ವಿಚಾರಗಳು ಅವಳ ಮನದ ಮುಖವನ್ನು ಮುತ್ತಿದವು.

ಅವಳ ಬದುಕನ್ನು ಎರಡೇ ವ್ಯಕ್ತಿಗಳು ತುಂಬಿದ್ದವು. ಒಬ್ಬರು ಗಣಪತರಾಯರು; ಇನ್ನೊಬ್ಬಳೆಂದರೆ ತಂಗಿ ಕರುಣಾ.

ಬಾಲ್ಯದಲ್ಲಿ ತನ್ನೊಬ್ಬಳನ್ನು ಬಿಟ್ಟರೆ ಕರುಣಳಿಗೆ ಮಮತೆಯಿಂದ ಕಾಣುವವರಾರೂ ಇರಲಿಲ್ಲ. ಬೆಳೆಯುವ ಲತೆಗೆ ನೀರಿನ ಕೊರತೆ. ಅದಕ್ಕೇ ಕರುಣಳಿಗೆ ಯಾರೊಡನೆಯೂ ಮಾತನಾಡುವದು ಸೇರುತ್ತಿರಲಿಲ್ಲ. ಅವಳು ಬೆಳೆದಂತೆ, ಜೀವನ ಬೆಳೆಯಿತು. ಶಾಲೆಯ ಸಹಪಾಠಿಗಳು, ಗೆಳತಿಯರು, ಓದಿಯುವರು, ಓರಿಗೆಯವರು, ಹೀಗೆ ಅವಳು ವಿವಿಧ ಅಂಗಗಳಲ್ಲಿ ಬೆಳೆಯಬೇಕಾಯ್ತು. ಆದರೆ ಅಕ್ಕ ಸದಾ ಅವಳ ಜೊತೆಯಲ್ಲಿರಬೇಕಲ್ಲ! ಮನೆಯಲ್ಲಿ ಬೇರೆಯವರ ಅಂತಃಕರಣ, ಸ್ನೇಹಗಳನ್ನು ಕಾಣದೆ ಬೆಳೆದ ಕರುಣಾ ದೊಡ್ಡವಳಾದಂತೆ ಅಂತ-ರ್ಮುಖಿಯಾದಳು. ಉಳಿದವರ ಪ್ರೀತಿ, ಸ್ನೇಹಗಳಿಗೆ ಅವಳ ಹೃದಯ ಹಂಬಲಿಸುತ್ತಿತ್ತಾದರೂ, ಬಾಲ್ಯದಲ್ಲಿಯೇ ಅವಳ ಎಳೆ ಹೃದಯದ ಮೇಲಾದ ಆಘಾತ ಹೃದಯದ ನೈಸರ್ಗಿಕ ಕರೆಗೆ ಅಡ್ಡಿಯಾಗುತ್ತಿತ್ತು

ಆ ಕೊರತೆಯನ್ನು ತುಂಬಿಕೊಡಲು ಅರುಣಾ ಅವಳಿಗೆ ತಾಯಿಯಾದಳು, ಸ್ನೇಹಿತೆಯಾದಳು. ತಂಗಿಯ ಈ ಅಂತರಂಗದ ಬದುಕನ್ನು ನೆನೆದಾಗ ಅವಳಿಗೆ ವಿಚಿತ್ರ ವೇದನೆಯಾಯ್ತು. ತಾನು ಅವಳ ಸರ್ವಸ್ವವಾಗಿ ತಂಗಿಯ ಹೃದಯ-ದೊಲುಮೆಯನ್ನು ತುಂಬಿಸುದಕ್ಕಾಗಿ ತನ್ನ ಬಗೆಗೇ ಅರುಣಳಿಗೆ ಸಂತೃಪ್ತಿ, ಸಮಾಧಾನ, ಅಭಿಮಾನವೆನಿಸಿತು

ಬೆಳಗಿನ ಜಾವದ ತಂಪುಗಾಳಿ ಒಳಸೂಸಿದಾಗಲೆ ಅರುಣಳಿಗೆ ನಿದ್ರೆಹತ್ತಿತು.

## ಪ್ರಕರಣ : ೩

ಕಾಲೇಜಿನ ಸ್ನೇಹ-ಸಮ್ಮೇಲನ ಮುಗಿದು ನಾಲ್ಕಾರು ದಿನಗಳಾಗಿದ್ದವು. ವಿದ್ಯಾರ್ಥಿಗಳಿಗೆ ಅದೊಂದು ಉತ್ಸವ, ಹಬ್ಬ. ಸಮ್ಮೇಲನ ಒಂದು ತಿಂಗಳಿರುವಾಗಲೇ ಚಟುವಟಿಕೆಗಳು ಪ್ರಾರಂಭ. ವಿವಿಧ ಆಟಗಳು, ಸ್ಪರ್ಧೆಗಳು ಅನೇಕರ ಮನ ಸೆಳೆದರೆ, ಮನರಂಜನೆಯ ಕಾರ್ಯಕ್ರಮ ಹಲವರನ್ನು ಸೆಳೆಯುತ್ತದೆ. ಅನೇಕ ರಂಗಗಳಲ್ಲಿ ಸಹಪಾಠಿಗಳೊಂದಿಗೆ ಕಲೆತು, ಕೆಲಸಮಾಡಿ, ನಕ್ಕು ನಲಿದು, ಮೋಜಿನಿಂದ ಹುರುಪಿನಿಂದ ದುಡಿದು ಸಮ್ಮೇಲನವನ್ನು ಯಶಸ್ವಿಯಾಗಿ ಮಾಡಿದನಂತರ ಮನಸ್ಸಿಗೆ ಒಂದು ತರಹ ವ್ಯಥೆಯಾಗುವದು ಸ್ವಾಭಾವಿಕ.

ಆ ದಿನ ಕಳೆದುಹೋಯಿತಲ್ಲಾ ಎಂದು ಅನಿಸದಿರದು. ಮೇಲಿನ ವರ್ಗದ ವಿದ್ಯಾರ್ಥಿಗಳ್ಳಿಗೆಲ್ಲ ತಾವು ಇನ್ನು ಕಾಲೇಜು ಬಿಟ್ಟುಹೋಗುವ ದಿನ ಸಮೀಪಿಸುತ್ತಿದೆಯೆಂದು ವ್ಯಥೆ.

ಹರುಷ ವ್ಯಥೆಗಳ ಸಮ್ಮಿಶ್ರಭಾವವನ್ನು ಮೂಡಿಸುವ ಆ ಸಮ್ಮೇಲನ ಕೊನೆಗೊಂಡು, ನಾಲ್ಕಾರು ದಿನಗಳು ಉರುಳಿದ ಮೇಲೆ ಒಂದು ಸಾಯಂಕಾಲ ಸುಧಾಕರ ವಿಶ್ರಾಂತಿಗೆಂದು ಕೆಫೆಯ ಕಡೆಗೆ ಹೊರಟಿದ್ದ. ಮುಂಬರುವ ಪರೀಕ್ಷೆಗಾಗಿ ಶ್ರಮಿಸಿ ಓದಬೇಕಲ್ಲ ! ಅದರಲ್ಲಂತೂ ಆತನ ಮೇಲೆ ಮನೆತನದ ಹೊಣೆಗಾರಿಕೆ ಬೇರೆ. ಉಳಿದವರಂತೆ ಸ್ವಚ್ಛಂದವಾಗಿ ಹಕ್ಕಿಯಂತೆ ಹಗುರಾಗಿ ದಿನಗಳನ್ನು ಕಳೆಯುವ ಸ್ಥಿತಿ ಆತನಿಗಿರಲಿಲ್ಲ. ಆದುದರಿಂದ ಸ್ನೇಹಸಮ್ಮೇಲನ ಕೊನೆಗೊಂಡ ಮರುದಿನದಿಂದಲೇ ಅಭ್ಯಾಸದ ಕಡೆಗೆ ವಿಶೇಷ ಗಮನ ಕೊಡಹತ್ತಿದ್ದ. ಪ್ರತಿನಿಮಿಷವೂ ಆತನಿಗೆ ಕರ್ತವ್ಯದ ಅರಿವನ್ನು ಮಾಡಿಕೊಡುತ್ತಿತ್ತು. ಒಂದು ದಿನವನ್ನೂ ಆತ ವ್ಯರ್ಥವಾಗಿ ಕಳೆಯುವಂತಿರಲಿಲ್ಲ.

ಕೆಫೆಯಲ್ಲಿ ಕಾಲಿಟ್ಟಾಗ ಆತ ಎದುರಿಗೆ ಕಂಡುದು ಜಾ:ನಿಯನ್ನು. ಪಂದ್ಯಾಟದ ನೆನಪು ಇಬ್ಬರ ಮುಖದಲ್ಲಿಯೂ ಮೂಡಿ ನಿಂತಿತ್ತು.

ಸುಧಾಕರ ನಗೆಯನ್ನು ತಂದುಕೊಂಡು "Good Evening Jonny !" ಎಂದು ಸಸ್ನೇಹವಾಗಿ ನುಡಿದ.

ಆತನೂ ಅದೇ ರೀತಿಯಾಗಿ ಸ್ವಾಗತ ನೀಡಿದನಾದರೂ ಅಂದಿನ ಮುಖಭಂಗವಿನ್ನೂ ಮರೆಸಿಹೋಗಿರಲಿಲ್ಲ. ಸುಧಾಕರನಿಗೆ ಯಾವ ಸಂಕೋಚವೂ ತೋರಲಿಲ್ಲ. ಆತ ಕುರ್ಚಿಯೊಂದನ್ನು ಎಳೆದುಕೊಂಡು ಜಾ:ನಿಯ ಎದುರಿಗೇ

ಕುಳಿತುಕೊಂಡ. ಇದು ಜಾ:ನಿಗೆ ಅನಿರೀಕ್ಷಿತವಾಗಿತ್ತು. ಆತ ಒಳಗಿನ ಕೋಣೆಗೆ ಹೋಗಬಹುದೆಂದು ತಿಳಿದಿದ್ದ.

"ಈ ಎರಡು ಮೂರು ದಿನಗಳಿಂದ ನಿಮ್ಮನ್ನು ನೋಡಿಯೇ ಇಲ್ಲವಲ್ಲ? ಕಾಲೇಜಿಗೆ ಬಂದಿರಲ್ಲಿಲ್ಲವೇ ?" ಎಂದು ಸಹಜವಾಗಿಯೇ ಸುಧಾಕರ ಕೇಳಿದ.

"ಹೌದು. ಸ್ವಲ್ಪ ಬೇಜಾರಾಗಿತ್ತು. ಮೈಯಲ್ಲಿಯೂ ಚೆನ್ನಾಗಿರಲಿಲ್ಲ." ಶುಷ್ಕವಾಗಿ ಉತ್ತರಿಸಿದ ಜಾ:ನಿ.

ಮುಂದೆ ಇಬ್ಬರೂ ಮಾತನಾಡಲಿಲ್ಲ. ಒಂದು ಕಪ್ಪು ಚಹವನ್ನು ಮಾಣಿ ತಂದು ಇರಿಸಿದ. ಇನ್ನೊಂದನ್ನು ತರಲು ಹೇಳಿ, ಜಾ:ನಿ ಸಿಗರೇಟು ಹೊತ್ತಿಸಿದ. ಸುಧಾಕರನಿಗೊಂದು ಕೊಡಹೋದ. ಆತ ನಮ್ರನಾಗಿ "Thanks..... ನನಗೆ ಅಭ್ಯಾಸವಿಲ್ಲ." ಎಂದು ಉತ್ತರಿಸಿದ.

ಇಬ್ಬರೂ ಮೌನವಾಗಿ ಚಹ ಕುಡಿಯಹತ್ತಿದರು. ಜಾ:ನಿಯ ಮನದಲ್ಲಿ ನಡೆದ ಹೊಯ್ದಾಟವನ್ನು ಸುಧಾಕರ ಸೂಕ್ಷ್ಮವಾಗಿ ಗುರುತಿಸಿದ. ತನ್ನ ಗೆಲುವು ಜಾ:ನಿಯ ಮನದಲ್ಲಿ ಅಸಮಾಧಾನ, ತಿರಸ್ಕಾರ, ದ್ವೇಷದ ಹೊಗೆಯನ್ನೆಬ್ಬಿಸ ಬಹುದೆಂದು ಆತ ಮೊದಲೇ ಊಹಿಸಿದ್ದ. ಮರುದಿನವೇ ಜಾ:ನಿಯನ್ನು ಕಾಣ ಬೇಕೆಂದಿದ್ದ. ಅದು ಸಾಧಿಸಿರಲಿಲ್ಲ.

"ಜಾ:ನಿ, ನಾನು ನಿಮಗೊಂದು ಮಾತನ್ನು ಹೇಳಬೇಕೆಂದಿದ್ದೇನೆ...."

ಜಾ:ನಿ ಗೊಂದಲದಲ್ಲಿ ಸಿಲುಕಿ "ಏನು ?" ಎಂದ.

"ನೀವು ಆ ದಿನ ಆಟ ಮುಗಿದೊಡನೆ ಹಾಗೆಯೇ ಹೊರಟುಹೋದಿರಿ. ಅದಕ್ಕೆ ನನಗೆ ಬಹಳೇ ಅಸಮಾಧಾನವಾಯ್ತು. ನನ್ನ ಮೇಲೆ ನೀವು ಸಿಟ್ಟಾಗಿಲ್ಲ ವಷ್ಟೆ?"

ಜಾ:ನಿ ತಬ್ಬಿಬ್ಬಾದ. ಆತನಿಗೆ ಏನು ಹೇಳಲೂ ಬಾರದಾಯ್ತು. ಕೃತ್ರಿಮ ವಾಗಿ ಮುಖದಲ್ಲಿ ಗೆಲುವನ್ನು ತಂದುಕೊಂಡು "ನಾನೇಕೆ ಸಿಟ್ಟಾಗಲಿ ಸುಧಾಕರ? ಸೋಲು-ಗೆಲುವುಗಳು ಆಟಗಾರನಿಗೆ ಇದ್ದದ್ದೇ" ಎಂದು ಹೇಳಿದ.

"ಅಂದು ನಿಮ್ಮ ಆಟ ನಿಜವಾಗಿಯೂ ಪ್ರೇಕ್ಷಣೀಯವಾಗಿತ್ತು. ನೀವು ಅನುಭವಿಕರು, ಪಳಗಿದವರು. ನಾನಿನ್ನೂ ಹುಡುಗ. ನಿಮ್ಮಿಂದ ನಾನು ಕಲಿಯ ಬೇಕು. ಅದಕ್ಕಾಗಿ ನೀವು ನನ್ನ ಬಗೆಗೆ ಯಾವ ರೀತಿಯ ತಪ್ಪು ಕಲ್ಪನೆ ಮಾಡಿ ಕೊಳ್ಳಬಾರದು."

ಸವಿನಯವಾಗಿ ಮಾತನಾಡುವ ಸುಧಾಕರನನ್ನು ನೋಡಿದಾಗ ಜಾ:ನಿಯ ದುರಭಿಮಾನವೆಲ್ಲ ಕರಗಿ ನೀರಾಯ್ತು. ತನ್ನನ್ನು ಹಿರಿಯನಂತೆ ಆತ ಕಂಡುದಕ್ಕೆ ಜಾ:ನಿಗೆ ಒಳಗೇ ಸಂತೋಷ.

ಅಂದು ಸಹಸ್ರಾರು ಪ್ರೇಕ್ಷಕರೆದುರಿಗೆ ಆದ ಅವಮಾನ, ಮುಖಭಂಗಗಳು ಅಸೂಯೆಯನ್ನು ಕೆರಳಿಸಿದ್ದರೂ ಆ ತೀವ್ರತೆ ಈಗಿರಲಿಲ್ಲ. ಮೇಲಾಗಿ ಸುಧಾಕರನ ನಮ್ರ ಮಾತುಗಳಿಂದ ಅವನ ಮೇಲೆ ವಿಲಕ್ಷಣ ಪರಿಣಾಮವಾಯಿತು. ಇಂತಹ ಸ್ನೇಹದ ನುಡಿಯನ್ನು ಜಾ:ನಿ ನಿರೀಕ್ಷಿಸಿರಲಿಲ್ಲ. ತನ್ನನ್ನು ಕಂಡರೆ ವಕ್ರವಾಗಿ ನೋಡುತ್ತ ಎದೆ ಸೆಟೆಸಿ ಮಾತನಾಡಿಸದೇ ಹೋಗಬಹುದೆಂದು ಆತನ ಊಹೆ ಯಾಗಿತ್ತು. ತಾನು ಗೆದ್ದಿದ್ದರೆ ಹಾಗೆಯೇ ಮಾಡುತ್ತಿದ್ದನೇನೋ!

"ಬನ್ನಿ ಜಾ:ನಿ, ನಾವು ಸ್ನೇಹಿತರಾಗಿರೋಣ" ಎಂದು ಕೊನೆಗೆ ಸುಧಾಕರ ಕೈಕುಲುಕಿದಾಗಂತೂ ಜಾ:ನಿಯ ಸೇಡಿನ ಹೆಡೆಯನ್ನೇ ಜಜ್ಜಿಬಿಟ್ಟಂತಾಯಿತು.

ಅಷ್ಟರಲ್ಲಿ 'ತ್ರಿಮೂರ್ತಿ'ಗಳು ಒಳಗೆ ಕಾಲಿರಿಸಿದರು.

"ಇದೇನು ಸೂರ್ಯಚಂದ್ರರು ಒಂದೇ ಕಾಲಕ್ಕೆ ಉದಯರಾಗಿದ್ದಾರಲ್ಲ!" ಎಂದು ಶಶಿ ಬರುತ್ತಲೇ ಸುಧಾಕರನ ಬೆನ್ನು ಚಪ್ಪರಿಸಿದ.

ಬಂದ ಮೂವರೂ ಅಲ್ಲಿಯೇ ಕುಳಿತುಕೊಂಡರು.

"ಕಾಲೇಜಿನ ಚ್ಯಾಂಪಿಯನ್ ಮಾಡಿದೆವು ನಿನ್ನನ್ನು! ಎಲ್ಲ ವ್ಯರ್ಥ...." ಎಂದು ಸೂಚ್ಯವಾಗಿ ಬಾಳಕೃಷ್ಣ ಟೀಕಿಸಿದ.

"ಅದಕ್ಕೇನಂತೆ! 'Cheer' ಮಾಡಿ ಮಾಡಿ ನಿನ್ನ ಗಂಟಲು ಒಣಗಿರ ಬೇಕಲ್ಲ್ವೇ? ಆಗಲಿ ಇವತ್ತು ನೀನು ಬೇಡಿದ ಪಕ್ವಾನ್ನ!" ಸುಧಾಕರನ ಪರ ವಾಗಿ ಗೋಪಾಲ ಹೇಳಿಯೇಬಿಟ್ಟ. ಆತನದು 'ವೈದಿಕ'ನ ಸ್ವಭಾವ. ಮಾತು ತಿನಿಸು ಎರಡರಲ್ಲಿಯೇ ಆತನ ನಾಲಗೆಗೆ ಅತಿ ಚಪಲ.

ಅಂದು ಅವರೆಲ್ಲ ಸುಧಾಕರನ ಅತಿಥಿಗಳೇ ಆದರು. ತಿಂಡಿ-ತಿನಿಸು, ಚಹ ಮುಗಿದಿತು. ಸಿಗರೇಟಿನ ಹೊಗೆ ಇಡುಗಿತು. ತುದಿಮೊದಲಿಲ್ಲದ ಹರಟೆಗೆ ಪ್ರಾರಂಭವಾಯ್ತು.

ಸಮ್ಮೇಲನದ ಚಿತ್ರವಿನ್ನೂ ಸ್ಮೃತಿಯಿಂದ ಅಳಿಸಿರಲಿಲ್ಲ. ಅಂತಃಕರಣ ಪೂರ್ವಕವಾಗಿ ಅಲ್ಲದಿದ್ದರೂ ಅವರೆಲ್ಲ ಸುಧಾಕರನೊಡನೆ ಬಹಳ ಹೊತ್ತು ಹರಟೆ ಹೊಡೆದರು. ಅಂತೂ ಸುಧಾಕರನ ಹೃದಯಕ್ಕೆ ಸಮಾಧಾನವಾಯ್ತು.

ತನ್ನ ಬಗೆಗೆ ಅವರಿಗೆ–ವಿಶೇಷವಾಗಿ ಜಾನಿಗೆ– ದ್ವೇಷವಿಲ್ಲವೆಂಬುದನ್ನು ಕಂಡು ಆತನಿಗೆ ಸಂತೋಷವಾಯ್ತು.

ಕೆಫೆಯಿಂದ ಹೊರಬಂದಾಗ ಸಾಯಂಕಾಲವಾಗಿತ್ತು.

ಸುಧಾಕರ ತನ್ನ ಕೋಣೆಯತ್ತ ಸಾಗಿದ. ಉಳಿದವರೆಲ್ಲ ಊರೊಳಗೆ ತಿರು ಗಾಡಲು ಹೊರಟರು.

ಸುಧಾಕರ ಕೋಣೆಯಲ್ಲಿ ಕಾಲಿಡುತ್ತಿದ್ದ. ಊಟದ ಗಂಟೆ ಬಾರಿಸಿತು. ಅದರ ದಾರಿಯನ್ನೇ ಕಾಯುತ್ತಿದ್ದ 'ಭುಕ್ತಪ್ರಿಯ'ರು ಕೆಲವರು ಒಬ್ಬೊಬ್ಬರಾಗಿ ಊಟದ ಮನೆಯ ಕಡೆಗೆ ಹೊರಟರು. ದಾರಿಯಲ್ಲಿ ಸ್ನೇಹಿತರ ಕೋಣೆಗಳಲ್ಲಿ ಇಣಿಕಿ, ಅವಳನ್ನೂ ಕರೆದೊಯ್ಯುವದು ಹಲವರ ಸ್ವಭಾವ. ಮತ್ತಾವದರಲ್ಲಿಯೂ ಇಲ್ಲದ ನಿಯಮಿತತನ, ಆಸಕ್ತಿ, ಊಟದಲ್ಲಿ. ಗಂಟೆಯಾದೊಡನೆ ಊಟದ ಮನೆ ಸೇರಿ ಕೊನೆಯವರೆಗೂ ಕುಳಿತು ಎಲ್ಲರಿಗೂ ಸಹಪಂಕ್ತಿಯನ್ನು ಕರುಣಿ ಸುವ ಮಹಾನುಭಾವರ ಸಂಖ್ಯೆ ಕಡಿಮೆಯಿರಲಿಲ್ಲ. ಅವರಲ್ಲಿ ಅಗ್ರಗಣ್ಯನೆಂದರೆ ರಾಮನಾಥ. ಆತನನ್ನು ಹುಡುಕಬೇಕಾದರೆ ನೇರವಾಗಿ ಊಟದ ಮನೆಗೇ ಹೋಗಬೇಕು. ತಾನು ಕೊಡುವ ಪ್ರತಿಯೊಂದು ದುಡ್ಡಿನ ಸದ್ವಿನಿಯೋಗ ಮಾಡಿಕೊಳ್ಳುತ್ತಿದ್ದ. ಆತನ ಕಿವಿಯೂ ಅಷ್ಟೇ ಚುರುಕು. ಕಾಲೇಜು ಗಂಟೆ, ಹಾಸ್ಟೆಲ್ ಗಂಟೆ, ಊರಲ್ಲಿಯ ಕಚೇರಿಯ ಗಂಟೆ, ಇವೆಲ್ಲವುಗಳ ಮಧ್ಯೆ ಆತ ಊಟದ ಗಂಟೆಯನ್ನು ಅಷ್ಟು ದೂರದಿಂದಲಾದರೂ ಗುರುತಿಸಬಲ್ಲ. ಗಂಟೆ ಯಾಗುವದು ತಪ್ಪಿದರೂ ರಾಮನಾಥ ಸರಿಯಾದ ವೇಳೆಗೇ ಹೊರಡುತ್ತಿದ್ದ. ಕಾಲೇಜಿಗೆ ಸೇರಿ ಆತ ಸಾಧಿಸಿದ್ದರಲ್ಲಿ ಇದೊಂದೇ ಹೇಳಿಕೊಳ್ಳುವಂತಹದು. ತನ್ನಮಟ್ಟಿಗೆ ತಾನೊಬ್ಬನೇ ಹೋಗುವದು ಆವನಿಗೆ ಆಗದು. ಓದುತ್ತಿರುವವ ರನ್ನು ಕಾಡಿಸಿ, ಕರೆದುಕೊಂಡು ಹೋಗುತ್ತಿದ್ದ. ಯಾರಾದರೂ ಸಿಟ್ಟಿನಿಂದ ಗದರಿಸಿದರೆ "ನಾಳೆ ನಿಮ್ಮ ಹೆಂಡತಿಯಾದರೂ ಇಷ್ಟು ಪ್ರೀತಿಯಿಂದ ಊಟಕ್ಕೆ ಕರೆಯುತ್ತಾಳೋ ಇಲ್ಲವೋ?" ಎಂದು ಹೇಳಿ ಮುಂದೆ ನಡೆದುಬಿಡುತ್ತಿದ್ದ.

ಆ ದಿನ ಆತನಿಗೆ ಯಾರೂ ಸಿಕ್ಕಿಲಿಲ್ಲ. ಪ್ರತಿದಿನ ಅತಿಥಿಗಳಿಲ್ಲದೇ ಊಟ ಮಾಡದ ಬ್ರಾಹ್ಮಣನಿಗೆ ಅತಿಥಿ ದೊರೆಯದಿದ್ದ ದಿನ ಆಗುವ ವ್ಯಥೆಗಿಂತ ಹೆಚ್ಚಿನ ವ್ಯಥೆ ಆತನಿಗಾಗಿತ್ತು. ದಾರಿಯಲ್ಲಿ ಸುಧಾಕರ ಸಿಕ್ಕ. "ಊಟಕ್ಕೇಳುವದಿಲ್ಲವೇ?

ಗಂಟೆ ಎಂಟಾಯ್ತು!" ಎಂದು ಕರೆದ.

"ನಾನಿನ್ನೂ ಬರುವದು ತಡ, ನೀವು ಸಾಗಿರಿ." ಎಂದು ಉತ್ತರಿಸಿ ಸುಧಾಕರ ಕೋಣೆಯೊಳಗೆ ನಡೆದ.

ಒಳಗೆ ಬಂದು ಬಟ್ಟೆ ಬದಲಾಯಿಸಿ ತನ್ನ ಮೇಜಿನ ಬಳಿಯ ದೀಪವನ್ನು ಹಚ್ಚಿದ. ಎದುರಿಗೆ ಹರೀಶ ಓದಿನಲ್ಲಿ ಮಗ್ನನಾದಂತಿತ್ತು. ಆತನನ್ನು ಮಾತನಾಡಿಸಬೇಕೆಂದರೂ ಅವನ ಆ ಗಾಂಭೀರ್ಯ ಅಡ್ಡಿಯಾಗುತ್ತಿತ್ತು. ಅವನಿಗೇಕೆ ತೊಂದರೆ ಕೊಡಬೇಕೆಂದು ಸುಧಾಕರ ತನ್ನ ಕುರ್ಚಿಯ ಮೇಲೆ ಹೋಗಿ ಕುಳಿತು ಪುಸ್ತಕವನ್ನು ತೆರೆದ.

ಅರ್ಧಗಂಟೆ ಹೀಗೇ ಮಾತಿಲ್ಲದೆ ಕಳೆಯಿತು.

ಹರೀಶ ಎದ್ದು ಕಿಟಕಿಯ ಬಳಿ ಬಂದು ನಿಂತ. ಹಿಂದೆ ಕಟ್ಟಿದ ಕೈಯ ಬೆರಳುಗಳು ಒಂದನ್ನೊಂದು ಹಿಚುಕಿಕೊಳ್ಳುತ್ತಿದ್ದವು. ಅಂದು ಹರೀಶ ಬಹಳ ವಿಚಾರಕ್ಕೊಳಗಾಗಿದ್ದ. ನಿರ್ಲಿಪ್ತಸ್ವಭಾವ ಆತನದು. ಅದು ಸ್ವಾಭಾವಿಕವಾಗಿ ಬಂದುದಲ್ಲ. ಬೆಳೆದ ಸ್ಥಿತಿ ಅವನನ್ನು ಹಾಗೆ ಮಾಡಿತ್ತು. ಉಳಿದವರ ಕಣ್ಣಿಗೆ ಆತ 'ವಿಚಿತ್ರವ್ಯಕ್ತಿ'ಯಾಗಿ ಕಂಡಿದ್ದ. ಕೆಲವರಂತೂ ಆತನನ್ನು ಸೊಕ್ಕಿನವನೆಂದೇ ಭಾವಿಸಿದ್ದರು. ಯಾರೊಡನೆಯೂ ಹೆಚ್ಚಾಗಿ ಬೆರೆಯುತ್ತಿರಲಿಲ್ಲ. ಊಟಕ್ಕೆ ಕುಳಿತಾಗಲೂ ಅಷ್ಟೆ. ಕಾಲೇಜಿನಲ್ಲಾದರೂ ಹಾಗೆಯೇ. ಅನೇಕರ ಪರಿಚಯ ಆತನಿಗೆ ಇದ್ದಿತಾದರೂ ಆತನ ಸ್ನೇಹಿತನೆಂಬ ಒಂದು ವ್ಯಕ್ತಿಯೂ ಇರಲಿಲ್ಲ. ಹೆಚ್ಚಾಗಿ ಓದಿನಲ್ಲಿ ಮಗ್ನನಾಗಿರುತ್ತಿದ್ದ ಹರೀಶ. ಆತನ ಗಂಭೀರ ಮುಖಚರ್ಯೆ, ಮಾತಿನಲ್ಲಿಯ ಮಿತಿ, ಇವು ಆತನ ಸ್ವಭಾವದ ಬಗೆಗೆ ಹಲವಾರು ಊಹೆಗಳಿಗೆ ಆಸ್ಪದ ಕೊಟ್ಟಿದ್ದವು.

ಒಂದೇ ಕೋಣೆಯಲ್ಲಿರುತ್ತಿರುವ ಸುಧಾಕರನಿಗೂ ಆತನ ಬಗೆಗೆ ವಿಚಾರ ಮಾಡಿದಾಗ ವಿಚಿತ್ರವೆನಿಸುತ್ತಿತ್ತು. 'ಸ್ವಭಾವವೇ ಹಾಗೆ' ಎಂದುಕೊಂಡು ಸುಮ್ಮನಿರುತ್ತಿದ್ದ. ಯಾವಾಗಲಾದರೂ ಸುಧಾಕರನೊಂದಿಗೆ ಆತ ಮಾತನಾಡುತ್ತಿದ್ದನಾದರೂ ಅದರಲ್ಲಿ ಯಾವುದೋ ಒಂದು ಕೊರತೆಯಿತ್ತು. ಯಾರಾದರೂ ಆತನೆದುರು ತಮ್ಮ ತೀರ ವ್ಯಕ್ತಿಗತವಾದ ಗೌಪ್ಯದ ವಿಷಯವನ್ನು ಹೇಳಿದರೆ ಕೇಳುತ್ತಿದ್ದ ಅಷ್ಟೆ. ಹೆರವರ ವಿಷಯವನ್ನು ಕೇಳಬೇಕೆಂಬ ಕುಹಕದ ಉತ್ಸುಕತೆ, ಕಾತರ ಅವನಲ್ಲಿರಲಿಲ್ಲ. ಒಬ್ಬರ ಸ್ವಭಾವ, ನಡತೆ, ಚಾರಿತ್ರ್ಯಗಳ ವಿಷಯವಾಗಿ

ಯಂತೂ ಆತ ಎಂದಿಗೂ ಮಾತನಾಡಿದವನಲ್ಲ. ಅದರಂತೆ ತನ್ನ ಸುಖದುಃಖ, ಕಷ್ಟಗಳನ್ನು ಯಾರೆದುರೂ ತೋಡಿಕೊಂಡವನಲ್ಲ. 'ಇನ್ನೊಬ್ಬರ ಶುಷ್ಕ ಸಹಾನುಭೂತಿ ನನಗೆ ಬೇಡ. ನನ್ನ ಸುಖದುಃಖ ನನಗಿರಲಿ' ಎನ್ನುವ ಸ್ವಭಾವ-ವಕ್ರತೆ ಆತನದು. ಅದಕ್ಕಾಗಿಯೇ ಆತನೊಂದಿಗೆ ಮಾತನಾಡುವಾಗ ಸುಧಾಕರ ಜಾಗರೂಕನಾಗಿರುತ್ತಿದ್ದ.

"ಚಳಿಗಾಲದ ರಜೆ ಮುಗಿಸಿಕೊಂಡು ಬಂದ ಮೇಲೆ ನೀವು ಊರಿಗೆ ಹೋದಂತಿಲ್ಲ?" ಎಂದು ಹರೀಶನೇ ಕೇಳಿದುದು ಎಂತಹ ಅನಿರೀಕ್ಷಿತವೆಂದೆನಿಸಿತು ಸುಧಾಕರನಿಗೆ! ತನ್ನ ಕಿವಿಯನ್ನೇ ನಂಬದಾದ. ಹರೀಶ ಮಾತನಾಡಿಸಿದುದಕ್ಕೆ ವಿಸ್ಮಯವಾಗಿರಲಿಲ್ಲ. "ಊರಿಗೆ ಹೋದಂತಿಲ್ಲ?" ಎಂಬ ಪ್ರಶ್ನೆ ಕಲ್ಪನೆಗೂ ನಿಲುಕದಂತಿತ್ತು.

....ತನ್ನ ವಿಷಯವಾಗಿ? ಅದೂ ಊರಿಗೆ ಹೋಗುವದರ ವಿಷಯವಾಗಿ? ಹರೀಶ ಕೇಳುವದೇ?.... ಹರೀಶ ಹೇಗೆ ಈ ಪ್ರಶ್ನೆಯನ್ನು ಕೇಳಿದ?....ಎಂಬ ಕೌತುಕ ಸುಧಾಕರನ ಮನಸ್ಸನ್ನೇ ತುಂಬಿಬಿಟ್ಟಿತು. ಇಂತಹ ಆತ್ಮೀಯ ನುಡಿಗಾಗಿ ಮನೆ, ತಂದೆ-ತಾಯಿಗಳನ್ನು ಬಿಟ್ಟು ದೂರವಿರುವ ಹೃದಯ, ಹಂಬಲಿಸುವದು ಸ್ವಾಭಾವಿಕ. ಸುಧಾಕರನಿಗಂತೂ ಇದು ಅಪೇಕ್ಷಿತವೇ. ಒಬ್ಬರೊಬ್ಬರು ಸುಖದುಃಖಗಳಲ್ಲಿ ಹರುಷ ಸಹಾನುಭೂತಿಗಳನ್ನು ತೋರಿ, ಆತ್ಮೀಯರಾಗಿ ನಾಲ್ಕು ದಿನ ನಕ್ಕು ಕಳೆದು ಹೋಗಬೇಕೆನ್ನುವ ಸುಧಾಕರನಿಗೆ ಹರೀಶನ ಪ್ರಶ್ನೆ ಸಂತೋಷವನ್ನೇ ತಂದಿತು. ಆದರೆ ಹರೀಶನಲ್ಲಿ ಇದೇನು ಬದಲಾವಣೆ?.... ಎಂಬುದು ಮಾತ್ರ ಆತನಿಗೆ ತಿಳಿಯದಾಯ್ತು.

"ಹೋಗುವುದಾಗಿಲ್ಲ. ಪರೀಕ್ಷೆ ಮುಗಿಸಿಕೊಂಡೇ ಹೋಗಬೇಕೆಂದಿದ್ದೇನೆ" ಎಂದು ಲೌಕಿಕ ಉತ್ತರವನ್ನೇ ಕೊಟ್ಟು ತನ್ನ ಒಳತೋಟಿಯನ್ನು ಮರೆಮಾಡಿಕೊಂಡ.

"ನಿಮ್ಮ ತಂದೆಯವರೇನು ಮಾಡುತ್ತಾರೆ?"

"ಕೋರ್ಟಿನಲ್ಲಿ ಕಾರಕೂನರಿದ್ದರು. ಈಗ ನಿವೃತ್ತರಾಗಿದ್ದಾರೆ."

"ನೀವೆಷ್ಟು ಜನ ಅಣ್ಣ-ತಮ್ಮಂದಿರು?"

ಅವನ ಈ ಪ್ರಶ್ನೆಗಳೆಲ್ಲ ಸುಧಾಕರನ ಹೃದಯದಲ್ಲಿ ಅಲಗುಗಳಾಗಿ ಕೊರೆಯುತ್ತಿರುವಂತೆ ಭಾವನೆಯಾಯಿತು. ಹುದುಗಲಾರದ ದುಃಖ ಮೆಲುನಗೆಯಲ್ಲಿ

ತೇಲಿ ಬಂತು. "ಇಬ್ಬರು ತಮ್ಮಂದಿರಿದ್ದಾರೆ. ತಾಯಿ ತೀರಿಕೊಂಡು ಬಹಳ ದಿನ ಗಳಾದವು." ಎಂದು ಶುಷ್ಕವಾಗಿ ಉತ್ತರಿಸಿದ.

"ನೀವು ಸುಖೈವಿಗಳು!"

ಮೈಮರೆತು ಕುಳಿತಾಗ ಮೈಮೇಲೆ ಎಸರುನೀರನ್ನು ಸುರುವಿದಂತಾಯ್ತು ಸುಧಾಕರನಿಗೆ. ಹರೀಶನೆಡೆಗೆ ನೋಡಿದ ಸಂಕಟದಿಂದ. ಹರೀಶ ಕಲ್ಲುಕಂಬ ದಂತೆ ನಿಂತಿದ್ದ. ಬೆರಳುಗಳಿನ್ನೂ ಹೊಸೆಯುತ್ತಿದ್ದವು. ಮುಖ ವಿಕಾರರಹಿತ ವಾಗಿತ್ತು. ಅಸಮಾಧಾನ ಮೂಡಿತು. ಅದು ವಿಚಿತ್ರ ಕೋಪದಲ್ಲಿ ಬದಲಿಸಿತು. ಆ ಕೋಪ ಮುಂದೆ ಕಂಬನಿರಾಯಿತು. ಇದೆಲ್ಲ ಆದದ್ದು ಕಂಣವೆ ಮುಚ್ಚುವದ ರೊಳಗಾಗಿ.

ಸುಧಾಕರ ಹಾಗೆಯೇ ಆತನ ಕಡೆಗೆ ನೋಡುತ್ತ ನಿಂತಿದ್ದ.

ಒಮ್ಮೆಲೆ ಹರೀಶ ಮುಂದೆ ಬಂದ. ಸುಧಾಕರನ ಕೈ ಹಿಡಿದ. ಮಾತು ಒಳಗೇ ಸಿಕ್ಕಿಕೊಂಡವು. ಗಟ್ಟಿಯಾಗಿ ತುಟಿ ಕಚ್ಚಿಕೊಂಡ. ಉಕ್ಕಿ ಉಕ್ಕಿ ಬರುವ ಭಾವನೆ ತಡೆಯದಾಯ್ತು. "ನನ್ನನ್ನು ಕ್ಷಮಿಸಿರಿ. ನಾನು ಒರಟು. ಹಾಗೆ ಮಾತನಾಡಬಾರದಿತ್ತು." ಎಂದು ಅಂದವನೇ ಮಂಚದ ಮೇಲೆ ಬಿದ್ದುಕೊಂಡ. ಮುಖ ಮೇಲೆತ್ತಲಿಲ್ಲ. ಸುಧಾಕರನಿಗೆ ಇದಾವುದೂ ಅರ್ಥವಾಗಲಿಲ್ಲ. ಆತನ ಆ ವಿಚಿತ್ರ ಮಾತಿನಿಂದ ಆದ ಸಂಕಟ, ನೋವು, ದುಃಖ ಈಗ ಇರಲಿಲ್ಲ. ಒಂದು ಕ್ಷಣ ಕೋಪ ಬಂದಿತ್ತಾದರೂ ಈಗ ಅದು ಮಾಯವಾಯ್ತು. ಹೀಗೆ ಅಂದನೇಕೆ? ಬಾಯಿ ತಪ್ಪಿ ಬಂದಿದೆ. ತನ್ನನ್ನು ನೋಯಿಸಲು ಅಂದಿಲ್ಲವೆಂಬುದು ಸ್ಪಷ್ಟ ವಾಯ್ತು. ಆದರೂ ಹಾಗೆ ಮಾತನಾಡಬೇಕಾದರೆ, ಯಾವ ಸಂಕಟವಾಗಿದ್ದಿರ ಬೇಕು ಆತನಿಗೆ? ಹೃದಯದ ಯಾವ ದುಃಖ, ನೋವು ಅವನನ್ನು ಈ ರೀತಿ ಯಾಗಿ ಕಠೋರನನ್ನಾಗಿ ಮಾಡಿವೆಯೆಂಬುದು ತಿಳಿಯದಂತಾಯ್ತು. ಸುಧಾಕರ ಬಂದು ಹರೀಶನ ಬಳಿಯಲ್ಲಿ ಕುಳಿತುಕೊಂಡ. ಭುಜ ತಟ್ಟಿ "ಏಳಿರಿ ಹರೀಶ. ಮನಸ್ಸಿಗೆ ಯಾತನೆ ಮಾಡಿಕೊಳ್ಳಬೇಡಿರಿ. ನಿಮಗಾದುದೇನು ನನಗೆ ತಿಳಿಯ ದಿದ್ದರೂ ನಿಮ್ಮ ಹೃದಯ ನೊಂದಿದೆಯೆಂಬುದು ಗೊತ್ತಿದೆ. ಹಾಗೆಲ್ಲ ಕೊರಗ ಬೇಡಿರಿ. ನೀವು ನನ್ನನ್ನು ನೋಯಿಸಲು ಮಾತನಾಡಿಲ್ಲ. ನಾನು ಆ ಭಾವನೆ ಯನ್ನು ಮಾಡಿಕೊಂಡಿಲ್ಲ." ಎಂದು ಸಮಾಧಾನ ಹೇಳಿದ. ಕೆಲ ನಿಮಿಷಗಳಲ್ಲಿ ಹರೀಶ ಎದ್ದುಕುಳಿತ. ಶೂನ್ಯದೃಷ್ಟಿಯಿಂದ ನೆಲವನ್ನೇ ನೋಡುತ್ತ ಕುಳಿತ.

ಬಹುದಿನಗಳಿಂದ ಅದುಮಿದ ಸಿಟ್ಟು, ನೋವುಗಳೆರಡೂ ಅಂದು ಹರೀಶನ ಮನದ ತಳವನ್ನು ಮೀರಿ ಬಂದಿದ್ದವು.

"ಸುಮ್ಮನೆ ಇಲ್ಲದ ಆಲೋಚನೆ ಮಾಡಬೇಡಿರಿ. ಏಳಿರಿ, ಮುಖ ತೊಳೆದುಕೊಳ್ಳಿರಿ. ಊಟ ಮಾಡಿ ಬರೋಣ" ಎಂದು ಕರೆದ.

"ನನಗೇನೂ ಬೇಡ, ನೀವು ಹೋಗಿ ಬನ್ನಿರಿ."

"ಅದೆಲ್ಲ ಆಗದು. ದುಃಖವನ್ನು ಒಳಗೇ ನುಂಗಿದಂತೆ ಅದು ನಮ್ಮನ್ನೆ ನುಂಗುವದು. ಜೀವನದಲ್ಲಿ ಹೇಳಲಾರದ ಕಷ್ಟ, ಯಾತನೆ, ದುಃಖ ಬರುತ್ತವೆ. ಹೀಗೆ ನೀವು ಎದೆಗೆಟ್ಟು ನಿಮ್ಮನ್ನು ನೀವೇ ಹಿಂಸಿಸಿಕೊಳ್ಳಬೇಡಿರಿ."

ಸುಧಾಕರನ ಮಾತು ಹರೀಶನಲ್ಲಿ ಅದೆಷ್ಟೋ ನೆಮ್ಮದಿಯನ್ನು ತಂದಿತು. ಊಟ ಮಾಡಲು ಒಪ್ಪಿಕೊಂಡ.

ಇಬ್ಬರೂ ಹೋಗಿ ಊಟ ಮುಗಿಸಿಕೊಂಡು ಬಂದರು. ಅಷ್ಟರಲ್ಲಿ ಹರೀಶನ ಮನಸ್ಸು ಸ್ತಿಮಿತಕ್ಕೆ ಬಂದಿತ್ತು. "ನಾನೊಬ್ಬ ವಿಲಕ್ಷಣ ವ್ಯಕ್ತಿಯಲ್ಲವೇ? ಈ ದಿನ ಹೀಗೇಕೆ ಮಾತನಾಡಿದೆನೆಂದು ನಿಮಗೆ ಯೋಚನೆ ಬಂದಿರಬೇಕು." ಎಂದು ಹರೀಶ ಸುಧಾಕರನ ಬಳಿಯಲ್ಲೇ ಬಂದು ಕುಳಿತ. ಈವರೆಗೆ ಹೇಳಬಾರದೆಂದು ತನ್ನಲ್ಲಿಟ್ಟುಕೊಂಡದ್ದೆಲ್ಲವನ್ನೂ ಹೇಳಿದ.

ಹರೀಶ ತನ್ನ ಬದುಕಿನ ಕತೆಯನ್ನು ಹೇಳಿ ಮುಗಿಸಿದಾಗ ರಾತ್ರಿ ಹನ್ನೆರಡು ಗಂಟೆಯಾಗಿತ್ತು.

ಆತನ ಜೀವನ ವಂಚಿತ ಜೀವನ. ಮನೆಯಲ್ಲಿಯ ಕಟು ಅನುಭವಗಳು ಆತನ ಹೃದಯವನ್ನು ಕಲ್ಲಾಗಿ ಮಾಡಿದ್ದವು. ಮನೆಯಲ್ಲಿ ದೊರಕದ ಸಹಾನುಭೂತಿಯನ್ನು ಆತ ಮುಂದೆ ಯಾರಿಂದಲೂ ಅಪೇಕ್ಷಿಸಿರಲಿಲ್ಲ. ಅಷ್ಟೇ ಅಲ್ಲ – ಅದು ಬರುವ ಸ್ಥಾನವನ್ನೇ ದ್ವೇಷಿಸುತ್ತಿದ್ದ. ಅಂದು ನೀರಿನ ಭಾರವನ್ನಿಳುಹಿದ ನೀರದವಾಗಿತ್ತು ಹರೀಶನ ಹೃದಯ. ಸ್ನೇಹ, ಸಹಾನುಭೂತಿಗಳು ಬೆಂದ ಹೃದಯಕ್ಕೆ ಎಂತಹ ತಂಪು ಕೊಡುತ್ತವೆಂಬ ಅನುಭವ ಆ ದಿನ ಅವನಿಗೆ ಆಯ್ತು. ಬಹುದಿನಗಳಿಂದ ಕೊರೆದ ಗಾಯ ಮಾಯ್ದಂತಾಯ್ತು. ಕಂಬನಿ, ನಿಟ್ಟುಸಿರುಗಳಲ್ಲಿ ತನ್ನ ಹಿಂದಿನ ಕಹಿ ಅನುಭವಗಳನ್ನೆಲ್ಲ ಹೊರಗೆ ನೂಕಿದ. ನಂತರ ಆಡಿ ದಣಿದ ಮಗುವಿನಂತೆ ಮಲಗಿದ. ಸುಧಾಕರನೂ ಮಲಗಿದ.

ಹರೀಶ ಮಲಗಿ ಕಣ್ಣು ಮುಚ್ಚಿದ್ದರೂ ಅವನಿಗೆ ನಿದ್ರೆ ಹತ್ತಿರಲಿಲ್ಲ. ಅವ

ನೊಳಗೆ ಹಿಂದಿನ ನೆನಪುಗಳೆಲ್ಲ ಬಂದು ಗುದುಮುರಿಗೆ ಹಾಕುತ್ತಿದ್ದವು.

...."ಮಲತಾಯಿ ನನ್ನ ತಂದೆಯನ್ನು ನನ್ನಿಂದ ಕಸಿದಳು!"

...."ತಂದೆ ನನ್ನ ಮಾನಸಿಕ ಬೆಳವಣಿಗೆಯ ಮೂಲ ಭಾವನೆಗಳನ್ನು ಸುಟ್ಟುಹಾಕಿದ!"

...."ಮನೆ, ತಂದೆ, ತಾಯಿ, .... ಅಂತಃಕರಣ ... ಇವೆಲ್ಲ ದುರ್ಬಲ ಮನಸ್ಸು ಸಮಾಧಾನಕ್ಕಾಗಿ ಕಟ್ಟಿಕೊಳ್ಳುವ ಭಾವನೆಗಳು...."

"....ಈ ಭಾವನೆಗಳ ಒತ್ತಾಯಕ್ಕೆ ಸಿಕ್ಕು, ನಾನು ಪ್ರತಿಭಟಿಸಲಿಲ್ಲ. ಎಲ್ಲವನ್ನೂ ಸಹಿಸಿದೆ, ನುಂಗಿದೆ. ಆದಕ್ಕೇ ಇಂದು ನಾನು "ವಿಕ್ಷಿಪ್ತ"ವ್ಯಕ್ತಿಯಾದುದು!"

..."ಕೊನೆಗೂ ನನ್ನ ತಂದೆ ನನ್ನನ್ನು ಹೊರಗಟ್ಟಿದರು!....'ನಿನ್ನ ಪಾಲು ತೆಗೆದುಕೊಂಡು ಹೋಗು!' ಎಂದರು."

...."ನಿಜವಾಗಿ ಇಂದಿನಿಂದ ನನ್ನ ಹೊಸ ಬದುಕು ಪ್ರಾರಂಭ...."

...."ಸುಧಾಕರ? ತಂದೆ ಅದೆಷ್ಟೇ ನನ್ನನ್ನು ಕಡೆಗಣಿಸಿದರೂ ಇಲ್ಲಿಯ ವರೆಗೆ ಹೇಳಿಕೊಳ್ಳಲು ನನಗೊಬ್ಬ ತಂದೆ, ಮನೆ, ಇದ್ದವು. ಇಂದು ನಾನು ಒಬ್ಬನೇ!....ಒ–ಬ್ಬ–ನೇ....!"

ಹರೀಶನ ಮುಚ್ಚಿದ ಕಣ್ಣೆದುರಿಗೆ ಈ ಕೆಲವೇ ಮಾತುಗಳು ಪುತ್ತಿ ಪುತ್ತಿ ಬೃಹದ್ರೂಪ ತಾಳಿ ಬರುತ್ತಿದ್ದವು. ಹರೀಶನ ಹೃದಯ ಮಗುವಿನಂತೆ ಅತ್ತಿತು... ಒಮ್ಮೊಮ್ಮೆ ನೆಲದೊಡಲೊಳಗಿಂದ ಸಿಡಿದು ಬಂದ ಜ್ವಾಲಾಮುಖಿಯಂತಾಗಿದ್ದ ಹರೀಶ....ಜ್ವಾಲಾಮುಖಿ ಈಗ ಶಾಂತವಾಗಿತ್ತು....ಇನ್ನೂ ಹೊಗೆ ಮಾತ್ರ ಇತ್ತು...ಆತ ನಡುನಡುವೆ ದೀರ್ಘ ಉಸಿರನ್ನು ಬಿಡುತ್ತಿದ್ದ....

* * *

ಮರುದಿನ ಶನಿವಾರ. ಬೆಳಿಗ್ಗೆ ಕಾಲೇಜು. ಹಾಸ್ಟೆಲಿನಲ್ಲಿ ಗಡಿಬಿಡಿಯೇ ಗಡಿಬಿಡಿ. ಮುಖ ತೊಳೆಯುತ್ತ ಹಲವರು ನಿಂತಿದ್ದರು. ಕೆಲವರಾಗಲೆ ಸ್ನಾನ ಮುಗಿಸಿದ್ದರು. ಕೆಲವರ ಕೋಣೆಯಲ್ಲಿ ಸ್ಟೋವಿನ ಸಪ್ಪಳ ಕೇಳಿಸುತ್ತಿತ್ತು.

ಇನ್ನೂ ನಿದ್ರಿಸುತ್ತಿದ್ದ ಸ್ನೇಹಿತರನ್ನು ಎಚ್ಚರಿಸುತ್ತ ತಿರುಗುತ್ತಿದ್ದರು ಕೆಲವರು. ಈ ಗೊಂದಲಕ್ಕೆ ಸುಧಾಕರ ಎಚ್ಚತ್ತ. ಮುಖ ತೊಳೆದುಕೊಂಡು ಬಂದ. ಹರೀಶ ಇನ್ನೂ ನಿದ್ರೆಯಲ್ಲಿದ್ದ. 'ಬಳಲಿದ ಹೃದಯ, ಇನ್ನೂ ಮಲಗಿದರೆ

ಮಲಗಲಿ.' ಎಂದುಕೊಂಡು ಸುಧಾಕರ ಹರೀಶನನ್ನು ಎಬ್ಬಿಸದೆ ಕಾಲೇಜಿಗೆ ಹೊರಟ. ಹೋಗುವಾಗ ಮಾಧವನನ್ನು ಕೂಗಿಕೊಂಡು ಹೋದ. ಹಿಂದಿನ ರಾತ್ರಿಯ ನೆನಪು ಇನ್ನೂ ಹಸಿರಾಗಿತ್ತು ಸುಧಾಕರನಲ್ಲಿ. ಮಾಧವನೆದುರು ಹೇಳಬೇಕೆಂಬ ತವಕ ಒಮ್ಮೆಲೆ ಉಂಟಾದರೂ ಅವಕ್ಕೆ ತಡೆ ಹಾಕಿದ. ನೆನೆದಂತೆಲ್ಲ ಹರೀಶ ಆತನ ಹೃದಯದಲ್ಲಿ ವಿಲಕ್ಷಣ ಭಾವನೆಯನ್ನುಂಟುಮಾಡಿದ್ದ.

ಕಾಲೇಜು ಮುಗಿಸಿಕೊಂಡು ಬಂದಾಗ ಹನ್ನೊಂದು ಗಂಟೆಯಾಗಿತ್ತು. ಸುಧಾಕರನಿನ್ನೂ ಕೋಣೆಯಲ್ಲಿ ಮಾಧವನ ಕೂಡ ಮಾತನಾಡುತ್ತ ಕುಳಿತಿದ್ದ. ಖಾಕಿ ಉಡುಪಿನಲ್ಲಿದ್ದ ಬಡಕಲು ವ್ಯಕ್ತಿಯೊಂದು ಕೋಣೆಯ ಎದುರು ಒಂದೆರಡು ಸಲ ಸುಳಿಯಿತು.

"ಯಾರು ಬೇಕಾಗಿತ್ತು?" ಹೊರಗೆ ಬಂದು ಮಾಧವ ಕೇಳಿದ.

"ಮಾಧವರಾವ್ ಅಂತ ಎಲ್ಲಿ ಅದಾರ್ರೀ? ನಮ್ಮ ಗಣಪತರಾಯ್ರು ಒಂದು ಚೀಟಿ ಕೊಟ್ಟಾರು."

"ನಾನೇ." ಎಂದು ಹೇಳಿ ಮಾಧವ ಕಾಗದವನ್ನು ತೆಗೆದುಕೊಂಡ.

ಸಲಾಮು ಹಾಕಿ ಆ ವ್ಯಕ್ತಿ ಹೋದ ಮೇಲೆ, ಕಾಗದವನ್ನು ಓದುತ್ತಲೇ ಮಾಧವ ಒಳಗೆ ಬಂದ.

* * *

ಆದಿತ್ಯವಾರ ಮಧ್ಯಾಹ್ನ. ಗಣಪತರಾಯರು ತಮ್ಮ ಕೋಣೆಯಲ್ಲಿ ವಿಶ್ರಮಿಸುತ್ತಿದ್ದರು. ಎಲೆಯಡಿಕೆಯನ್ನು ಸಾವಕಾಶವಾಗಿ ಮೆಲ್ಲುತ್ತಲೆ ಇದ್ದರು. ನಿದ್ದೆಯ ಜೊಂಪು ಮೆಲ್ಲಗೆ ಆವರಿಸಹತ್ತಿತು. ಮಲಗಿದರೆ ಬೇಗನೆ ಎಚ್ಚರ ವಾಗುವದಿಲ್ಲೆಂದು ಎದ್ದು ಕುಳಿತರು. ಊಟದ ಖಾರದಿಂದ ಮೈ ತೂಗುತ್ತಿತ್ತು. ಆದರೂ ಮುಖ ತೊಳೆದುಕೊಂಡು ಬಂದರು. ಸೋಮವಾರದ ಸಂಚಿಕೆಗಾಗಿ ವಿಶೇಷಲೇಖನವನ್ನು ಬರೆಯಲು ಕುಳಿತರು.

ಸಾಯಂಕಾಲ ಬರುವ ಅತಿಥಿಗಳ ಸ್ವಾಗತದ ಸಿದ್ಧತೆ ಆಗಬೇಕಾಗಿತ್ತು. ಅರುಣಳಿಗೆ ಮೈತುಂಬ ಕೆಲಸ. ಮೊದಲು ಮನೆಯನ್ನೆಲ್ಲ ಕಸಗುಡಿಸಿ ಸ್ವಚ್ಛ ಮಾಡಿದಳು. ಅಲ್ಲಲ್ಲಿ ಹರಡಿಕೊಂಡಿದ್ದ ಅರಿವೆ, ಪುಸ್ತಕ, ಇನ್ನುಳಿದ ಸಾಮಾನು ಗಳನ್ನೆಲ್ಲ ನಿರ್ದಿಷ್ಟಗೊಳಿಸಿದ ಸ್ಥಳದಲ್ಲಿ ಇರಿಸಿದಳು. ಕರುಣಳ ಕೋಣೆಯಲ್ಲಿ ಬಂದು "ಕರುಣಾ, ನಡುಮನೆಯನ್ನು ಅಲಂಕರಿಸುವ ಕೆಲಸ ನಿನ್ನದು." ಎಂದು

ಹೇಳಿ ಅಡುಗೆಯ ಮನೆಗೆ ನಡೆದಳು.

ಕರುಣಾ ಉತ್ಸುಕತೆಯಿಂದ ಹೊರಗೆ ಬಂದಳು. ಒಳಗಿರಿಸಿದ ಕಂದು ಬಣ್ಣದ ಅಂಚಿನ ಹಸಿರು ಜಮಖಾನೆಯನ್ನು ಹಾಸಿದಳು. ಕಸೂತಿಯ ಕುಸುರಿನ ಹೊಸ ಹೊದಿಕೆಗಳನ್ನು ತೊಡಿಸಿ 'ತೆಕ್ಕೆ'ಗಳನ್ನು ತಂದು ಸಮಾನಾಂತರದಲ್ಲಿ ಇಟ್ಟಳು. ಮಧ್ಯದಲ್ಲಿ ಎಲೆವಳ್ಳಿಯ ಚಿತ್ರದ ಒಂದು ಚಿಕ್ಕ ಜಮಖಾನೆಯನ್ನು ಹಾಸಿದಳು. ನೀಲವರ್ಣದ ಚಿಕ್ಕ ಮೆತ್ತೆಗಳ ಒಂದೆರಡು ಕುರ್ಚಿಗಳನ್ನು ತಂದಿಟ್ಟಳು. ಬಾಗಿಲು, ಕಿಟಕಿಗಳಿಗೆ ಪರದೆಗಳನ್ನು ಇಳಿಬಿಟ್ಟಳು. ತಾನು ಹೆಣೆದ ಬಾಗಿಲತೋರಣ ಕಟ್ಟಿದಳು. ಅಲ್ಲಿಂದ ತನ್ನ ಕೋಣೆ, ಗಣಪತರಾಯರ ಕೋಣೆಗಳೆರಡನ್ನೂ ಶುಚಿಯಾಗಿರಿಸಿ, ಎಲ್ಲ ವಸ್ತುಗಳನ್ನೂ ಅಂದವಾಗಿ ಹೊಂದಿಸಿಟ್ಟಳು. ಮೇಜಿನ ಮೇಲೆ ಹೂವಿನ ಪಾತ್ರೆಗಳನ್ನಿಟ್ಟಳು. ಮತ್ತೆ ನಡುಮನೆಗೆ ಬಂದಳು. ಮತ್ತೊಮ್ಮೆ ಎಲ್ಲವನ್ನೂ ನೋಡಿದಳು. ಏನನ್ನಾದರೂ ಮರೆತಿರುವೆನೇನು ? ಎಂದು ಮತ್ತೆ ಮತ್ತೆ ಆಲೋಚಿಸಿದಳು. ಗೋಡೆಗೆ ಹೊಂದಿಸಿದ ಭಾವ-ಚಿತ್ರಗಳನ್ನು ಚೆನ್ನಾಗಿ ಒರೆಸಿದಳು.

ಹೀಗೆ ಕೋಣೆ, ನಡುಮನೆಗಳ ನಡುವೆ ಅವಳ ಓಡಾಟ ನಡೆದೇ ಇತ್ತು. ಬಹಳ ದಿನಗಳಿಂದ ಕಾಣಲು ಬರುತ್ತಿರುವ ಪ್ರಿಯಕರನನ್ನು ಸ್ವಾಗತಿಸುವ ಸಂಭ್ರಮ ಅವಳಿಗಾಗಿತ್ತು. ತನ್ನಲ್ಲಿ ತಾನೆ ಹಾಡೊಂದನ್ನು ಗುಂಯ್ಗುಡುತ್ತಿದ್ದಳು. ಎಷ್ಟು ಅಂದವಾಗಿ ಅಲಂಕರಿಸಿದರೂ ತೃಪ್ತಿಯಿಲ್ಲ. ಎಲ್ಲಿಯೂ ಕುಂದಿಲ್ಲದಂತೆ, ಪ್ರತಿಯೊಂದು ವಸ್ತು ಅವಳ ಅಭಿರುಚಿ, ಸೌಂದರ್ಯದೃಷ್ಟಿಗಳನ್ನು ಸೂಚಿಸುತ್ತಿತ್ತು.

ಎಲ್ಲವನ್ನು ಸಜ್ಜುಗೊಳಿಸಿ ತನ್ನ ಕೋಣೆಗೆ ಬಂದಳು. ಮೂಲೆಯಲ್ಲಿರಿಸಿದ ತಂಬೂರಿಯನ್ನು ಸಾವಕಾಶವಾಗಿ ಎತ್ತಿಕೊಂಡು, ತೊಟ್ಟಿಲ ಮಗುವಿನ ಅಂಗಿಯನ್ನು ತೆಗೆಯುವಂತೆ ಅದರ ಗವಸಣಿಗೆಯನ್ನು ತೆರೆದಳು. ಒಂದು ಬಾರಿ ತನ್ನ ಒಡಲಗೆಳತಿಯನ್ನು ಪ್ರೀತಿವಿಶ್ವಾಸಗಳಿಂದ ನೋಡಿದಳು. ಮೃದುವಾಗಿ ತಂತಿಗಳ ಮೇಲೆ ಬೆರಳಾಡಿಸಿದಳು. ಅದರ ಮೃದುವಾದ ಕಂಪನ ಕರುಣಳ ಮನವನ್ನು ಸ್ಪಂದಿಸಿತು. ಅಂದು ಅವಳ ಹೃದಯ ಅಕಾರಣವಾಗಿ ಮುದಗೊಂಡಿತ್ತು. ನೀರಿನ ಬುಗ್ಗೆಯಂತೆ ಯಾವುದೋ ಭಾವನೆಯು ಒಳಗೆ ಪುಟಿಯುತ್ತಿತ್ತು. ಅವ್ಯಕ್ತ ಹರುಷದ ಅಲೆಗಳು ಮನದ ತೀರವನ್ನು ಮೃದುವಾಗಿ ಮುದ್ದಿಡುತ್ತಿದ್ದವು. ಕೈಯಲ್ಲಿಯ ತಂಬೂರಿಯನ್ನು ಮತ್ತೆ ಮೀಟಿದಳು. ಅದರ ಸ್ವರದ ಕ್ಷೀಣ ಅಲೆ

ಯೊಂದು ಮನದಲ್ಲಿ ಲೀನವಾಯ್ತು. ತಂಬೂರಿಯನ್ನು ಒರೆಸಿದಳು. ತಂತಿಗಳನ್ನು ಶ್ರುತಿಗೂಡಿಸಿದಳು. ಅಲೆಯೊಳಗೊಂದು ಅಲೆ ತೇಲಿ ಲೀನವಾಗುವಂತೆ ಶ್ರುತಿ ಗೊಳಿಸಿದ ಷಡ್ಜ, ಪಂಚಮಗಳು ಒಂದರೊಳಗೊಂದು ಕರಗಿ ಮಿಡಿದವು.

ತಂಬೂರಿಯನ್ನು ಮತ್ತೆ ಮೂಲೆಯಲ್ಲಿರಿಸಿದಳು. ಮನದಲ್ಲಿ ಉತ್ಸಾಹ; ಏನನ್ನಾದರೂ ಮಾಡಬೇಕು ಎಂದು ತವಕ ಅವಳಿಗೆ. ಮೇರೆ ಮೀರಿದ ಆನಂದ, ಉತ್ಸಾಹಗಳು ಕರುಣಳನ್ನು ಪೀಡಿಸಿದವು. ಕುಳಿತಲ್ಲಿ ಕೂಡಲಾಗಲಿಲ್ಲ. ಅಡುಗೆ ಮನೆಗೆ ನೆಗೆದಳು.

ಅಲ್ಲಿ ಅರುಣಾ ಉಪಹಾರದ ತಯಾರಿಯಲ್ಲಿದ್ದಳು. ಕೊಬ್ಬರಿ ಹೆರೆಯುತ್ತ ಕುಳಿತ ಅಕ್ಕನ ಬಳಿಗೆ ಹೋಗಿ "ನಾನು ಹೆರೆಯುತ್ತೇನೆ ಬಿಡು ಅಕ್ಕಾ" ಎಂದಳು.

"ಮುಂದೆ ಇದ್ದೇ ಇದೆ ಕರುಣಾ. ನೀನಿನ್ನು ಮುಖ ತೊಳೆದುಕೊ ಹೋಗು. ನಡುಮನೆಯ ಕಪಾಟಿನಲ್ಲಿ ಮಲ್ಲಿಗೆಯ ಹೂಗಳಿವೆ. ಒಂದೆರಡು ಚಿಕ್ಕ ಮಾಲೆ ಗಳನ್ನು ಹೆಣೆದಿಡು."

ಅಂತು ಈಗ ಮನದ ಕಾತರ, ದುಗುಡಗಳನ್ನು ಮರೆಯಲು ಕರುಣಳಿಗೆ ಕೆಲಸ ಸಿಕ್ಕಂತಾಯಿತು. ಕೂಡಲೆ ಹೊರಟಳು. ಹೊರಟಿದ್ದ ಕರುಣಳನ್ನು ತಡೆದು "ನಿಮ್ಮ ಮಾಮಾ ಏನು ಮಾಡುತ್ತಿದ್ದಾರೆ ನೋಡು? ಇನ್ನೂ ಮಲಗಿ ದ್ದರೆ ಎಬ್ಬಿಸು. ಇಂದು ಸ್ನೇಹಿತರನ್ನು ಆಮಂತ್ರಿಸಿದುದು ನೆನಪಿದೆಯೋ ಕೇಳಿ ನೋಡು." ಎಂದು ಬೇರೆ ಕೆಲಸ ಹೇಳಿದಳು.

ಕರುಣಾ ನಕ್ಕು "ಹೂಂ" ಎಂದು ಅತ್ತ ನಡೆದಳು.

ಗಣಪತರಾಯರನ್ನು ಎಬ್ಬಿಸಿ, ಕಪಾಟಿನಲ್ಲಿದ್ದ ಮಲ್ಲಿಗೆ ಹೂಗಳನ್ನು ತೆಗೆದುಕೊಂಡು ಮತ್ತೆ ತನ್ನ ಕೋಣೆಗೆ ಬಂದಳು. ಕುಳಿತು ಹೂಗಳನ್ನು ಹೆಣೆಯಹತ್ತಿದಳು. ಕೈಯೊಡನೆ ಮನಸ್ಸೂ ಬಣ್ಣ ಬಣ್ಣದ ಮೃದು ಭಾವನೆಗಳ ಮಾಲೆಯನ್ನು ಕಟ್ಟಹತ್ತಿತು.

ಮನದ ಉತ್ಸಾಹ, ಹರುಷಗಳನ್ನು ನಾವು ಒಬ್ಬರೆ ಅನುಭವಿಸಲಾರೆವು. ಆತ್ಮೀಯರೊಬ್ಬರೊಂದಿಗೆ ಅದನ್ನು ಪಾಲುಗೊಳ್ಳುವದರಲ್ಲಿ ಹೃದಯಕ್ಕೆ ಹೆಚ್ಚಿನ ಪ್ರೀತಿ. ಕರುಣಳಿಗೂ ಹೀಗೆಯೇ ಆಯಿತು. ಒಮ್ಮೆಲೆ ಮಾಲತಿಯನ್ನು ಜ್ಞಾಪಿಸಿ ಕೊಂಡಳು. ಕೂಡಲೆ ನೆರೆಮನೆಗೆ ಓಡಿದಳು.

ಮಾಲತಿಯೂ ಹೊರಡುವ ಸಿದ್ಧತೆಯಲ್ಲಿದ್ದಳು.

"ಎಷ್ಟು ಶ್ರಮಮಾಡಿದೆ ಮಾಲತಿ? ಮರೆತೇಬಿಟ್ಟಿದ್ದೆಯೇನು?"

ಕರುಣಳ ಉತ್ಸಾಹ ನೋಡಿ "ಈಗಿನ್ನೂ ನಾಲ್ಕು ಗಂಟೆಯಾಗಿದೆ! ೫-೩ಂಕ್ಕೆ ನೀನು ಬರಹೇಳಿದ್ದೆಯಲ್ಲವೇ?" ಎಂದಳು ಮಾಲತಿ.

"ಹೂಂ! ಸಮಯಕ್ಕೆ ಸರಿಯಾಗಿ ಬರಲು ನೀನೇನು ಬೀಗಿತ್ತಿಯೇನು? ನನ್ನ ಕೆಲಸದಲ್ಲಿ ನೆರವಾಗಲು ಬರುತ್ತೀಯೆಂದು ಕಾಯ್ದು ಸಾಕಾಯ್ತು!"

"ಪಾಪ! ದುಡಿದು ದಣಿದಿದ್ದೀ! ಹೂವಿನ ಹಾಗೆ ಬೆಳೆದಿದ್ದೀ. ನೀನು ಕೆಲಸ ಮಾಡುತ್ತೀಯಾ!" ಎಂದು ಚೇಷ್ಟೆ ಮಾಡಿದಳು.

ಲಗುಬಗೆಯಿಂದ ಇಬ್ಬರೂ ತಿರುಗಿ ಮನೆಗೆ ಬಂದರು.

ಅಂದಿನ ವಿಶೇಷ ಅಲಂಕಾರ, ಆ ಸುಸಜ್ಜಿತ ನಡುಮನೆ, ಅಡುಗೆಮನೆಯಿಂದ ಬರುವ ಕಂಪು, ಇವೆಲ್ಲವುಗಳನ್ನು ನೋಡಿ ಮಾಲತಿ "ಇದೇನು! ಇಂದು ವಿಶೇಷವೇನಾದರೂ ಇದೆಯೇನೇ ಕರುಣಾ?" ಎಂದು ಕರುಣಳ ಭುಜವನ್ನು ಚಿವುಟಿದಳು.

"ಅಂತಹದೇನಿಲ್ಲ ಬಾರೇ ಸುಮ್ಮನೆ." ಎಂದು ಕೋಣೆಗೆ ಕರೆದೊಯ್ದಳು.

ಇಬ್ಬರೂ ಹೂ ಪೋಣಿಸಹತ್ತಿದರು. ಕರುಣಳ ಮುಖದ ಮೇಲೆ ಲಾಸ್ಯವಾಡುವ ನಗೆ, ಏನನ್ನೊ ನೆನೆದು ಕೆಂಪೇರುವ ಅವಳ ಗಲ್ಲ, ಕನಸಿನಲ್ಲಿ ತೇಲುವ ಅವಳ ಕಂಣು,- ಇವೆಲ್ಲಕ್ಕೂ ಮಿಗಿಲಾಗಿ ಅವಳ ಅರ್ಥಪೂರ್ಣ ಮೌನಗಳನ್ನು ಕಂಡು ಮಾಲತಿ "ಏನೇ, ಯಾರಾದರೂ ನೋಡಲು ಬರುವವರಿದ್ದಾರೇನೆ?" ಎಂದು ಕೇಳಿ ಕರುಣಳನ್ನು ರೇಗಿಸಿದಳು.

ಕರುಣಾ ಕೋಪವನ್ನು ನಟಿಸಿದರೂ ಅವಳ ಮೈ ಪುಲಕಗೊಂಡಿತು. "ಹೋಗೇ. ನಿನ್ನದೊಂದು. ನನ್ನನ್ನೇಕೆ ನೋಡಲು ಬರುತ್ತಾರೆ? ನಮ್ಮ ಮಾವನ ಸ್ನೇಹಿತರು ಬರುವವರಿದ್ದಾರೆ." ತುಸು ಮುನಿಸಿನಿಂದಲೇ ಹೇಳಿದಳು.

ಮಾತಿನ ಮಾಲೆ ಕಟ್ಟುತ್ತಲೇ ಹೂಗಳ ಮಾಲೆಯನ್ನೂ ಇಬ್ಬರೂ ಕೂಡಿ ಕಟ್ಟಿದರು

"ಈಗ ಬಂದೆ ಕೂತಿರು ಮಾಲತಿ." ಎಂದು ಹೇಳಿ ಕರುಣಾ ಒಳಗೆ ಹೋದಳು.

ಮಾಲತಿ, ಮೇಜಿನ ಮೇಲಿರಿಸಿದ ಪುಸ್ತಕಗಳನ್ನು ನೋಡುತ್ತ ಕುಳಿತಳು.

"ಮಾಲತೀ!" ಎಂದು ಕರುಣಾ ಒಳಗೆ ಬಂದಳು. ಮಾಲತಿ ಮುಖ

ತಿರುವಿ ನೋಡಿದಳು. ಆವಳ ಕಂಣಿಗೆ ಕರುಣಾ ಅಪ್ಸರೆಯಂತೆ ಕಂಡಳು. ವಿಧಾತನ ರಮ್ಯ ಕನಸಿನ ಚೆಲುವು ಕರುಣಳ ಮೈಯಲ್ಲಿ ತುಂಬಿ ನಿಂತಂತಿತ್ತು. ತನ್ನ ಪ್ರೀತಿಯ ನೀಲವರ್ಣದ ಸೀರೆಯನ್ನು ಉಟ್ಟಿದ್ದಳು. ಮುಡಿದ ಮಲ್ಲಿಗೆ ಹೆಣೆದ ನೀಳ್ಜಡೆಯಲ್ಲಿ ನಿದ್ರಿಸುತ್ತಿತ್ತು. ಅವಳ ಸಹಜಸೌಂದರ್ಯ ಅಂದು ಹೆಚ್ಚಾಗಿ ಕಳೆಗೊಂಡಂತಿತ್ತು.

ಕರುಣಾ ಬಂದು ಮಾಲತಿಯ ಹೆರಳಿನಲ್ಲಿ ಮಾಲೆಯೊಂದನ್ನು ಮೃದುವಾಗಿ ಇರಿಸಿದಳು. ಕರುಣಳ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡು ಮಾಲತಿ "ಕರುಣಾ, ದೃಷ್ಟಿಯಾದೀತು. ದೃಷ್ಟೀಬೊಟ್ಟು ಇಟ್ಟುಕೋ ಒಂದಿಷ್ಟು." ಎಂದು ಕಣ್ಣರಳಿಸಿ ಆವಳನ್ನು ನೋಡಿ "ಯಾವ ಮೋಹನನಿಗಾಗಿ ಈ ಸಿಂಗಾರ?" ಎಂದು ಕರುಣಳ ಕೈಗಳನ್ನು ಹಿಡಿದು ಎಳೆದಳು.

ಕರುಣಾ ಮಾತನಾಡಲಿಲ್ಲ. ಮಾಲತಿಯ ಭುಜಕ್ಕೊರಗಿದಳು ಅಷ್ಟೆ.

ಗಣಪತರಾಯರು ಆದೇ ಎದ್ದು ಹೊರಟವರು ಕರುಣಳ ಕೋಣೆಯಲ್ಲಿ ಇಣಿಕಿ "ನೀವೆಲ್ಲ ಆಗಲೆ ಎಲ್ಲವನ್ನೂ ಅಣಿಗೊಳಿಸಿದ್ದೀರಲ್ಲ! ಕರುಣಾ, ತಂಬೂರಿಯನ್ನು ಒಂದಿಷ್ಟು ಮಾತನಾಡಿಸಿ ನೋಡು. ಈ ದಿನ ನೀನು ಒಳ್ಳೆಯ ಹಾಡುಗಳನ್ನು ಹೇಳಬೇಕು. ನೆನಪಿದೆಯಲ್ಲವೇ?" ಎಂದು ಹೇಳಿ ಮುಂದೆ ನಡೆದರು.

ಎಲ್ಲ ಅರ್ಥವಾದವಳಂತೆ ಮಾಲತಿ "ಓ! ಗುಟ್ಟು ಹೇಗೆ ಹೊರಬಿದ್ದಿತು ಕರುಣಾ? ಈ ಅಲಂಕಾರ, ಈ ತಂಬೂರಿ....ಆಂ!" ಎಂದು ನಗೆಯಾಡಿದಳು. ಕರುಣಳನ್ನು ಪೀಡಿಸಿ, ಪೀಡಿಸಿ ಕೇಳಿದಳು. ಕರುಣಾ ಅದಕ್ಕೇನೆಂದು ಉತ್ತರಿಸಬೇಕು? "ಸುಮ್ಮನೆ ಕಾಡಬೇಡ ಮಾಲೀ" ಎಂದು ಮೇಲಕ್ಕೆದ್ದಳು.

ಇಬ್ಬರೂ ಒಳಗೆ ನಡೆದರು. ಅರುಣಳ ಸಿದ್ಧತೆಯೆಲ್ಲ ಮುಗಿದಿತ್ತು. ಬಂದ ಇವರಿಬ್ಬರನ್ನೂ ನೋಡಿ "ಕರುಣಾ, ನೀವಿಬ್ಬರೂ ಕೂಡಿ ಕಸಗೂಡಿಸಿ, ಮಣೆ ಹಾಕಿ, ಅಣಿಗೊಳಿಸಿರಿ. ನಾನು ಹೆರಳು ಹಾಕಿಕೊಂಡು ಬರುವೆ" ಎಂದು ಹೇಳಿ ಹೊರಟಳು.

ಮಾಲತಿಯ ಜೊತೆಗೆ ಕರುಣಾ ಕಸಗುಡಿಸಿದಳು. ಉಪಹಾರದ ಪಾತ್ರೆಗಳನ್ನೆಲ್ಲ ಒಂದು ಬದಿಗೆ ಜೋಡಿಸಿ ಇಟ್ಟಳು. ಮಣೆ ಹಾಕಿ, ನೀರಿನ ತಂಬಿಗೆಗಳನ್ನು ಬಳಿಯಲ್ಲಿರಿಸಿದಳು. ಹೆಚ್ಚಿನ ಅನಾವಶ್ಯಕ ಪಾತ್ರೆಗಳನ್ನೆಲ್ಲ ದೊಡ್ಡ ಕಪಾಟಿನಲ್ಲಿ ಇಟ್ಟಳು. ಊದಿನಕಡ್ಡಿಯ ಕಂಪೊಗೆವ ಹೊಗೆ ಮನೆಯನ್ನೆಲ್ಲ

ವ್ಯಾಪಿಸಿತು.

ಅಷ್ಟರಲ್ಲಿ ಅರುಣಾ ಸಿದ್ಧಳಾಗಿ ಬಂದಳು. ಗಣಪತರಾಯರು ಇನ್ನೂ ಹಾಗೆಯೇ ತಮ್ಮ ಕೋಣೆಯಲ್ಲಿ ಕುಳಿತಿದ್ದರು.

"ಗಂಟೆ ಐದಾಯ್ತು. ಅವರಿಗೆ ಎಷ್ಟು ಗಂಟೆಗೆ ಬರಹೇಳಿದ್ದೀರಿ?" ಅರುಣಾ ಗಂಡನನ್ನು ಕೇಳಿದಳು.

"ಐದೂವರೆಗೆ." ಕುಳಿತಲ್ಲಿಂದಲೇ ಉತ್ತರ ಬಂತು.

"ನೀವಿನ್ನೂ ಹೀಗೆಯೇ ಇದ್ದೀರಲ್ಲ, ಅರಿವೆ ಬದಲಿಸುವದಿಲ್ಲವೇ? ನಿಮ್ಮ ಆಲಸ್ಯ!...ದೇವರೇ ಕಾಪಾಡಬೇಕು!" ಎಂದಳು.

"ಯಾವುದಕ್ಕೂ ನಿನ್ನದು ಅವಸರ ಬಹಳ. ಎರಡು ನಿಮಿಷಗಳಲ್ಲಿ ಸಿದ್ಧ ನಾನು!" ಎಂದವರೇ ಮೇಲೆದ್ದರು.

ಕರುಣಳ ಕೋಣೆಯಲ್ಲಿ ಮೂವರೂ ಕುಳಿತಿದ್ದರು. ಗಣಪತರಾಯರು ಹೋಗಿ ಗೇಟಿನ ಬಳಿ ನಿಂತಿದ್ದರು. ಐದು ಹೊಡೆದು ಇಪ್ಪತ್ತು ನಿಮಿಷಗಳಾಗಿದ್ದವು. ಸರಿಯಾಗಿ ಮಾಧವ ಗೇಟಿನಲ್ಲಿ ಕಾಲಿಟ್ಟ.

ಗಣಪತರಾಯರು ಮುಗುಳುನಗೆಯಿಂದ ಸ್ನೇಹಿತರಿಗೆ ಸ್ವಾಗತ ನೀಡಿದರು. ಸುಧಾಕರ ಮಾಧವನ ಹಿಂದೆ ಬರುತ್ತಿದ್ದ. "ನಡೆಯಿರಿ ಒಳಗೆ." ಎನ್ನುತ್ತ ಅವರೀರ್ವರನ್ನು ಕರೆದುಕೊಂಡು ಒಳಗೆ ನಡೆದರು.

"ಬಂದರೆಂದು ಕಾಣುತ್ತದೆ." ಎಂದು ಅರುಣಾ ಹೊರಗೆ ಬಂದಳು. ಅವಳ ಜೊತೆಯಲ್ಲೇ ಹೋಗಿ ನಿಲ್ಲಬೇಕು ಎಂದು ಕರುಣಳ ಹೃದಯ ಮಿಡಿಯಿತಾದರೂ ಅವಳು ಮಾಲತಿಯೊಂದಿಗೆ ಅಡುಗೆಮನೆಯನ್ನೇ ಸೇರಿದಳು.

ಬಂದ ಅತಿಥಿಗಳನ್ನು ಆದರದಿಂದ ಬರಮಾಡಿಕೊಳ್ಳುತ್ತ ಅರುಣಾ "ನಿಮಗೆ ಹೇಳಿಕಳುಹುವದನ್ನೇ ಎಲ್ಲಿ ಮರೆತಿದ್ದಾರೋ ಇವರು, ಎಂದುಕೊಂಡಿದ್ದೆ...." ಎಂದಳು.

"ಅವರು ಮರೆತರೂ ನಾನು ಮರೆಯಬೇಕಲ್ಲ? ಇನ್ನೂ ಹತ್ತು ನಿಮಿಷ ಮೊದಲಿಗೇ ಬಂದಿದ್ದೇನೆ." ಎನ್ನುತ್ತ ಮಾಧವ ಮುಂದೆ ಬಂದ.

"ನೀವು ಬರುತ್ತೀರೋ ಇಲ್ಲೋ ಎಂದುಕೊಂಡಿದ್ದೆ. ನೀವು ಬಂದುದು ಬಹಳ ಸಂತೋಷ" ಎಂದು ಸುಧಾಕರನನ್ನು ಸ್ವಾಗತಿಸಿದಳು ಅರುಣಾ.

ಗಂಡಸರು ಮೂವರೂ ಗಣಪತರಾಯರ ಕೋಣೆಯಲ್ಲಿ ಕುಳಿತರು.

ಅರುಣಾ ಮತ್ತೆ ಒಳಗೆ ನಡೆದಳು. ಅಂದಿನ ಪಂದ್ಯಾಟದ ರಸನಿಮಿಷಗಳನ್ನೆ ಮೆಲುಕುಹಾಕುತ್ತ ಅವರು ಕುಳಿತರು. ಮಾಧವ ಆ ಮನೆಗೆ ಕಾಲಿಡದೆ ಬಹಳ ದಿನಗಳಾಗಿದ್ದವು. ಮತ್ತೆ ತನ್ನ ಹಳೆಯ ಪರಿಚಿತ ಮನೆಯನ್ನು ಕಂಡು ಮಾಧವ ನಿಗೆ ತನ್ನ ಹಿಂದಿನ ದಿನಗಳು ನೆನಪಾದವು. ಕಾಲೇಜು, ಶಿಕ್ಷಣ, ರಾಜಕಾರಣ, ಹೀಗೆ ಹಲವಾರು ವಿಷಯಗಳು ಅವರ ಹರಟೆಯಲ್ಲಿ ಹಾಯ್ದು ಹೋದವು.

ಮೊದಲ ಪರಿಚಯದ ಸಂಕೋಚ ಸುಧಾಕರನಿಗೆ ಈಗ ಇರಲಿಲ್ಲ. ಚಿಕ್ಕ ಹೂದೋಟ, ಅಚ್ಚುಕಟ್ಟಾದ ಮನೆ, ಆ ಅಲಂಕಾರ, ವ್ಯವಸ್ಥೆಯನ್ನು ಕಂಡು ಸುಧಾಕರ ಗಣಪತರಾಯರ ರುಚಿ, ರಸಿಕತೆಗಳನ್ನು ಮೆಚ್ಚಿದ.

"ಅರುಣಾ, ಇನ್ನು ಬರೋಣವೇ ?" ಎಂದು ಗಣಪತರಾಯರು ಒಳಗಿದ್ದ ಹೆಂಡತಿಯನ್ನು ಕೇಳಿದರು.

ಅರುಣಾ ಬಾಗಿಲ ಬಳಿ ಬಂದು, "ಸಿದ್ಧವಾಗಿದೆ ಏಳಿರಿ." ಎಂದು ತಿಳಿಸಿದಳು.

ಮೂವರೂ ಕಾಲು ತೊಳೆದುಕೊಂಡು ಅಡುಗೆಯ ಮನೆಗೆ ಬಂದರು. ಮೊದಲಿಗೆ ಅವರಿಬ್ಬರನ್ನು ಕೂಡಿಸಿ, ಮಾಧವನ ಬಳಿಯಲ್ಲಿ ತಾವೂ ಕುಳಿತರು. ಎದುರು ಸಾಲಿನಲ್ಲಿ ಮೂರು ಮಣೆಗಳಿದ್ದವು. ನಡುಮನೆಗೆ ಆಗಲೇ ನುಸುಳಿದ ಕರುಣಳನ್ನು ಕರೆಯುತ್ತ "ನೀವೂ ಬಂದುಬಿಡಿರಿ ಕರುಣಾ, ಮಾಲತೀ." ಎಂದು ಅರುಣಾ ಕೂಗಿದಳು.

ಅವರಿಬ್ಬರೂ ಒಳ ಬಂದು ಸಂಕೋಚದಿಂದಲೇ ಕುಳಿತರು.

ಮಾಧವ ಮಾಲತಿಯತ್ತ ನೋಡಿ, ಸಹಜವಾಗಿ "ನೀವು ನಮ್ಮ ಕಾಲೇಜಿನಲ್ಲಿಲ್ಲವೇ ?" ಎಂದು ಪ್ರಶ್ನಿಸಿದ.

ಅವಳು ಅಹುದೆಂದು ಗೋಣು ಹಾಕಿದಳು. ಕರುಣಳಂತೂ ಮುಖವನ್ನು ಮೇಲಕ್ಕೆತ್ತಲಿಲ್ಲ.

"ಇಲ್ಲಿ ಅಪರಿಚಿತರಾರೂ ಇಲ್ಲ, ಸಂಕೋಚವೇಕೆ ಕರುಣಾ? ಹೀಗೆ ನೀನು ಹುದುಗಿಕೊಂಡರೆ ಹೇಗೆ?" ಎಂದು ಗಣಪತರಾಯರು ಕರುಣಳನ್ನು ಮಾತಿನಲ್ಲಿ ತೊಡಗಿಸಲೆತ್ನಿಸಿದರು.

ಸಹಜವಾದ ಲಜ್ಜೆ ಆವರಿಸಿತ್ತಾದರೂ, ಮಾಮಾನ ಕಡೆಗೆ ತುಸು ಕಣ್ಣೆತ್ತಿ ನೋಡಿದಳು. "ಹೀಗೆಲ್ಲ ನೀವು ಚೇಷ್ಟೆ ಮಾಡಬೇಡಿರಿ, ಮಾಮಾ." ಎಂದು ಬೇಡಿಕೊಳ್ಳುವಂತಿತ್ತು ಅವಳ ನೋಟ

ಮಾತು, ವಿನೋದ, ಹಾಸ್ಯ, ನಗೆಗಳಲ್ಲಿ ಸಮಯ ಕಳೆದುದು ಗೊತ್ತಾಗ ಲಿಲ್ಲ. ಕೆಳಗಿರಿಸಿದ ಉಪಹಾರದ ಪ್ಲೇಟುಗಳು ಬರಿದಾದರೂ ತಿಳಿಯಲಿಲ್ಲ. ಅಪ ರೂಪವಾಗಿ ಬಂದ ಸ್ನೇಹಿತರಿಗೆ ಆಗ್ರಹ ಮಾಡಿ ಹೊಟ್ಟೆ ಬಿರಿಯುವಂತೆ ಮಾಡಿ ದರು. ಸುಧಾಕರನಂತೂ ತೀರ ಹೊಸಬ. ಅಂದಮೇಲೆ ಆಗ್ರಹದ ಶಿಕ್ಷೆ ಆತ ನಿಗೇ ಹೆಚ್ಚಾಯ್ತು. ಆಗ್ರಹಕ್ಕೆ ಕಟ್ಟುಬಿದ್ದು ಒಲ್ಲದೆ ತಿನ್ನುತ್ತಿರುವ ಸುಧಾಕರನ ಹೇಳಲಾರದ ಸಂಕಟವನ್ನು ಕಂಡು ಕರುಣಾ ಮನದಲ್ಲಿಯೇ ನಕ್ಕು "ಪಾಪ!" ಎಂದುಕೊಂಡಳು.

ಉಪಹಾರ ಮುಗಿಸಿ ನಡುಮನೆಗೆ ಎಲ್ಲರೂ ಬಂದರು.

ಒಮ್ಮೆಲೇ ಏನೋ ನೆನಪಾಯ್ತು ಅರುಣಳಿಗೆ. "ಓ ! ಸುರೇಶನಿಗೆ ಬರಲು ಹೇಳಿದ್ದೆ. ನೆನಪೇ ಆಗಲಿಲ್ಲ ಆತನದು." ಎಂದು ಮರುಗಿದಳು.

"ನಾನು ಬರುವಾಗ ಮನೆಯಲ್ಲಿರಲಿಲ್ಲ ಆತ." ಮಾಲತಿ ಹೇಳಿದಳು.

"ಬೇಗನೆ ಬರಲು ನಾನು ಹೇಳಿದ್ದೆ." ಎನ್ನುತ್ತ ಅರುಣಾ ಹೊರಗೇ ನಡೆ ದಳು.

ಬೀದಿಯಲ್ಲಿ ಮಂಕುನಾಯಿಯೊಂದರ ಬಾಲವನ್ನು ಎಳೆಯುತ್ತ, ಅದು ಅಸಹಾಯವಾಗಿ ಕಿರುಚುತ್ತಿದ್ದುದನ್ನು ಕಂಡು ನಗುತ್ತ ಬರುತ್ತಿದ್ದ ಸುರೇಶನನ್ನು ಕಂಡು ಅರುಣಳಿಗೆ ನಗೆ ಬಂದಿತು. "ಏನು ಉಡಾಳ ಹುಡುಗ ಇದು!" ಎಂದಳು.

ಅರುಣಳನ್ನು ನೋಡಿದೊಡನೆ ಅವನಿಗೆ ನೆನಪಾಯ್ತು. ಓಡುತ್ತ ಬಂದು. "ಅಕ್ಕಾ, ಮರೆತೇಬಿಟ್ಟಿದ್ದೆ. ಇವತ್ತು ಕ್ರಿಕೆಟ್ ಮ್ಯಾಚ್ ಇತ್ತು. ಹೋಗಿದ್ದೆ." ಎನ್ನುತ್ತ ಹರಹಿದ ತಲೆಗೂದಲಲ್ಲಿ ಬೆರಳನ್ನಾಡಿಸಹತ್ತಿದ.

ಮಗುವನ್ನು ಸಂತೈಸುವ ಮಮತೆಯ ಧ್ವನಿಯಲ್ಲಿ "ನಾನೂ ಮರೆತೇ ಬಿಟ್ಟಿದ್ದೆನಪ್ಪ. ಒಳಗೆ ನಡೆ ಬೇಗ ಆ ನಾಯಿ ಬಿಟ್ಟು." ಎಂದು ಕರೆದುಕೊಂಡು ಬಂದಳು.

ಅಡುಗೆಮನೆಗೆ ಕರೆದೊಯ್ದು, ಉಪಹಾರ ಕೊಟ್ಟಳು. ಆತನೆದುರಿಗೆ ಕುಳಿತುಕೊಂಡಳು. ಆಡಿ ದಣಿದು ಬಂದಿದ್ದ. ಹಸಿವೆಯಾಗಿತ್ತು. ಗಡಬಡಿಸಿ ತಿನ್ನುತ್ತಿದ್ದ. ಮಧ್ಯೆ, ಆಟದಲ್ಲಿಯ ತನ್ನ ಪರಾಕ್ರಮವನ್ನೂ ಅರುಣಳಿಗೆ ಹೇಳ ಬೇಕೆಂಬ ಕುತೂಹಲ ಬೇರೆ !

ಸುರೇಶ ಮಾಲತಿಯ ಅಕ್ಕನ ಮಗ. ಹತ್ತು-ಹನ್ನೆರಡು ವರುಷದ 'ಉತಾ

ವಳಿ'ಯ ಹುಡುಗ. ಆಟವೆಂದರೆ ತೀರಿತು ! ಅಷ್ಟೇ ಆತನ ಆಸಕ್ತಿ ತಬಲ ನುಡಿಸುವದರಲ್ಲಿ. ಬಾಲ್ಯದಿಂದಲೂ ಮೂಡಿದ ಆ ಅಭಿರುಚಿಗೆ ತಕ್ಕ ಪೋಷಣೆ ದೊರಕಿತ್ತು. ತಾಳ ಲಯಗಳ ಜ್ಞಾನ ಆತನಿಗೆ ಚೆನ್ನಾಗಿತ್ತು. ಬಿಡುವು ದೊರೆತಾಗೆಲ್ಲ ಆತ ಕರುಣಳ ಹಾಡಿಗೆ ಜೊತೆಯಾಗಿ ತಬಲ ಬಾರಿಸುತ್ತಿದ್ದ. ಅದಕ್ಕೇ ಕರುಣ ಸುರೇಶರಲ್ಲಿ ಆತ್ಮೀಯತೆಯಿತ್ತು. ಒಡಹುಟ್ಟಿದ ತಮ್ಮನಂತೆ ಕಾಣುತ್ತಿದ್ದಳು ಆತನನ್ನು.

"ಕರುಣಾ, ತಂಬೂರಿ ತೊಗೋಳಲಾ ಇನ್ನು." ಎಂದು ಗಣಪತರಾಯರು ಸೂಚಿಸಿದರು.

ಫಲಾಹಾರ ಮುಗಿಸಿದ ಸುರೇಶ ಓಡಿ ಹೋಗಿ ಕರುಣಳ ತಂಬೂರಿಯನ್ನು ತೆಗೆದುಕೊಂಡು ಬಂದ. ಅವಳು ಅದರ ಹೊದಿಕೆಯನ್ನು ತೆರೆಯುವದರಲ್ಲಿಯೇ ತಾನು ತಬಲ ತೆಗೆದಿರಿಸಿದ.

ದಿಂಬುಗಳಿಗೆ ಒರಗಿ ಮಾಧವ, ಸುಧಾಕರ, ಗಣಪತರಾಯರು ಕುಳಿತಿದ್ದರು. ಅವರಿಗೆ ಸಮ್ಮುಖಳಾಗಿ ತುಸು ಅಂತರದ ಮೇಲೆ ಕರುಣಾ ರಂಗದ ಮಧ್ಯದಲ್ಲಿ ಕುಳಿತಳು. ಅವಳ ಬದಿಯಲ್ಲೆ ಸುರೇಶ, ಎಡಗಡೆಗೆ ಅರುಣಾ, ಮಾಲತಿ ಕುಳಿತಿದ್ದರು.

ಶ್ರುತಿಗೊಳಿಸಿದ ತಂಬೂರಿಯನ್ನು ಒಂದು ಬಾರಿ ಮೀಟಿದಳು. ತಂತಿಗಿಂತ ಅವಳ ಬೆರಳು ಹೆಚ್ಚು ಕಂಪಿಸಿತು. ಶ್ರುತಿ ಸರಿಯಾಗಿತ್ತು. ಸುರೇಶ ತಬಲವನ್ನು ಬಡಿದು ಬಡಿದು, ಅದನ್ನು ಸಮಶ್ರುತಿಯಲ್ಲಿ ತರಹತ್ತಿದ. ಅವನ ಚಿಕ್ಕ ಕೈಯ ಹೊಡೆತಕ್ಕೆ ತಬಲ ಬಾಗಲಿಲ್ಲ. ತುಂಟ ಮಗುವನ್ನು ದಂಡಿಸುವಂತೆ 'ಕಟಕಟ' ಹೊಡೆದು ಅದನ್ನು ದಾರಿಗೆ ತಂದ.

ಒಂದು ಬಾರಿ ಕರುಣಾ ಅಕ್ಕನ ಕಡೆಗೆ ನೋಡಿದಳು. ಅರುಣಾ "ಹೂಂ, ಪ್ರಾರಂಭಿಸು." ಎಂದು ಉತ್ಸಾಹ ತುಂಬಿದಳು.

ಕರುಣಳ ಹೃದಯದಲ್ಲಿ ನೂರಾರು ಭಾವನೆಗಳು ಮಿಡಿದೆದ್ದವು. ಆ ತಂಬೂರಿಯ ನಾದಲೋಕದಲ್ಲಿ ಅವಳಿಗೆ ಹಲವಾರು ರಾಗಗಳ ಛಾಯೆ ಸುಳಿಯಿತು. ಯಾವುದನ್ನು ಆಯ್ದುಕೊಳ್ಳಬೇಕೆಂಬುದೇ ತಿಳಿಯದಾಯ್ತು. ಎಲ್ಲವೂ ಆಕರ್ಷಕ, ಸುಂದರ ! ಒಂದೆರಡು ನಿಮಿಷ ಬರಿ ತಂತಿಯನ್ನು ಮೀಟಿದಳು. ತಂಬೂರಿಯ ನಾದಲಹರಿಯಲ್ಲಿ ಸಂಪೂರ್ಣವಾಗಿ ತೇಲಿದಳು. ಹೃದಯವೆಲ್ಲ ನಾದ-

ಕಂಪನಕ್ಕೀಡಾಯಿತು.

ಯಾವ ರಾಗವನ್ನು ಆರಿಸಬೇಕೆಂಬುದೇ ತಿಳಿಯದಾಯ್ತು. ತಬಲದ ಮೇಲೆ ಬೆರಳಾಡಿಸುತ್ತಿದ್ದ ಸುರೇಶ, ಅವಳ ಕಿವಿಯಲ್ಲಿ "ಅಕ್ಕಾ, ಜಯಜಯ ವಂತಿ ಪ್ರಾರಂಭಿಸು" ಎಂದು ಉಸುರಿದ.

ಒಂದು ಕ್ಷಣ ಎಲ್ಲ ಶಾಂತ. ಕರುಣಾ ಭಾವದುಂಬಿ ಕಣ್ಣೆವೆ ಮುಚ್ಚಿದಳು. ನಾದದೊಡಲೊಳಗಿಂದ ಸ್ವರವನ್ನೆತ್ತಿದಳು. ಎತ್ತಿದ ಸ್ವರ ಹೂ ಅರಳಿದಂತೆ. ಅಷ್ಟು ನಯ. ರಾಗವಿಸ್ತಾರ ಮಾಡುತ್ತ ಒಂದೊಂದೇ ಸ್ವರಗಳನ್ನು ಮೇಳವಿಸಿದಳು. ಅವಳ ಹದಗೊಂಡ ಕಂಠ, ಆದರಲ್ಲಿಯ ಮಾಧುರ್ಯ, ಮನ ಸೆಳೆದುವು. ಸ್ವರಗುಂಫನದಲ್ಲಿ ಅವಳು ತೋರುವ ಕೌಶಲ್ಯ ಮೆಚ್ಚುವಂತಹದಿತ್ತು. ರಸಿಕಳಾದ ಮಾಲೆಗಾರ್ತಿಯೋರ್ವಳು ವಿಧವಿಧ ಬಣ್ಣ, ಕಂಪುಗಳುಳ್ಳ ಹೂಗಳನ್ನು ಆಯ್ದು ಆಯ್ದು ಕೌಶಲ್ಯಪೂರ್ಣವಾಗಿ ಹೆಣೆಯುವ ಮಾಲೆಯಂತೆ ಒಂದೊಂದು ಸ್ವರಮಾಲಿಕೆಯನ್ನು ರಚಿಸುತ್ತಿದ್ದಳು. ಮಿಡಿದ ಒಂದು ಸ್ವರ, ಹತ್ತಾರು ಬಗೆ ಬಗೆಯ ಸ್ವರರಚನೆಗಳಿಗೆ ಸ್ಫೂರ್ತಿ ಕೊಡುತ್ತಿತ್ತು. ಅವಳ ಕಲ್ಪನೆಯಲ್ಲಿ ಬಿಂಬಿಸಿದುದೆಲ್ಲ ಕೊರಳಲ್ಲಿ ನುಡಿಯುತ್ತಿತ್ತು. ಅದು ಹೊರಬರುವಾಗ ಬರಿ ಸ್ವರವಲ್ಲ, ಭಾವದ ಜೀವಕಳೆಯಿಂದ ನರ್ತಿಸುವ ಸ್ವರಮೇಳವಾಗಿ ಬರುತ್ತಿತ್ತು.

ಈ ಮೃದು ಸ್ವರಗಳ ಸಂಮೋಹದಲ್ಲಿ ಕುಳಿತವರೆಲ್ಲ ದೇಹಭಾನವನ್ನೇ ಮರೆತರು. ಒಂದು ಕ್ಷಣ ಕರುಣಾ ಅವರನ್ನೆಲ್ಲ ಗಂಧರ್ವಲೋಕಕ್ಕೆ ಕರೆದೊಯ್ದಳು. ಸುರೇಶನಂತೂ ತಾಳ-ಲಯಗಳಲ್ಲಿ ಮುಳುಗಿದ್ದ. ಅವಳ ಹಾಡಿನ ಗತಿಗೆ, ಚಿತ್ರವಿಚಿತ್ರ ಮಾರ್ಗವನ್ನು ತೋರುತ್ತಿದ್ದ. ಕರುಣಳಂತೂ ಮೈಮರೆತು ಬಿಟ್ಟಿದ್ದಳು.

ಅವಳ ಮನದಲ್ಲಿ ಉಕ್ಕೇರಿ ಬರುವ ವರ್ಣವರ್ಣದ ಭಾವಗಳೆಲ್ಲ ಕರಗಿ ಕರಗಿ, ಮತ್ತೆ ಹೊಸ ಹೊಸ ರೂಪ ತಾಳಿ ನಿಲ್ಲುತ್ತಿದ್ದವು. ಅವಳ ನಾದಗೊಂಡ ಭಾವಗಳು ಯಾವುದೋ ಅಸ್ಪಷ್ಟ ಚಿತ್ರವನ್ನು ಮೂಡಿಸಿದವು.

ಆ ಹಾಡು ಮುಗಿದಾಗ ಅರುಣಳ ಕಂಗಳಲ್ಲಿ ಹರುಷದ ನೀರು ತುಂಬಿತ್ತು....ಎಲ್ಲರೂ ಚಿತ್ರದಲ್ಲಿಯ ಗೊಂಬೆಯಂತೆ ಕುಳಿತಿದ್ದರು. ಸುಧಾಕರ ರಂಗನ ಮುರಲಿಯ ಧ್ವನಿಗೆ ಮರುಳುಗೊಂಡ ಹಸುವಿನಂತಾಗಿದ್ದ.

ತಂಬೂರಿ ಹಾಗೆಯೇ ಮೀಟುತ್ತಿತ್ತು.

"ಕರುಣಾ, ಒಂದು ಭಾವಗೀತ ಹೇಳು." ಗಣಗತರಾಯರು ಸೂಚಿಸಿದರು. ಮಿಶ್ರಖಮಾಜದಲ್ಲಿ ಭಾವಗೀತ ಜೀವಕಳೆಯನ್ನು ಪಡೆಯಹತ್ತಿತು.

ಚಂದ್ರಬಿಂಬದಿಂದ ಸುರಿದ ಜೇನು-ಹಾಡು ಇಳೆಗೆ ಇಳಿದು
ನಾದಗೊಂಡ ವಿಶ್ವವೆಲ್ಲ ವೀಣೆಯಾಗಿ ನುಡಿಯಿತು.
ಕಾಣದ ಕರಸ್ಪರ್ಶದಿಂದ ಸ್ವರಕೋಮಲದುಸಿರಿನಿಂದ
ಸ್ವರತರಂಗ ರಂಗ–ರಂಗ ಮನದ ದಡದಿ ಉಕ್ಕಿತು.

ಕರುಣಳ ಅಂತಃಕರಣವನ್ನೇ ಚಿಮ್ಮಿ ರಾಗವಾಗಿ ರಂಜಿಸಿದ್ದವು ಅವಳು ನುಡಿಸಿದ ಈ ಸಾಲುಗಳು. ಅವಳ ಭಾವತನ್ಮಯತೆಯನ್ನು ಕಂಡು ಮಾಧವ ಮುಗ್ಧನಾಗಿದ್ದ. ಮಾಲತಿ ಸ್ವರದ ಅಲೆಯಗುಂಟ ತೇಲುತ್ತಿದ್ದಳು.

ಮಧ್ಯೆ ಕರುಣಾ ಮೆಲ್ಲಗೆ ಕಣ್ದೆರೆದಳು. ಒಂದು ಕ್ಷಣ ಸುಧಾಕರನತ್ತ ನಿಮೀಲಿತನಯನೆಯಾಗಿ ನೋಡಿದಳು. ಮೌನವಾಗಿದ್ದ ವೀಣೆಯನ್ನು ಮೀಟಿದಂತಾಯ್ತು ಅವಳ ಮನಸ್ಸು. ಕೈಯಲ್ಲಿಯ ತಂಬೂರಿಯ ಮಿಡಿತಕ್ಕಿಂತ ಆ ವೀಣೆಯ ಮಿಡಿತ ತೀವ್ರವಾಯ್ತು. ಅದು ಅಸ್ಫುಟ ಸ್ಪಂದನೀಯವಾಯ್ತು.... ಮತ್ತೆ ನಾದಪ್ರಪಂಚವನ್ನು ಸೇರಿದಳು.

ತನ್ನ ತಾನು ಮರೆತು ನಿಂತ ದಿವ್ಯ-ಸ್ವಪ್ನ ಸಮಯದಲ್ಲಿ
ದಿವ್ಯ–ಧವಳ ಪರಮಭಾವ ಮನದಿ ಬಂದು ಹುದುಗಿತು
ನೇಹ–ನಲುಮೆ ಒಲುಮೆಗೊಂಡು ತಿಳಿಜಲವನೆ ಸುರಿಸಿದಾಗ
ಭಾವ–ಲತೆಯು ಕೊನರಿ ಚಿಗುರಿ ಮನವ ತುಂಬಿ ಹಬ್ಬಿತು.

ಈ ಸಾಲುಗಳನ್ನು ಅನ್ನುವಾಗ ಕರುಣಳ ಹೃದಯ ತುಂಬಿ ಸೂಸಿತು. ತನ್ನ ಮನದ ಚಿತ್ರವನ್ನೆ ಕೊಡುತ್ತಿರುವಳೊ ಎಂದೆನಿಸಿತು.

ಮಿಡಿಹ ಸ್ವರದ ಸೋಂಕಿನಿಂದ ಯಾವ ಭಾವ ಯಾವ ಗಾನ
ಹೃದಯವೀಣೆ ನುಡಿಸಿತೆಂದು ಮನವು ಮನವ ಕೇಳಿತು!

ಕರುಣಳ ಹೃದಯ ಮಿಡಿದ ಸ್ವರ, ಅನಿರುದ್ಧ-ಸ್ವಪ್ನ-ಭಾವದ ಸಂಕೇತವಾಗಿತ್ತು.

"ಮನವು ಮನವ ಕೇಳಿತು...."

ನೂರಾರು ಬಾರಿ ಆ ಕೊನೆಯ ಸಾಲು ಕರುಣಳ ಮನದಲ್ಲಿ ಸುಳಿದು ಅವಳನ್ನು ನೋಯಿಸಿತು. ಅವಳರಿಯದ ಯಾಚನೆ, ಕೊರಗು, ವಿರಹ, ಅವಳ

ಮನವನ್ನು ಹಿಂಡಿದವು.

ಅದಾವುದೂ ಸ್ಪಷ್ಟವಾಗಿ ಅವಳಿಗೆ ಹೊಳೆಯಲಿಲ್ಲ. ತನ್ನನ್ನು ಯಾರೋ ಮೌನವಾಗಿಯೇ ಕೆರಳಿಸುತ್ತಿದ್ದಾರೆಂಬ ಅನುಭವ ಮಾತ್ರ ಅವಳಿಗಾಯ್ತು.

ಹಾಡು ಮುಗಿಯಿತು. ತೂಗುತ್ತಿದ್ದ ತಲೆ ಹಾಗೆಯೇ ತೂಗುತ್ತಿದ್ದವು, ಕೆಲ ನಿಮಿಷ. ಅಂದಿನ ಅವಳ ಹಾಡು ಅನುಪಮೇಯವಾಗಿತ್ತು. ಅದು ಬರಿ ಹಾಡು ಆಗಿರಲಿಲ್ಲ. ಅದು ಅವಳ ಹೃದಯದ ಸೂಕ್ಷ್ಮಭಾಗವನ್ನು ಕೆಣಕಿ ಹೊರ ಬಂದ ಹಾಡು !

“ಇದು ಕೇವಲ ಸಂಗೀತವಲ್ಲ; ಮನವನ್ನು ಕಲಕುವ ಯಕ್ಷಿಣಿವಿದ್ಯೆ!” ಎಂದು ಸುಧಾಕರನ ಬಾಯಿಂದ ಉದ್ಗಾರ ಹೊರಬಂದಿತು.

ಎಲ್ಲರೂ ಕರುಣಳ ಸಂಗೀತವನ್ನು ಮೆಚ್ಚಿದರು. ಅದರ ಸವಿಯನ್ನು ಉಂಡಿದ್ದರೂ ಹೇಳಲು ಬಾರದಂತಾಗಿತ್ತು. ಅರಿಯದ ಸಿಹಿ ಪದಾರ್ಥದ ರುಚಿಗೆ ಮಾರುಹೋದ ಚಿಕ್ಕ ಮಗು ಆ ಪದಾರ್ಥವನ್ನು ಗುರುತಿಸದಂತೆ, ಆ ಶ್ರೋತೃ ಗಳ ಸ್ಥಿತಿಯಾಗಿತ್ತು.

ಹೊತ್ತು ಎಂಟು ಗಂಟೆಗೆ ಸಮೀಪಿಸಿತ್ತು.

“ಕರುಣಾ, ನೀವು ನಮಗಿಂದು ರಸದೂಟವನ್ನೇ ಕರುಣಿಸಿದಿರಿ.” ಎಂದು ಮಾಧವ ಬಡ ಮಾತುಗಳಿಂದ ಅಭಿನಂದಿಸಿದ.

ಕರುಣಳ ಹೃದಯ ತುಂಬಿ ನಿಂತಿತ್ತು. ಅವನತಮುಖಿಯಾಗಿ, ಮೌನ ವಾಗಿಯೇ ಕೃತಜ್ಞತೆಯನ್ನರ್ಪಿಸಿದಳು. ಗೇಟಿನವರೆಗೆ ಹೋಗಿ ಸ್ನೇಹಿತರನ್ನು ಬೀಳ್ಕೊಟ್ಟರು ಗಣಪತರಾಯರು ಮತ್ತು ಕರುಣಾ. ಕರುಣಾ ಬಾಗಿಲಲ್ಲಿಯೇ ನಿಂತಿದ್ದಳು. ಸುರೇಶನ ನಾದದ ಗುಂಗು ಇನ್ನೂ ಇಳಿದಿರಲಿಲ್ಲ. ಆತ ಇನ್ನೂ ತಬಲ ಬಾರಿಸುತ್ತಲೇ ಇದ್ದ.

ಹೋಗುವಾಗ ಗಣಪತರಾಯರು “ಯಾವಾಗಲಾದರೂ ಬೇಸರವೆನಿಸಿದರೆ ನಮ್ಮ ಮನೆಗೆ ಬರಲು ಸಂಕೋಚಮಾಡಿಕೊಳ್ಳಬೇಡಿರಿ.” ಎಂದು ಸ್ನೇಹಿತರಿಗೆ ಹೇಳಿದರು.

“ಸಂಗೀತದ ಹುಚ್ಚು ಹಿಡಿಸಿದೆ ಈ ಮನೆ. ಇನ್ನು ನೀವು ಬೇಸರಿಯುವ ವರೆಗೂ ಬರುತ್ತೇನೆ.” ಎಂದು ಮಾಧವ ಹೇಳಿದ.

ಹೃತ್ಪೂರ್ವಕವಾಗಿ ಸುಧಾಕರ ಅಭಿವಂದಿಸಿದ. ನಿಷ್ಕಲಂಕವಾದ ಆತನ

ಮೃದುಹಾಸ, ಆ ಚೆಲುವು....

"ಮನವು ಮನವ ಕೇಳಿತು" ಕರುಣಳು ಮನದಲ್ಲಿಯೇ ಹಾಡಿಕೊಂಡಳು.

ತಾನೂ ಗೇಟಿನವರೆಗೆ ಹೋಗಬೇಕೆಂದಳು. ಅವಳು ಮುಂದೆ ಅಡಿಯಿಡು. ವಾಗಲೆ ಅವರು ಮುಂದೆ ಸಾಗಿದರು. ಅಕ್ಕನ ಜೊತೆಗೇ ಮನೆಯೊಳಗೆ ಬಂದಳು.

"ಮನವು ಮನವ ಕೇಳಿತು." ಇನ್ನೂ ಅದರ ಗುಂಜಾರವವಿತ್ತು.

"ಏನೆಂದು ಕೇಳಿತು ? ಯಾರನ್ನು ಕೇಳಿತು ?" ತನ್ನನ್ನು ತಾನೆ ಕೇಳಿ ಕೊಂಡಳು ಕರುಣಾ.

* * *

ಅಂದು ಬಹಳ ಆಯಾಸವಾದುದರಿಂದ ಅರುಣಾ ಬೇಗನೆ ಮಲಗಿ ಕೊಂಡಳು. ಗಣಪತರಾಯರಿಗೂ ಮಧ್ಯಾಹ್ನ ನಿದ್ದೆಯಾಗಿರಲಿಲ್ಲ. ಅವರು ಇನ್ನೂ ಮಲಗಿರಲಿಲ್ಲ. ಅರುಣಾ ಆಗಲೆ ನಿದ್ದೆಯಲ್ಲಿ ಮುಳುಗಿದ್ದಳು.

ಗಣಪತರಾಯರು ಒಂದು ಬಾರಿ ಹೃದಯಾರ್ದ್ರಭಾವದಿಂದ ಅರುಣಳ ಮುಖವನ್ನು ನೋಡಿದರು. ತಮ್ಮ ಬದುಕಿನ ಸಾರ್ಥಕತೆಯೇ ಅರುಣಳ ಮುಖ ದಲ್ಲಿ ಮೂಡಿ ಬಂದಂತೆ ಕಂಡಿತು.

ಅರುಣಳಿಗೆ ಮುಖದ ವರೆಗೂ ಹೊದಿಕೆಯನ್ನು ಹೊದಿಸಿದರು. ಅವಳ ಬದಿಗೆ ಹೊಂದಿಕೊಂಡು ಮಲಗಿದರು. ಪ್ರೀತಿಯಿಂದ ಅವಳ ತಲೆಗೂದಲನ್ನು ನೇವರಿಸುತ್ತ ಬಹು ಹಗುರಾಗಿ ಕೆನ್ನೆಯನ್ನು ಮುದ್ದಿಸಿದರು.

"ಜನ್ಮಾಂತರದಲ್ಲಿ ನೀನೇ ನನ್ನ ಕೈಹಿಡಿದು ನಡೆಸು" ಎಂಬ ಒಲುಮೆಯ ಉದಾತ್ತಭಾವನೆ ಅವರ ಮನವನ್ನು ತುಂಬಿತು. ಮೃದುವಾಗಿ ಅರುಣಳನ್ನು ತೋಳ ತೆಕ್ಕೆಯಲ್ಲಿ ಹುದುಗಿರಿಸಿಕೊಂಡರು. ಆಗ ಅವರ ಆತ್ಮ ಪಡೆದ ಸಂತೋಷ ಎಲ್ಲ ವಿವಾಹಿತರಿಗೂ ದೊರೆಯುವದು ದುರ್ಲಭ !

* * *

ಕರುಣಳಿನ್ನೂ ಎಚ್ಚತ್ತಿದ್ದಳು. ಕೈಯ್ಯಲ್ಲಿ ಮತ್ತೆ ತಂಬೂರಿಯನ್ನು ತೆಗೆದುಕೊಂಡಳು. ಮೆಲ್ಲಗೆ ಹೊರಟ ಅದರ ಧ್ವನಿ ಮೌನವನ್ನು ಮಾತನಾಡಿಸು ವಂತಿತ್ತು. ಎದ್ದು ಬಾಗಿಲನ್ನು ಇಕ್ಕಿ ದೀಪವಾರಿಸಿ ಬಂದು ಕುಳಿತಳು. ತಂಬೂ ರಿಯ ಸ್ವರದ ಮೃದು ಸ್ಪರ್ಶ ನಲ್ಲನ ಸೋಕಿನಂತಿತ್ತು.

ನುಡಿಯುತ್ತಿರುವ ಪಂಚಮ ಷಡ್ಜಗಳು, ಗಂಭೀರವಾಗಿ ಮಿಡಿಯುವ

ಮಂದ್ರ ಷಡ್ಜದಲ್ಲಿ ಕರಗಿ ಲೀನವಾಗುತ್ತಿದ್ದವು. ಆ ಮಂದ್ರ ಷಡ್ಜದ ಧ್ವನಿ ಯೊಂದು ಸ್ಥಾಯಿಯಾಗಿ ಕಿವಿಯನ್ನು ತುಂಬುತ್ತಿತ್ತು. ಉಳಿದ ತಂತಿಗಳನ್ನು ಮೀಟುವಾಗ, ಪಂಚಮದ ಸಮೀಪದ ಮಧ್ಯಮ, ಗಾಂಧಾರ, ಷಡ್ಜದ ನೆರೆಯಲ್ಲಿ ಇರುವ ರಿಷಭ ನಿಷಾದ ಸ್ವರಗಳ ಛಾಯೆ ತೇಲಿ ತೇಲಿ ಬರುತ್ತಿತ್ತು.

ಮಿಡಿವ ಸ್ವರಗಳು ಎರಡೇ ಆದರೂ ಅವುಗಳ ಆಂದೋಲನದಲ್ಲಿ ಸಪ್ತಸ್ವರ ಗಳ ಛಾಯೆ ಸುಳಿಯುತ್ತಿತ್ತು.

ಕರುಣಳ ಹೃದಯದಲ್ಲಿ ಸ್ಥಾಯಿಯಾದ ಭಾವವೊಂದರ ಒಡಲೊಳಗಿಂದ ಹಲವಾರು ಪೋಷಕಭಾವಗಳು ಸಂಚರಿಸಿ ವಿಚಿತ್ರ ರಸಾನುಭೂತಿಯನ್ನು ಅವ ಳಿಗೆ ಕೊಟ್ಟವು.

ಮಿಡಿಯುವ ತಂಬೂರಿಯ ಸ್ವರ ಎರಡೇ. ಗಾಯಕನ ಹೃದಯದಲ್ಲಿ ಅದು ಅನೇಕ ರಾಗಗಳನ್ನು ಉದ್ದೀಪನಗೊಳಿಸುವದು. ಯಾವುದಾದರೊಂದು ರಾಗದ ಎಳೆಯನ್ನು ಆತ ಎತ್ತಿಕೊಂಡರೆ ಮುಂದೆ ಆ ರಾಗದಲ್ಲಿ ವಿವಿಧ ಸ್ವರ ವಿಸ್ತಾರ, ಜೋಡಣೆ, ಸ್ವರಮಾಲಿಕೆಗಳ ಕಲ್ಪನೆಗಳು ಒಂದರ ಹಿಂದೊಂದು ಚಿಮ್ಮಿ ಬರುತ್ತವೆ ತಾವಾಗಿಯೇ. ಆಗ ಗಾಯಕನ ಕಲ್ಪನೆ ಜೀವ ಪಡೆಯುತ್ತದೆ; ಸ್ವರ ತುಂಬುತ್ತದೆ. ಆಗ ರಾಗದ ಸ್ಪಷ್ಟವಾದ ಪೂರ್ಣವಾದ ಸುಂದರ ಚಿತ್ರ ನಿರ್ಮಾಣ ವಾಗಿ ನಿಲ್ಲುವದು.

ಕರುಣಳನ್ನು ಮಿಡಿದ ಭಾವನೆಗಳ ಸ್ಥಿತಿಯೂ ಹೀಗೆಯೇ ಇತ್ತು. ಸಹೃದ ಯತೆ ಸ್ನೇಹ ಭಾವಗಳ ಒಡಲೊಳಗಿಂದ ಮತ್ತೆ ಅನೇಕ ಭಾವಗಳು ಮೈತಾಳಿ ಬಂದವು. ಒಂದರಿಂದೊಂದು ಬೆಡಗನ್ನು ಪಡೆದವು. ಅವೆಲ್ಲ ಸ್ವರಮಾಲಿಕೆಯಂತೆ ಹೆಣೆದುಕೊಂಡು ನಿಂತವು. ಆ ಕ್ಷಣ ಹೃದಯದಲ್ಲಿ ಮೂಡಿದ ಭಾವಸಮೂಹ ವನ್ನು ಅವಳು ಗುರುತಿಸಲಾರದವಳಾದಳು.

ಪರಿಚಯ, ಆಕರ್ಷಣೆ, ಸ್ನೇಹ, ಪ್ರೀತಿ....ಮತ್ತೆ.... ? ಮನವನ್ನು ಮೀರಿ ನಿಂತ ಭಾವವದು.

ಅದು ಒಂದು ಭಾವನೆಯಲ್ಲ. ಭಾವನೆಗಳ ರಸಪಾಕ.

"ಇದು ಕೇವಲ ಸಂಗೀತವಲ್ಲ; ಮನವನ್ನು ಕಲಕುವ ಯಕ್ಷಿಣಿವಿದ್ಯೆ".... ಇದನ್ನು ನೆನೆದು ಕರುಣಳು ರೋಮಾಂಚಿತಳಾದಳು. ತನ್ನನ್ನು ಯಾರೋ ಕನಸಿ ನಲ್ಲಿ ಕರೆಯುತ್ತಿರುವಂತೆ ಭಾಸವಾಯಿತು.

.... "ನನ್ನ ಸಂಗೀತ ನಿಮ್ಮ ಮನವನ್ನು ಕಲಕಿದೆಯಲ್ಲವೇ ?"....

.... "ಆ ಕಲಕಿದ ಮನದಲ್ಲಿ........ ?"

.... "ಯಕ್ಷಿಣಿವಿದ್ಯೆ !"

.... "ನಾನು ಯಕ್ಷಿಣಿಯೇ ?"

.... "ನನ್ನ ಹೃದಯ ನಿಮ್ಮ ಕಿವಿಯಲ್ಲಿ ಉಸುರಿವೆಯೇ? ನನ್ನ ಹೃದಯ-ಭಾವನೆಗಳನ್ನು ಗುರುತಿಸಿದಿರಾ ?"

ಕರುಣಳ ಅಂಗಾಂಗವೆಲ್ಲ ಕಂಪಿಸಿತು.

ಅವಳಿನ್ನೂ ಎಚ್ಚತ್ತಿದ್ದಳು. ಅವಳ ಮನಬೆದುರು ನಡೆದ ದೃಶ್ಯದಲ್ಲಿ ಅವಳು ಮೈಮರೆತಿದ್ದಳು.

...."ಮನವ ಕಲಕುವ ಸಂಗೀತ...."

...."ಮನವು ಮನವ ಕೇಳಿತು...."

...."ಮನವು ಮನಕೆ ಹೇಳಿತು...."

...."ಏನು ಹೇಳಿತು ? "

ತಂಬೂರಿಯನ್ನು ಬದಿಗಿರಿಸಿ ಹಾಗೆಯೇ ಮಲಗಿದಳು. ಅಂದು ಅವಳು ಹೊಸ ಅನುಭವ ಪಡೆದಿದ್ದಳು. ತನ್ನನ್ನು ಕರೆಯುತ್ತಿರುವವರನ್ನು ಒಂದು ಬಾರಿ ನಿಚ್ಚಳವಾಗಿ ನೋಡಿದಳು,

ಕ ನ ಸಿ ನ ಲ್ಲಿ !

## ಪ್ರಕರಣ : ೪

ಇಬ್ಬರೂ ಹಾಸ್ಟೆಲಿಗೆ ಬಂದಾಗ ಉಳಿದವರೆಲ್ಲ ಊಟಕ್ಕೆ ಹೋಗಿದ್ದರು. ಕೇಳಿದ ಸಂಗೀತವನ್ನು ಮತೆ ಮತ್ತೆ ಆಸ್ವಾದಿಸುತ್ತಿದ್ದರು. ಹೆಚ್ಚು ಮಾತನಾಡಿದರೆ ರಸಭಂಗವಾದೀತೆಂದು ಇಬ್ಬರೂ ತಮ್ಮ ತಮ್ಮ ಕೋಣೆಗಳಿಗೆ ಹೋಗಿ ಮಲಗಿಕೊಂಡರು.

ಸುಧಾಕರನಿಗೆ ಬದುಕಿನ ಎಲ್ಲ ಕಹಿ, ದುಃಖ, ಕಷ್ಟ, ನೋವುಗಳನ್ನು ತೊಡೆದು ಹಾಕಿ ಮನಸ್ಸಿಗೆ ಅಲೌಕಿಕ ಶಾಂತಿ-ಸಮಾಧಾನಗಳನ್ನು ತಂದು ಕೊಟ್ಟಿತ್ತು ಕರುಣಳ ಸಂಗೀತ. ಅದಕ್ಕೇ ಆತ ನಿಶ್ಚಿಂತನಾಗಿ ಮಲಗಿಬಿಟ್ಟ

ಶಾಂತಿರಸದಲ್ಲಿ ಮಿಂದ ಆತ ಗಾಢವಾದ ನಿದ್ರೆಯಲ್ಲಿ ಮುಳುಗಿದ. ಯಾವ ಕನಸೂ ಸುಳಿಯಲಿಲ್ಲ; ಯಾವ ನಿದ್ರಾಭಂಗವೂ ಆಗಲಿಲ್ಲ.

ಬೆಳಿಗ್ಗೆ ಹರೀಶ ಎಬ್ಬಿಸಿದಾಗಲೆ ಸುಧಾಕರನಿಗೆ ಎಚ್ಚರ. ಆತ ಎದ್ದಾಗ ಎಂಟು ಗಂಟೆಯಾಗಿತ್ತು. "ನಿಮಗೊಂದು ಕಾಗದವಿದೆ ನೋಡಿರಿ." ಎಂದು ಹರೀಶ ಲಕೋಟೆಯನ್ನು ಆತನಿಗೆ ಕೊಟ್ಟ.

ತಂದೆಯ ಕಾಗದ. ವಿಶೇಷವೇನಿರಲಿಲ್ಲ. "ಅವಶ್ಯದ ಕೆಲಸವಿದೆ. ತೊಂದರೆಯಾಗದಂತಿದ್ದರೆ ಬೇಗನೆ ಬಂದುಬಿಡು" ಎಂದು ಬರೆದಿದ್ದರು.

ಅವರ ಸ್ವಭಾವವೇ ಹಾಗೆ. ಅವಶ್ಯದ ಕೆಲಸವಿದ್ದರೂ ಮಗನಿಗೆ ಯಾವ ತೊಂದರೆಯನ್ನೂ ಕೊಡಲು ಬಯಸುತ್ತಿರಲಿಲ್ಲ. ಅವಶ್ಯದ ಕೆಲಸವೆಂದ ಮೇಲೆ ಆ ದಿನವೇ ಮಧ್ಯಾಹ್ನ ಹೋಗಬೇಕೆಂದು ನಿರ್ಧರಿಸಿದ. ಮಾಧವನ ಕೋಣೆಗೆ ಹೋಗಿ ನೋಡಿದ. ಆತ ಎಲ್ಲೋ ಹೊರಗೆ ಹೋಗಿದ್ದ. ಕಾಲೇಜಿಗೆ ಹೋಗಲು ಮನಸ್ಸಾಗಲಿಲ್ಲ.

ಊಟ ಮಾಡಿ ಬಂದ ಹರೀಶನಿಗೆ "ನಾನು ಮಧ್ಯಾಹ್ನ ಊರಿಗೆ ಹೊರಡುತ್ತೇನೆ. ತಂದೆಯವರ ಕಾಗದ ಬಂದಿದೆ. ನೀವು ಮಾಧವನನ್ನು ಕಂಡು ದಯವಿಟ್ಟು ಹೇಳಬೇಕು" ಎಂದು ಸುಧಾಕರ ತಿಳಿಸಿದ.

ಒಮ್ಮೆಲೆ ಹೊರಟು ನಿಂತ ಸುಧಾಕರನನ್ನು ಕಂಡು ಹರೀಶನಿಗೆ ಗಾಬರಿಯಾಗದಿದ್ದರೂ ಅಸಮಾಧಾನವಾಯ್ತು. "ಊರಲ್ಲಿ ಎಲ್ಲ ಕ್ಷೇಮವಷ್ಟೆ ?" ಎಂದು ಅನುಮಾನಿಸುತ್ತ ಕೇಳಿದ.

"ಎಲ್ಲರೂ ಕ್ಷೇಮದಿಂದಿದ್ದಾರೆ. 'ಅವಶ್ಯದ ಕೆಲಸವಿದೆ, ಬಾ' ಎಂದು ತಂದೆಯವರು ಬರೆದಿದ್ದಾರೆ. ಒಂದೆರಡು ದಿನಗಳಲ್ಲಿಯೇ ಬಂದುಬಿಡುತ್ತೇನೆ. ಇದು ನನ್ನ 'leave-note' ...."

"ನಾನು ಮುಟ್ಟಿಸುತ್ತೇನೆ ಕೊಡಿರಿ. ನನ್ನಲ್ಲಿ ಯಾವ ಸಂಕೋಚವೂ ಬೇಡ ಸುಧಾಕರ. ನೀವು ನನ್ನ ಹೃದಯದ ಬಹು ದೊಡ್ಡ ಭಾರವನ್ನಿಳಿಸಿದ್ದೀರಿ."

ಹೊರಡುವ ಮೊದಲು ಮತ್ತೊಮ್ಮೆ ಮಾಧವನನ್ನು ಹುಡುಕಿದ. ಸಿಗಲಿಲ್ಲ. ಹಾಗೆಯೇ ಮೋಟಾರು ಹತ್ತಿದ. ತಂದೆಯವರೇಕೆ ಕರೆಸಿರಬಹುದು ? ಎಂಬುದು ತಿಳಿಯಲಿಲ್ಲ. ಮನೆಯ ನೂರೆಂಟು ತಾಪತ್ರಯಗಳು ಆತನ ಮನದೆದುರು ಬಂದು ನಿಂತವು.

* * *

ಆತ ಊರು ತಲುಪಿದಾಗ ಸಾಯಂಕಾಲ ನಾಲ್ಕು ಗಂಟೆಯಾಗಿರಬೇಕು. ನೇರವಾಗಿ ಮನೆಯ ಕಡೆಗೆ ನಡೆದ. ಕೈಯಲ್ಲಿದ್ದುದು ಒಂದು ಚೀಲ ಮಾತ್ರ. ಮನೆಯಲ್ಲಿ ಕಾಲಿಟ್ಟ. ಮನೆಯೆಂದರೇನು ? ಮೂರು ಕೋಣೆಗಳ ಸಣ್ಣ ಮನೆ ಅಷ್ಟೆ. ಅದೂ ಬಹಳ ವರುಷಗಳ ಹಿಂದೆ ಕಟ್ಟಿದುದು.

ಬಾಗಿಲ ಬಳಿ ಕಾಲ ಸದ್ದನ್ನು ಕೇಳಿ ತಂದೆಯವರು ಪಡಸಾಲೆಗೆ ಬಂದರು. ಅವರನ್ನು ನೋಡಿದ ಕೂಡಲೆ ಸುಧಾಕರನನ್ನು ಕಾಡುತ್ತಿದ್ದ ಅಕಾರಣ ಭಯ ದೂರವಾಯಿತು.

"ಮಧ್ಯಾಹ್ನವೇ ಹೊರಟೆಯೇನು ?" ಎಂದು ತಂದೆ ಕೇಳಿದುದಕ್ಕೆ ಅಹುದೆಂದು ಉತ್ತರಿಸಿ, ನಮಸ್ಕರಿಸಿದ. ಎಡೆಯೆತ್ತರ ಬೆಳೆದ ಮಗನನ್ನು ಕಂಡು ತಂದೆ ಹಿಗ್ಗಿದರು. "ಬಹಳ ಸೊರಗಿದ್ದೀಯಪ್ಪ! ಅಷ್ಟುಪರಿ ಓದಬೇಡ." ಎಂದು ವಾತ್ಸಲ್ಯದಿಂದ ಹೇಳಿದರು.

ಒಳಗೆ ಬಂದು ಸುಧಾಕರ ಕುಳಿತುಕೊಂಡ. ತನ್ನ ಮನೆಯನ್ನು ಒಂದು ಬಾರಿ ಕಣ್ತುಂಬ ನೋಡಿದ. ಅದೇ ಮನೆ. ಎಲ್ಲ ಅದೇ. ಬಹಳ ದಿನ ದೂರ ವಿದ್ದ ಸುಧಾಕರನಿಗೆ ಅದೆಲ್ಲ ಹೊಸದಾಗಿ ಕಂಡಿತು ಒಂದು ಕ್ಷಣ. ತಂದೆಯವರೇ ಒಳಗೆ ಚಹ ಮಾಡಹತ್ತಿದರು. ಅವರ ಬಳಿ ಹೋಗಿ ಕುಳಿತುಕೊಂಡ. "ನನ್ನ ತಾಯಿ ಜೀವಂತವಿದ್ದರೆ?" ಎಂಬ ವ್ಯಥೆ ಸುಧಾಕರನಿಗೆ ಆಗದಿರಲಿಲ್ಲ.

ಮಗನ ಯೋಗಕ್ಷೇಮ ಕೇಳಿಕೊಂಡರು. ಸುಧಾಕರ ತನ್ನ ಕಾಲೇಜ ಅಭ್ಯಾಸ, ಮೊನ್ನೆ ನಡೆದ ಪಂದ್ಯಾಟ, ಇವೆಲ್ಲವುಗಳ ಬಗೆಗೆ ಉತ್ಸುಕತೆಯಿಂದ ಹೇಳಿದ. ನಾಲ್ಕು ಸ್ನೇಹಿತರ ಒಲವಿನಲ್ಲಿ ಮಗ ಸುಖವಾಗಿರುವದನ್ನು ಕೇಳಿ ತಂದೆ ಸಮಾಧಾನಪಟ್ಟರು. ತನ್ನ ಊರು, ನೆರೆಹೊರೆಯವರು, ಬಾಲ್ಯದ ಸ್ನೇಹಿತರು, ಇವರೆಲ್ಲರನ್ನು ಮತ್ತೆ ಸುಧಾಕರ ಕಂಡಂತಾಯ್ತು. ಊರಿನ ಜೀವನದಲ್ಲಿ ಯಾವ ವಿಶೇಷ ಬದಲಾವಣೆಯೂ ಕಂಡುಬರಲಿಲ್ಲ. ಅದೇ ಜನ, ಅದೇ ರೀತಿಯ ಬದುಕು.

ಇಬ್ಬರೂ ಪಡಸಾಲೆಗೆ ಬಂದು ಕುಳಿತರು. ಶಾಲೆ ಬಿಟ್ಟಿತು. ಅಣ್ಣ ಬಂದುದನ್ನು ಬಾಗಿಲಲ್ಲಿಯೇ ನೋಡಿ ಇಬ್ಬರೂ ತಮ್ಮಂದಿರು ಓಡುತ್ತ ಬಂದು ಸುಧಾಕರನ ಹತ್ತಿರ ಕುಳಿತರು. ಚಿಕ್ಕವನಂತೂ ಹೆಗಲಮೇಲೇರಿ ಕುಳಿತ.

ಅಣ್ಣನ ಕೈಚೀಲದ 'ಝಡತಿ' ನಡೆಯಿತು. ಎರಡು ಹೊಸ ಅಂಗಿಗಳು, ಎರಡು ಪುಸ್ತಕಗಳು ಹೊರಟವು. ಕಿರಿಯವ ಆಗಲೆ ಅಂಗಿಯನ್ನು ತೊಟ್ಟುಕೊಂಡು ಕುಣಿದಾಡಿದ.

ಅಂದು ಸಂಜೆ ತಮ್ಮಂದಿರ ಜೊತೆಗೆ ತಿರುಗಾಡಲು ಹೋದ. ತಮ್ಮ ಶಾಲೆ, ಗುರುಗಳು, ಓದಿದ ಪುಸ್ತಕ, ತಮ್ಮತಮ್ಮ ತುಂಟ ಪರಾಕ್ರಮಗಳನ್ನೆಲ್ಲ ಇಬ್ಬರೂ ಹೇಳಿಯೇ ಹೇಳಿದರು. ಒಬ್ಬನಿಗಿಂತ ಮತ್ತೊಬ್ಬ ಮಿಗಿಲು. ಅಣ್ಣನಿಗಿಂತ ತನ್ನ ಹೇಳಿಕೆ ರಮ್ಯವಾಗಬೇಕೆಂದು ಮೂರು ಪಾಲು ಕಲ್ಪನೆಯನ್ನು ಬೆರಸಿ ಹೇಳಿದ ಕಿರಿಯವ. ಮಗ್ಗುಲ ಮನೆಯ ಬೆಕ್ಕು ಬಾವಿಯಲ್ಲಿ ಬಿದ್ದುದನ್ನು ಮೊದಲುಗೊಂಡು ಊರ ಜಾತ್ರೆಯ ವರೆಗೆ ಎಲ್ಲ ವಿಷಯವನ್ನು ವಿವರಿಸಿದ್ದಾಯ್ತು. ಅಷ್ಟೆ ಕುತೂಹಲದಿಂದ ಅಣ್ಣನ ಕಾಲೇಜು, ಆ ದೊಡ್ಡ ಪಟ್ಟಣಗಳ ವಿಷಯವಾಗಿ ಪ್ರಶ್ನಿಸಿ, ಆತ ಕೊಟ್ಟ ಉತ್ತರಗಳಿಂದ ತೃಪ್ತರಾಗದೆ "ನಮ್ಮನ್ನೆಂದು ಕರೆದೊಯ್ಯುತ್ತೀ ನಿಮ್ಮ ಕಾಲೇಜಿಗೆ? ಹನುಮಂತದೇವರ ಹಾಳುಗುಡಿಯಲ್ಲಿ ಹುಡಿಯ ನೆಲದ ಮೇಲೆ ಕುಳಿತು ಕಲಿತು ನನಗೆ ಸಾಕಾಗಿದೆ. ಹಾಳು ಊರು.." ಎಂದು ಕಿರಿಯ ತಮ್ಮ ಗೋಗರೆದ.

ತಿರುಗಿ ಮನೆಗೆ ಬಂದರು. ಬರುವವರಲ್ಲಿಯೇ ಅಡಿಗೆ ಸಿದ್ಧವಾಗಿತ್ತು. ಊಟ ಮುಗಿಯಿತು. ಮುಂದೆ ತಾಸೆರಡು ತಾಸು ತಮ್ಮಂದಿರ ಹರಟೆ ನಡೆದೇ ಇತ್ತು.

"ಇಂದೇ ದಣಿದು ಬಂದಿದ್ದಾನೆ. ಆತನಿಗೆ ವಿಶ್ರಾಂತಿ ಕೊಡಿರಿ ಸ್ವಲ್ಪಾದರೂ. ನೀವಿನ್ನು ಮಲಗಿರಿ." ಎಂದು ತಂದೆ ಹೇಳಿದಾಗ ಅವರ ಉತ್ಸಾಹಕ್ಕೆ ಭಂಗ ಬಂದಂತಾಯ್ತು. ನಿರುಪಾಯರಾಗಿ ಮಲಗಿದರು. ಕಿರಿಯ ತುಂಟ ಮಾತ್ರ ಚಾದರದ ಕಿಂಡಿಯೊಳಗಿಂದ ಪಿಳಿಪಿಳಿ ನೋಡುತ್ತ ಮಲಗಿದ.

ಗೋಡೆಯ ಕಡೆಗೆ ನೋಡುತ್ತ ತಂದೆಯವರು ಕುಳಿತಿದ್ದರು. ಏನನ್ನೋ ಹೇಳಬೇಕೆಂಬುದು ಅವರ ಮುಖದ ಮೇಲೆ ಒಡೆದು ಕಾಣುತ್ತಿತ್ತು. ಸುಧಾಕರನಿಗೂ ಕೇಳಬೇಕೆಂಬ ಆತುರ.

ಮುಪ್ಪಿಗಿಂತ ಚಿಂತೆ ಅವರನ್ನು ಸೊರಗಿಸಿತ್ತು. ತಮಗೆ ಮುಂದೆ ಒದಗಬಹುದಾದ ವಿಪತ್ತನ್ನು ಮೊದಲೇ ಊಹಿಸಿ, ಅದರಿಂದ ಮಕ್ಕಳಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕೆಂಬುದೇ ಅವರ ಆಸೆಯಾಗಿತ್ತು. ಅದಕ್ಕಾಗಿಯೇ

ಸುಧಾಕರನನ್ನು ಕರೆಸಿದ್ದರು.

ಒಮ್ಮೊಂದೊಮ್ಮೆಲೆ ದಮ್ಮಿನ ಉಬ್ಬಸ ಸುರುವಾಯಿತು. ಸುಧಾಕರ ಗಾಬರಿಯಾದ. ಎದೆಯಲ್ಲಿ ತಣ್ಣೀರು ಸುರುವಿದಂತಾಯ್ತು. ತಂದೆಯನ್ನು ಹಿಡಿದು, ದಿಂಬಿಗೆ ಒರಗಿಸಿ ಕೂಡಿಸಿದ. ತುಸು ಸಮಾಧಾನವಾದ ಮೇಲೆ "ಯಾವಾಗಲಾದರೊಮ್ಮೆ ಈ ಉಬ್ಬಸ ಬರುತ್ತದೆ ಸುಧಾಕರ. ಅಷ್ಟು ಗಾಬರಿಯಾಗಬೇಡ. ನನ್ನ ಜನ್ಮಕ್ಕೆ ಅಂಟಿ ಬಂದ ರೋಗವಿದು." ಎಂದು ಮಗನಿಗೆ ಧೈರ್ಯ ಹೇಳಿದರೂ ಅವರ ಧ್ವನಿಯಲ್ಲಿ ಬೆಚ್ಚಿದ ಭಯವಿತ್ತು. "ನನಗೆ ಒಂದು ವಿಚಾರ ಹಿಂದಕ್ಕೇ ಹೊಳೆದಿತ್ತು. ನಿನಗೆ ಆಗಲೇ ಹೇಳಬೇಕೆಂದಿದ್ದೆ. ಏಕೋ ಹೇಳಲಿಲ್ಲ...."

ಸುಧಾಕರ ಮೂಕನಾಗಿ ತಂದೆಯೆದುರು ಕುಳಿತಿದ್ದ.

"ನೀನು ದೊಡ್ಡವನಾದಿ ಸುಧಾಕರ. ಇನ್ನೆರಡು ವರುಷ ಪರಿಶ್ರಮಪಟ್ಟು ಓದಿದೆಯೆಂದರೆ ನಾನು ಒಂಟಿಯಾಗಿ ಜೀವನ ಸವೆಸಿದ್ದು ಸಫಲವಾಗುತ್ತದೆ. ನೌಕರಿಯೇನು ?... ಎಲ್ಲಿಯಾದರೂ ಸಿಗುತ್ತದೆ. ನನಗ್ಗೀಗ ಕೆಲಸ ನೀಗುವದಿಲ್ಲ ಸುಧಾ !.... ತುಸು ಹೆಚ್ಚು ಶ್ರಮ ತೆಗೆದುಕೊಂಡರೆ ಈ ಉಬ್ಬಸ ಬಂದುಬಿಡುತ್ತದೆ...." ಎಂದು ಅವರು ಹೇಳುತ್ತಿರುವಾಗ ಮುಂಬೆ ಯಾವ ಅಶುಭ ಒದಗಲಿದೆಯೋ ಎಂದು ಸುಧಾಕರ ಭೀತನಾದ. ಆ ಭೀಕರ ಚಿತ್ರ, ಆದಗ ವಿಚಾರವೇ ಕಂಗೆಡಿಸಿತ್ತು. ಉಸಿರು ಬಿಗಿಹಿಡಿದು ಕೇಳುತ್ತಿದ್ದ. "....ಅವಳಂತೂ ನವೆದು ನವೆದು ತೀರಿದಳು. ಈಗಿದ್ದರೆ ಎಷ್ಟು ಹಿಗ್ಗುತ್ತಿದ್ದಳೋ !.... ಅದಕ್ಕೇ ಸುಧಾ ನಿನಗೆ ಬೇಗನೆ ಮದುವೆಯಾದರೆ ಒಳ್ಳೆಯದು. ನನ್ನ ಕೆಲಸ ಹಗುರು ಮಾಡಿಕೊಳ್ಳಲು ಹೀಗೆನ್ನುತ್ತಿರುವದಿಲ್ಲ ನಾನು. ನಾ–ನು ಬದುಕಿರುವದರೊಳಗಾಗಿ.... ನನ್ನ ಮನೆ ಬೆಳಗಿದುದನ್ನು ನೋಡಬಯಸಿವೆ ಈ ಮುದಿ ಕಂಣುಗಳು...." ಸುಧಾಕರ ಕೇಳಬಹುದಾದ ಪ್ರಶ್ನೆಯನ್ನು ಊಹಿಸಿ ತಾವೆ ಅದಕ್ಕೆ ಉತ್ತರಿಸಹತ್ತಿದರು. "....ಅದೇನು ಮಹಾ ಜವಾಬ್ದಾರಿಯಲ್ಲ... ನೀನು ಕಲಿಯುತ್ತಿರು. ಅದಕ್ಕೇನು ಅಡ್ಡಿಯಾಗಲಾರದು.... ಬಡತನವೇನು....ಇದ್ದೇ ಇದೆ.... ಅದಕ್ಕೆ ಹೆದರಬಾರದು ನೀನು. B.A. ಆಗುತ್ತೀ. ಕೆಲಸ ದೊರೆಯುವದು. ಮುಂದೆಲ್ಲ ಸುಗಮವಾಗುವದು.... ನನಗೇನೋ ಆಸೆ...." ಎಂದು ಮಗನ ಮುಖದ ಕಡೆಗೆ ನೋಡಿದರು.

ಸುಧಾಕರನ ಕಣ್ಣಿಂದ ಜಳಜಳನೆ ಕಂಬನಿ ಉರುಳುತ್ತಿದ್ದವು. "ಅಣ್ಣಾ..!" ಎಂದು ಮುಂದೆ ಮಾತು ಬಾರದೆ ತಡೆದ. ತಂದೆ ತಮ್ಮ ಸಾವಿನ ಮಾತನ್ನೇಕೆ ಆಡುತ್ತಿದ್ದಾರೆ ಎಂಬ ವಿಚಾರ ಅವನ ಕರುಳಿಗೇ ಕೊಳ್ಳಿಯಿಟ್ಟಿತು. "ಅಣ್ಣಾ! ಆ ಮಾತನ್ನಾಡಬೇಡಿರಿ. ಸುಮ್ಮನೆ ಭಯಪಟ್ಟು ಕೊರಗಬೇಡಿರಿ. ನಮ್ಮ ಸ್ಥಿತಿ ನಿಮಗೆ ತಿಳಿಯದುದೇ? ಮಕ್ಕಳಿಗಾಗಿ ನಿಮ್ಮ ಬದುಕನ್ನು, ಸುಖವನ್ನು, ಧಾರೆ ಯರೆದಿರಿ. ನಾನು ಬೆಳೆದೆ. ನಿಮ್ಮ ಹೊಣೆಯನ್ನು, ಭಾರವನ್ನು ನಾನು ಇಳಿಸ ಬೇಡವೇ? ತಮ್ಮಂದಿರಿನ್ನೂ ಚಿಕ್ಕವರು. ನಮ್ಮೆಲ್ಲರ ಪೋಷಣೆ ಆಗಬೇಕು, ನನ್ನ ಶಿಕ್ಷಣ ಮುಂದುವರಿಯಬೇಕು. ನಮ್ಮ ಸ್ಥಿತಿಗತಿ ಹದಗೆಟ್ಟುದು ನಿಮಗೆ ಗೊತ್ತಿಲ್ಲವೇ?...." ಎಂದು ತಡೆಯಲಾರದೆ ಸುಧಾಕರ ಹೇಳಿದ.

ಸುಮ್ಮನೆ ಕಾಲ್ಪನಿಕ ಭಯದಿಂದ ತಾವು ಹಾಗೆ ಮಾತನಾಡಬಾರದಿತ್ತೆಂದೆನಿಸಿತು ತಂದೆಗೆ. ಮಗ ಹೇಳುವ ಮಾತು ನಿಷ್ಠುರ ಸತ್ಯವಾಗಿತ್ತು. ತಾವಿರುವ ಈ ಸ್ಥಿತಿಯಲ್ಲಿ ಬೇರಾವ ವಿಚಾರಗಳೂ ಸುಳಿಯುವಂತಿರಲಿಲ್ಲ. ಹೊಲ ಮಾರಿದ್ದರು ಶಿಕ್ಷಣಕ್ಕಾಗಿ, ಹೊಟ್ಟೆಗಾಗಿ. ಅದು ಸುಧಾಕರನಿಗೆ ಗೊತ್ತಿರಲಿಲ್ಲ. ಗೊತ್ತಾಗಿದ್ದರೆ ಆತ ಕಲಿಯುವದನ್ನೇ ಬಿಡುತ್ತಿದ್ದ. ಆತ ಗಳಿಸಲು ಶಕ್ತನಾಗುವವರೆಗೆ ತಾವು ಹೊಟ್ಟೆ ಬಟ್ಟೆ ಕಟ್ಟಿ ಕಷ್ಟಜೀವನ ಸಾಗಿಸಬೇಕು. ತಾವು ಒಪ್ಪತ್ತು ಉಂಡಿರ ಬಹುದು. ಎಳೆ ಮಕ್ಕಳ ಗತಿ? ತಮ್ಮ ಬದುಕಿನ ಕಠಿಣ ಸ್ಥಿತಿಯನ್ನು ಕಂಡು ಒಳಗೇ ಮರುಗಿದರು. ಆದರೂ ಮಗನ ಮದುವೆ ಆಗಬೇಕೆಂದೆನಿಸಿತು ಅವರಿಗೆ!... "ನಿನ್ನ ವಿಚಾರ ಕೇಳಿ ನಂತರ ನಿರ್ಧರಿಸಬೇಕೆಂದಿದ್ದೆ. ನಮ್ಮ ವಿಶ್ವನಾಥ ತನ್ನ ಮಗಳ ವಿಷಯವಾಗಿ...." ಎಂದು ಅವರು ಮುಂದುವರಿಸುವವರಿದ್ದರು.

ನಡುವೆಯೇ ಸುಧಾಕರ "ಅಣ್ಣಾ, ನೀವು ಸಿಟ್ಟಿಗೇಳದಿದ್ದರೆ ಒಂದು ಮಾತು ಹೇಳುತ್ತೇನೆ. ಇನ್ನೆರಡು ವರುಷ ಆ ವಿಚಾರವನ್ನೇ ಮಾಡಬೇಡಿರಿ. ಕಲಿಯುವದು ಮುಗಿಯಬೇಕು. ಎಲ್ಲಿಯಾದರೂ ಕೆಲಸ ದೊರಕಿಸಬೇಕು. ನಿಮ್ಮ ಭಾರವನ್ನು ಕಡಿಮೆ ಮಾಡಿ, ನಾವು ಎರಡು ಹೊತ್ತಿಗೆ ಅನ್ನ, ಬಟ್ಟೆ ಕಾಣುವಂತಾಗದ ಹೊರತು ಈ ಮದುವೆಯ ವಿಚಾರವೇ ನನಗೆ ಬೇಕಾಗಿಲ್ಲ. ನಾವು ಬದುಕಿನಲ್ಲಿ ಕಷ್ಟವನ್ನು ಜೇಡಿ ಬಂದಿದ್ದೇವೆ. ಅದಕ್ಕಾಗಿ ನಾವು ಇನ್ನೊಂದು ಜೀವದ ಮರು ಗನ್ನು ಕಟ್ಟಿಕೊಳ್ಳುವದು ನನಗೆ ಇಷ್ಟವಿಲ್ಲ. ಸುಖ ಬಯಸಿ ಬಂದ ಹುಡಿಗೆ ಇಲ್ಲಿ ಏನು ಕಂಡಾಳು?" ಎಂದು ತನ್ನ ಮನಸ್ಸಿನಲ್ಲಿದ್ದುದನ್ನು ಬಿಚ್ಚಿ ಹೇಳಿದ.

ಮಗನ ಮಾತುಗಳು ತಂದೆಯ ತಲೆಯಲ್ಲಿ ತಿರ್ರನೆ ತಿರುಗಹತ್ತಿದವು. ತಾವು ಎಷ್ಟು ಹುಚ್ಚುವಿಚಾರವನ್ನು ತಂದುಕೊಂಡಿದ್ದರೆಂದು ತಿಳಿಯಿತು. ಸುಧಾಕರನ ಮಾತು ಮನವನ್ನು ಇರಿಯುವಂತಿದ್ದರೂ, ಅದು ದಾರುಣ ಸತ್ಯವಾಗಿತ್ತು. ಆ ಸತ್ಯ ಹೃದಯಕ್ಕೆ ಅಪ್ರಿಯವೆನಿಸಬಹುದು ಒಂದು ಕ್ಷಣ. ಆದರೆ ಭಾವನೆಯ ತೀವ್ರತೆ ಕಡಿಮೆಯಾದ ಮೇಲೆ ತಿಳಿಮನಸ್ಸಿನಿಂದ ವಿಚಾರಿಸಿದಲ್ಲಿ, ಸುಧಾಕರನ ಮಾತಿನಲ್ಲಿ ವಿವೇಕ, ಸತ್ಯ ಕಂಡುಬಂದವು. ಆಗ ತಮ್ಮ ಹುಚ್ಚು ವಿಚಾರಕ್ಕಾಗಿ ತಾವೇ ನಕ್ಕರು. ಏಕೋ ಅವರಿಗೆ ಹಿಂದಿನ ದುಃಖವೆಲ್ಲ ಉಮ್ಮಳಿಸಿ ಬಂದು, ತಮ್ಮ ಸಾವಿನ ಭೀಕರಚಿತ್ರ ಕಂಣೆದುರು ನಿಂತು, ಅಧೀರರಾಗಿದ್ದರು. ಈಗ ಅದೆಲ್ಲ ಕಡಿಮೆಯಾಯಿತು. ಮಗನನ್ನು ಸಂತಯಿಸಿ "ನೀನು ಮಲಗು ಹೋಗು. ನಿನ್ನ ಮಾತೇ ನಿಜ." ಎಂದರು. ಮುಂದೆ ಕೆಲ ಹೊತ್ತು ಇಬ್ಬರೂ ತಮ್ಮ ಮನೆತನದ ವಿಷಯವಾಗಿ ಇನ್ನಿತರ ಮಾತನಾಡಿಕೊಂಡರು. ಅವರು ಮಲಗುವಾಗ ಚಾವಡಿಯ ಗಂಟೆ ಹನ್ನೆರಡು ಬಾರಿಸಿತು.

ಮರುದಿನ ಸುಧಾಕರ ಊರಿಗೆ ಹೊರಟು ನಿಂತ.

ಗಾಳಿ ಎಲ್ಲಿಂದಲೋ ಮೋಡಗಳನ್ನಟ್ಟಿಸಿಕೊಂಡು ಬಂದು ಮಳೆಗರೆಸಂತಾಗಿತ್ತು ನಿನ್ನಿನ ಪ್ರಸಂಗ. ಆಕಾಶ ಮತ್ತೆ ತಿಳಿಯಾಗಿತ್ತು.

ಹಿಂದಿನ ರಾತ್ರಿಯಿಂದ ಒಂದು ವಿಷಯ ಮಾತ್ರ ಸುಧಾಕರನನ್ನು ಒಂದೇ ಸಮನೆ ಕಾಡುತ್ತಿತ್ತು. ಅದೆಂದರೆ ತಂದೆಯ ದೇಹಸ್ಥಿತಿ. ಅವರನ್ನು ನೋಡಿದಾಗೆಲ್ಲ ಮನದಲ್ಲಿ ಕಸಿವಿಸಿಯಾಗುತ್ತಿತ್ತು. ಇಲ್ಲದ ಕೆಟ್ಟ ಭಯಾನಕ ವಿಚಾರಗಳು ಸುಳಿಯುತ್ತಿದ್ದವು. ತಡೆದು ತಡೆದು, ಕೊನೆಗೆ ತಂದೆಗೆ ಹೇಳಿದ: "ಅಣ್ಣಾ, ನೀವು ಹೆಚ್ಚು ಆಯಾಸಮಾಡಿಕೊಳ್ಳಬೇಡಿರಿ. ನಿಮ್ಮ ಆರೋಗ್ಯದ ವಿಷಯವಾಗಿ ನನಗೆ ಎರಡು ದಿನಕ್ಕೊಮ್ಮೆಯಾದರೂ ಕಾಗದ ಬರೆಯುತ್ತಿರಿ."

ನಿಂತು ನಿಂತು ಬರುವ ಅವನ ಮಾತುಗಳನ್ನು ಕೇಳಿದಾಗ ತಂದೆಗೆ ಹೇಗೋ ಅನಿಸಿಬಿಟ್ಟಿತು. ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು "ಹುಚ್ಚಪ್ಪಾ! ನನಗೇನಾಗುವದು ? ನೀನು ಯಾವ ಕಾಳಜಿಯನ್ನೂ ಮಾಡಬೇಡ. ಇಲ್ಲದ ಚಿಂತೆಯಿಂದ ಕೊರಗಬೇಡ. ಪರೀಕ್ಷೆ ಸಮೀಪಿಸುತ್ತಿದೆ. ನಿಶ್ಚಿಂತನಾಗಿ ಓದು.... ಹೋಗಿ ಬಾ...." ಎಂದು ಮಗನನ್ನು ಹರಸಿದರು.

ತಮ್ಮಂದಿರಿಬ್ಬರೂ ಬೀಳ್ಕೊಡಲು ಅಣ್ಣನ ಸಂಗಡ ಬಂದಿದ್ದರು. ತಿರುಗಿ

ಹೋಗುವಾಗ ಇಬ್ಬರ ಕೈಯಲ್ಲಿಯೂ ನಾಲ್ಕಾಣೆಯನ್ನಿರಿಸಿದ. ಅವರು ಕುಣಿದಾಡುತ್ತ ಮನೆಯ ಕಡೆಗೆ ಓಡಿದರು. ಮೋಟರು ಧೂಳೆಬ್ಬಿಸುತ್ತ ಊರ ಹೊರಗೆ ಓಡಿತು.

---

# ೪ : ನಾನಿಯ ಅಣ್ಣನ ಕತೆ

ನಾನಿ ಈ ನಾಲ್ಕು ಪ್ರಕರಣಗಳನ್ನು ಬರೆದು ಮುಗಿಸಿ ಹದಿನೈದು ದಿನಗಳಾದವು. ಮುಂದೆ ಬರೆಯಬೇಕೆಂದು ಒಂದೆರಡು ಸಾರೆ ಪ್ರಯತ್ನ ಮಾಡಿದ. ಕತೆ ಮೊಳಕಾಲೂರಿತು. ನಿಸರ್ಗದ ಮಡಿಲಲ್ಲಿ ಕುಳಿತರೆ ಸಾಹಿತ್ಯದ ಆವೇಶ ಬರಬಹುದೆಂದು ಹಾಗೂ ಪ್ರಯತ್ನಿಸಿದ. ಪ್ರಶಾಂತ ಗಂಭೀರ ರಾತ್ರಿ ಬರವಣಿಗೆಗೆ ಯೋಗ್ಯವಾಗುವದೆಂದು ತಿಳಿದು ಒಂದು ರಾತ್ರಿ ಬರೆಯಲು ಕುಳಿತ.

ಕಾಗದಕ್ಕೆ ಮಾರ್ಜಿನ್ ಗೆರೆ ಹೊಡೆಯುವದು, ಪುಟಗಳ ಅಂಕಿ ಬರೆಯುವದು ಇವೆಲ್ಲ ಮುಗಿದವು. ಖೋಲಿಯ ಕಿಡಿಕಿ ಬಾಗಿಲುಗಳನ್ನೆಲ್ಲ ಮುಚ್ಚಿ ಬಂದು ಕುಳಿತ. ಕಣ್ಣುಮುಚ್ಚಿ ಧ್ಯಾನಸ್ಥನಾದ. ಹದಿನೈದು ದಿನಗಳ ಹಿಂದೆ ಬರೆದಿಟ್ಟ ಭಾಗವನ್ನು ಮತ್ತೆ ಓದಿದ. ಏನೇನೋ ವಿಚಾರಗಳು, ಅಸ್ಪಷ್ಟಚಿತ್ರಗಳು ಸುಳಿದವು. ಬರೆಯಲು ಕುಳಿತರೆ ಒಂದು ವಾಕ್ಯವಾದರೂ ಹೊರಬರಲಿಲ್ಲ. ನಿದ್ದೆ ಬರಹತ್ತಿತು. ಚಹ, ಎಲೆಯಡಿಕೆ, ತಂಬಾಕುಗಳಿಂದ ನಿದ್ದೆ ಕಳೆದುಕೊಂಡು ಸ್ಫೂರ್ತಿಯನ್ನು ಪಡೆಯಲು ಹವ್ಯಾಸಪಟ್ಟ.

ಕೊನೆಗೆ ಆದದ್ದಿಷ್ಟೇ–ದೀಪವಾರಿಸಿ ಮಲಗಿಬಿಟ್ಟ. ನಿದ್ದೆ ಬರಲಿಲ್ಲ. ಈ ಬರೆಯುವ ಮೋಹ ತನಗೇಕೆ ಬಂದಿತೆಂದು ಸಂಕಟಪಟ್ಟ. ತಾನು ಬರೆದದ್ದು ತನಗೇ ಅತೃಪ್ತಿಯನ್ನುಂಟುಮಾಡಿತು. ಕರುಣಾಳ ಮನೋಭಾವನೆಗಳ ಲಹರಿಯ ಚಿತ್ರವೇ ಕಾದಂಬರಿಯ ಮುಖ್ಯ ವೈಶಿಷ್ಟ್ಯ ನಿಜ. ಆದರೆ ಅವುಗಳ ಏರಿಳಿತಗಳು, ಪ್ರತಿಕ್ರಿಯೆಗಳು ನಡೆಯಬೇಕಾದ ಕತೆಯ ಮೇಲೆ ಅವಲಂಬಿಸಿವೆ. ಕತೆ ಹೇಗೆ ಮುಂದುವರಿಯುತ್ತದೆ? ಅಂತೂ ನಾನಿಗೆ ಅಸಮಾಧಾನವಾಯಿತು. ಆ ಅಸಮಾಧಾನ ಸರದೇಸಾಯಿಯ ಮೇಲೆ ತಿರುಗಿತು.

“ನಡದ ಸಂಗತಿ ಏನು, ಅಂಬೂದನ್ನು ಸ್ವಲ್ಪ ವಿವರವಾಗಿ ಬರದು ತಿಳಸು, ಅಂತ ಪತ್ರಾ ಬರದು ಎಂಟು ದಿನಾ ಆಗಲಿಕ್ಕೆ ಬಂತು. ಇನ್ನೂ ಉತ್ತರಾ ಹಾಕಬಾರದಂದ್ರ! ಮಹಾ ಮರಗೂಳಿ ದೇಶ್ಯಾ...” ಎಂದು ಅಂದುಕೊಂಡ.

ನಾಗಿದ್ದಾಳಂತ. 'ಆ ಹುಡಿಗಿ ನಿಮ್ಮ ಅಣ್ಣನ್ನ ಮಬ್ಬಿಗೆ ಕೆಡವ್ಯಾಳ. ಅವರ ಮನೀಯವರು ಈ ಹುಡುಗನ್ನ ಬುಟ್ಟಿಗೆ ಹಕ್ಕೊಳ್ಳೀಬೇಕಂತಾರ' ಅನ್ನೂ ಸುದ್ದಿ ಪೂರಾ ಸುಳ್ಳು. ಇವನs ಸ್ವಲ್ಪ ಚಂಗ್ಯಾಮಂಗ್ಯಾನ್ಹಾಂಗ ಮಾಡ ಲಿಕ್ಕೆ ಹತ್ತ್ಯಾನಂತ. ಪುಸ್ತಕಾ ಕೊಡೂದು, ಪಿಕ್ಚರಿಗೆ ಬರತೀರೇನ್ರಿ ಅಂತ ಕೇಳೂದು, ಏನರ ನೆವಾ ಮಾಡಿ ಅವರ ಮನಿಗೆ ಹೋಗೂದು, ಹೀಂಗ ಮಾಡತಾನಂತ. ಒಮ್ಮೇನೋ ಅವರ ಮನ್ಯಾಗಿನ ಸಣ್ಣ ಹುಡುಗ ರಿಗೆ ಬಿಸ್ಕೀಟು, ರಿಬ್ಬನ್ನು ಕೊಡಿಸಿದನಂತ. ಈಗ ಏನಪಾ ಅಂದ್ರ 'ಲಗ್ನ ಆದರ ಆಕಿನ್ನs ಆಗತೀನಿ' ಅಂತ ಭೀಮೂನ ಮುಂದ ಅಂದನಂತ. ಇಬ್ಬರೂ 'ಗಳಸ್ಯ ಕಂಠಸ್ಯ' ಗೆಳ್ಯಾರಲಾ! ಆ ಹುಡಿಗಿ, ಅವರ ಮನಿ ಯವರು ಇದಕ್ಕೇನಂದಾರು, ಅದರ ವಿಚಾರನs ಇಲ್ಲಾ. ಪರಿಚಯು ಅದ, ಸಲಿಗಿ ಅದ, ತನ್ನ ಜೋಡಿ ಮಾತಾಡತಾಳ ಅಂದಾಕ್ಷಣಕ್ಕ 'ನನ್ನ ಮ್ಯಾಲೆ ಆಕೀ ಪ್ರೇಮ ಅದ' ಅಂತ ತಿಳಕೊಂಡರ ಹ್ಯಾಂಗಪಾ ನಾನ್ಯಾ!...... ಒಮ್ಮೆ ಪತ್ರಾ ಬರೀಬೇಕು ಅಂತ ಮಾಡಿದ್ನಂತ. ಭೀಮೂನs ಛೀ, ಥೂ ಅಂದು ಬಿಡಿಸಿದನಂತ. ಅದಕ್ಕ ಭೀಮೂಗ ನಾನು ಬರೂಮುಂದ ಹೇಳಿ ಬಂದೀನೇನಪಾ. ಹಾಂಗೇನರ ಹುಚ್ಚುಚ್ಚಾರ ಮಾಡೂ ಲಕ್ಷಣ ಕಾಣಿಸ್ತು ಅಂದ್ರ ನನಗೊಂದು ತಾರು ಮಾಡು ಅಂತ ಹೇಳೀನಿ...." ತುಸು ಹೊತ್ತು ಸುಮ್ಮನಿದ್ದು "ಅದೇನು ಆಗೂದುಲ್ಲೇಳು. ಅವ್ವೇಕ ವಯಸ್ಸು. ಏನೇನರ ತಲ್ಯಾಗ ತುಂಬಿಕೋತಾವ. ನಾಕ ದಿನಾ ಹುಚ್ಚು ಇರತದ. ತಾನs ತಲೀಗೆ ಬಡೀತೆಂದರ ಇಳೀತದ.... ಹಂ, ಇಷ್ಟಿಷ್ಟದ ನೋಡಪಾ ನಿಮ್ಮ ಅಣ್ಣನ ಸಮಾಚಾರ...." ಎಂದು ಕತೆಯ ಉಪಸಂಹಾರಕ್ಕೆ ಬರುತ್ತಲೆ ಆಕಳಿಸಿ ಚಟಿಕೆ ಹೊಡೆಯುತ್ತ ಎದ್ದು ಕಿಡಿಕಿಯ ಹತ್ತಿರ ಹೋಗಿ ನಿಂತ.

ನಾನಿಯ ವಿಚಾರ ಬೇರೆ ದಾರಿಯಲ್ಲಿಯೆ ಸಾಗಿತ್ತು.

ಕಾದಂಬರಿಯ ಮುಂದಿನ ಹೊಳಹು ಮೂಡಿದಂತಾಯಿತು.

"ಅಲ್ಲ ಮಾಮಾ, ಇಬ್ಬರದೂ ಮನಸ್ಸಿದ್ದರ ಲಗ್ನ ಆದರ ತಪ್ಪೇನು?" ಎಂದು ಕೇಳಿದ.

ಗುರೂಮಾಮಾ ಸಾವಕಾಶವಾಗಿ ತಿರುಗಿ "ಏನಂದಿ? ಬರೆ ಹಾಂಗ "ಮನಸ್ಸಿದ್ದರ" ಅಂತ ಅಂದರ ಆತೇನು? ಆ ಹುಡಿಗೀ ಮನಸ್ಸಿನ್ಯಾಗ ಏನದನೋ? ಅವರ ಮನಿಯವರು ಏನಂತಾರೋ? ಇದರ ವಿಚಾರ ಬ್ಯಾಡೇನು? ಅದs ಹುಡಿಗಿನ್ನ ಲಗ್ನ ಆಗಬೇಕು ಅಂತ ಇದ್ದರ

ತಪ್ಪು ಹಾದೀ ಹಿಡದು ಹೋಗಬಾರದು. ಮುಂದ್ಯಾಗ ಗೈರ ಆಗೂ ಹಾಂಗ ಆದರ ಹ್ಯಾಂಗ ನೋಡು? ತಲ್ಯಾಗ ಏನರ ಹುಚ್ಚು ತುಂಬಿಕೊಂಡು, ಪತ್ರಾ ಬರಿಯೂದಂದ್ರ ತಪ್ಪಾಗತದ." ಎನ್ನುತ್ತ ಮತ್ತೆ ಕುರ್ಚಿಯ ಮೇಲೆ ಕುಳಿತುಕೊಂಡ.

"ತನ್ನ ಮನಸ್ಸಿನ್ಯಾಗ ಇದ್ದದ್ದನ್ನಬರದು ತಿಳಸೂದರಾಗ ತಪ್ಪೇನು ಅದ ಗುರೂಮಾಮಾ?"

"ನಾನ್ಯಾ, ನೀ ಇನ್ನೂ ಹುಡುಗ ಇದ್ದೀದಿ. ನೂರಾಯೆಂಟು ತೊಡಕು ಇರತಾವೇನಪಾ ಅದರಾಗ. ಪತ್ರಾ ಬರದ ಕೂಡಲೇ ಆ ಹುಡಿಗಿ ಒಪ್ಪಿ ಮದಿವಿ ಆಗಲಿಕ್ಕೆ ಅದೇನು ಸಿನೀಮಾ ಅಂತ ತಿಳದೀ ಯೇನು? ಹಾಂಗ ಪತ್ರಾ ಬರಿಯೂದು ಈಗಿನ ದಿವಸದಾಗ ನಮ್ಮ ಲೌಕಿಕವ್ಯವಹಾರಕ್ಕೆ ಅಸಮ್ಮತ ಏನಪಾ....ಹೋಗು, ನೀ ಯಾಕ ಸುಳ್ಳೆ ತಲಿ ಕೆಡಿಸಿಗೋತೀದಿ?" ಎಂದು ಹೇಳಿ ಒಳಗೆ ನಡೆದ.

ನಾನಿಯ ದೃಷ್ಟಿಯಲ್ಲಿ ಅಣ್ಣನ ನಡತೆಯಲ್ಲಿ ಯಾವ ಅಸ್ವಾಭಾವಿಕತೆ ಯಾಗಲಿ, ತಪ್ಪಾಗಲಿ ಕಂಡುಬರಲಿಲ್ಲ. ಪತ್ರವನ್ನು ಬರೆದದ್ದೇ ಆದರೆ ಅದರ ಪರಿಣಾಮವೇನಾದೀತೆಂಬ ವಿಚಾರಕ್ಕಿಂತ, ಪತ್ರವನ್ನು ಹೇಗೆ ಬರೆಯುಬಹುದು ಎಂಬ ವಿಚಾರ ನಾನಿಯನ್ನು ಸೆಳೆಯಿತು.

ಆ ದಿನ ರಾತ್ರಿ ನಾನಿ ಬಹಳ ಹೊತ್ತಿನವರೆಗೆ ಎಚ್ಚರಿದ್ದ. ಅಣ್ಣನ ಪ್ರಸಂಗ, ಮಧ್ಯಾಹ್ನ ಬರೆದಿಟ್ಟ ಟಿಪ್ಪಣೆಗಳು, ಅವನಿಗೆ ಹೇಗೋ ಸಾಮಗ್ರಿ ಯನ್ನೊದಗಿಸಿದವು. ಮತ್ತೆ ಕಾದಂಬರಿಯನ್ನು ಮುಂದುವರಿಸಲು ಕುಳಿತ.

ನಾನಿ ಆ ದಿನ ಮಧ್ಯಾಹ್ನ ಓದುತ್ತಿದ್ದ ಪುಸ್ತಕ, 'ಫ್ರಾಯಿಡನ' "Lectures on Psycho-analyses."

---

## ೫: ನಾನಿಯ ದಿನಚರಿಯಿಂದ

೨೩-೮-೧೯....

ಸರದೇಸಾಯಿಯಿಂದ ಪತ್ರವಂತೂ ಬರಲೇ ಇಲ್ಲ. ಮಹಾರಾಯ ಮತ್ತಾವ ಕಿತಾಪತಿಯ ಪ್ರಸಂಗವಲ್ಲಿ ತೊಡಗಿ ಮರೆತುಬಿಟ್ಟಿದ್ದಾನೋ ಏನೋ! ಕಾದಂಬರಿಯ ಬರವಣಿಗೆ ಕುಂಟುತ್ತಿದೆ. ಕರುಣಾ ಸುಧಾಕರ ನಲ್ಲಿ ಅನುರಕ್ತಳಾಗಿದ್ದಾಳೆ. ಆ ಅನುರಾಗದ ಚಿತ್ರ ಮನೋಹರವಾಗಿಯೇ ಬಂದಿದೆ. ಆದರೆ ಅದರಲ್ಲಿ ಎಷ್ಟರ ಮಟ್ಟಿಗೆ ವಾಸ್ತವಿಕತೆಯಿದೆಯೋ ಎಂದು ನನಗೇ ಸಂಶಯ ಬಂದಿದೆ. ಅದೂ ಅಲ್ಲದೆ ಕತೆ ಹೇಗೆ ಮುಂದೆ ನಡೆಯುತ್ತದೆಂಬುದೇ ಹೊಳೆಯಲೊಲ್ಲದಾಗಿದೆ. ಉಳಿದ ಸಾಹಿತಿಗಳ ಅನುಭವವೇನಿದೆಯೋ ನನಗೆ ಗೊತ್ತಿಲ್ಲ. ಆದರೆ ನನ್ನ ದೃಷ್ಟಿಯಿಂದ ಇಷ್ಟು ಮಾತ್ರ ನಿಜ. ಕಾಗದದ ಮೇಲೆ ಮೂಡುವ ಮೊದಲೇ, ಇಡಿಯ ಕಾದಂಬರಿ ಮನಸ್ಸಿನಲ್ಲಿ ಮೂಡಬೇಕು. ಕಾಗದದ ಮೇಲೆ ಮೂಡಿಸುವದು ಕೇವಲ ಒಂದು ಯಾಂತ್ರಿಕ ಕ್ರಿಯೆ. ಆದರೆ ನನ್ನ ಮನಸ್ಸು ಅನುಭವವಿಲ್ಲದ ಮರುಭೂಮಿ. ಕಲ್ಪನೆಯಿಂದಲೇ ಎಲ್ಲ ಆಟ ಸಾಗಬೇಕು. ಆದರೆ ಕಲ್ಪನೆಗೂ ಅನುಭವವೇ ಮಾರ್ಗದರ್ಶಿ. ಸರದೇಸಾಯಿಯ ಪತ್ರ ಬರದಿದ್ದರೆ ಏನು ಮಾಡಬೇಕು?

ಇಂದು ಗುರೂಮಾಮಾ ಬಂದ. ರಾಮಣ್ಣನ ಸುದ್ದಿಯನ್ನೆಲ್ಲ ಹೇಳಿದ. ರಾಮಣ್ಣ ಒಬ್ಬ ಸಾರಸ್ವತ ಕನ್ಯೆಯಲ್ಲಿ ಅನುರಕ್ತನಾಗಿದ್ದಾನಂತೆ. ಅವಳಿಗೆ ಮದುವೆಯಾಗಲು ಮನವೊಲಿಸುವಂತೆ ಪತ್ರವನ್ನೂ ಬರೆದಿದ್ದಾನೆ. ಗುರೂಮಾಮಾನ ಅಭಿಪ್ರಾಯದ ಮೇರೆಗೆ ಇದೆಲ್ಲ ಅಸ್ವಾಭಾವಿಕ. ಅವನು ಹಳೆಯ ಕಾಲದ ಮನುಷ್ಯ. ಆಗ ಇಂಥ ಸಂಗತಿಗಳು ಜರುಗುತ್ತಿರಲಿಲ್ಲ ನಿಜ. ಆದರೆ ಈಗಲೂ ನಡೆಯುವದಿಲ್ಲವೆಂದು ಹೇಗೆ ಹೇಳಬೇಕು? ಗುರುಮಾಮಾನ ದೃಷ್ಟಿಯಲ್ಲಿ ಇವೆಲ್ಲ ಸಿನೆಮಾದಲ್ಲಿ ನಡೆಯುವ ಘಟನೆಗಳು ಇರಬಹುದು. ಆದರೆ ಸಿನೇಮಾ ನಮ್ಮ ಜೀವನದಲ್ಲಿ ಕ್ರಾಂತಿಯನ್ನುಂಟುಮಾಡಿಲ್ಲವೇ? ಇದನ್ನು ನೆನೆದಾಗ ನನಗೆ 'Oscar Wilde' ಹೇಳಿದ "Life imitates art" ಎಂಬ ಮಾತು ಸರಿಯೆನಿಸುತ್ತದೆ. ಏನೇ ಆಗಲಿ ಅಣ್ಣನ ಈ ಪ್ರಸಂಗದಿಂದ ನನ್ನ ಕಾದಂಬರಿ ಮುಂದುವರಿಯಲು ಒಂದು ಮಾರ್ಗ ಸಿಕ್ಕಂತಾಯಿತು.

---

## ಪ್ರಕರಣ : ೫

ತನ್ನ ಹೃದಯಾಂತರಾಳದಲ್ಲಿ ನಡೆಯುತ್ತಿರುವ ಭಾವನೆಗಳ ತಾಕಲಾಟ ವನ್ನು ಕರುಣಾ ಅರಿಯಲಿಲ್ಲ. ಅರಿಯಲು ಸಾಧ್ಯವೂ ಇರಲಿಲ್ಲ. ತನ್ನಲ್ಲಾದ ಒಂದು ಪರಿವರ್ತನೆಯನ್ನು ಮಾತ್ರ ಅವಳು ತಿಳಿದಳು.

....ಸುಧಾಕರ ತನ್ನ ಮಾನಸಮೂರ್ತಿಯಾಗಿದ್ದಾನೆಂಬುದು ಮಾತ್ರ ಅವ ಳಿಗೆ ಸ್ಪಷ್ಟವಾಯ್ತು. ಅದು ಹೇಗೆ ? ಎಂಬುದಕ್ಕೆ ಅವಳಿಗೆ ಉತ್ತರ ದೊರೆಯಲಿಲ್ಲ. ಅವಳ ವಿಚಾರಗಳಲ್ಲಿ ವಸ್ತುಸ್ಥಿತಿಯನ್ನರಿಯುವ ವಿವೇಕಕ್ಕಿಂತ ಭಾವವಶತೆಯ ಹೆಚ್ಚು ಇತ್ತೆಂದರೆ 'ತಪ್ಪಾಗಲಾರದು. ಪ್ರಾಯಾವಸ್ಥೆಯಲ್ಲಿ ಕಾಲಿರಿಸುತ್ತಿದ್ದ ಕರುಣಳಲ್ಲಿ ಆಕರ್ಷಣೆ, ಸೆಳೆತ, ಹುಟ್ಟುವದು ಸ್ವಾಭಾವಿಕ.

...ಪುರುಷರನ್ನು ನೋಡಬೇಕು, ಪರಿಚಿತ ಪುರುಷರೊಂದಿಗೆ ಮಾತನಾಡ ಬೇಕು, ಎಂದೆನಿಸುವದು ಪ್ರಾಯದ ಗುರುತು. ತಾನು ಆಕರ್ಷಿತಳಾಗಬೇಕೆಂಬ ಬಯಕೆ ಮೂಡುತ್ತದೆ. ಪ್ರೀತಿ, ಪ್ರೇಮ, ಸರಸ, ಮಧುರಸಲ್ಲಾಪ, ಚೆಲ್ಲಾಟ – ಹೀಗೆ ಅನೇಕ ಮೃದುಭಾವನೆಗಳು, ವಿಚಾರಗಳು, ತೆರೆತೆರೆಯಾಗಿ ಹರಿಯುತ್ತವೆ. ಆ ಎಲ್ಲ ಭಾವನಾ ಸಮೂಹಕ್ಕೆ ಕೇಂದ್ರವ್ಯಕ್ತಿಯೊಂದು ದೊರಕಿರುವದಿಲ್ಲ. ಅದಕ್ಕೆ ಅದು ಅಸ್ಪಷ್ಟವಾಗಿರುವದು.

....ಕ್ರಮೇಣವಾಗಿ ಇವೇ ಭಾವಗಳ ಲೋಕದಲ್ಲಿ ಸದಾ ತೇಲುತ್ತಿರುವಾಗ ಯಾವುದೋ ಒಂದು ಸುಂದರ ವ್ಯಕ್ತಿ ಸುಳಿಯುತ್ತದೆ. ಚೆಲುವು, ಗುಣ, ಸ್ವಭಾವ, ರಸಿಕತೆ, ಅಭಿರುಚಿ – ಇವೆಲ್ಲವುಗಳಲ್ಲಿ ತನ್ನ ಒಲವಿನ ಮೂರ್ತಿ ಹೇಗೆ ಇರಬೇಕು, ಎಂಬ ಕಾಲ್ಪನಿಕ ಚಿತ್ರ ಮೊದಲು ಮೂಡಿರುತ್ತದೆ. ಅತಿ ಚೆಲುವ, ಆದರೆ ಸ್ಪಷ್ಟ ಆಕಾರವಿಲ್ಲ ! ಹೀಗೆ ರೂಪವಿಲ್ಲದ, ಆಕಾರವಿಲ್ಲದ ಕಾಲ್ಪನಿಕ ಲೋಕದಲ್ಲಿಯ 'ಅನಂಗ' ಕ್ರಮೇಣವಾಗಿ ಸಾಕಾರನಾಗುತ್ತಾನೆ.

....ಹೀಗೆ ಸುಧಾಕರ ಕರುಣಳಲ್ಲಿ ಪ್ರೇಮದ ಆಸ್ಥಾನ ಪಡೆದ. ಅರಳುವ ಯೌವನ ಅವಳಲ್ಲಿ ನೈಸರ್ಗಿಕವಾದ ಆಶೆಯನ್ನರಳಿಸಿತ್ತು. ಆ ಆಸೆಗೆ ಮನದ ಹಲವಾರು ಕೋಮಲಭಾವನೆಗಳು ನೀರುಂಡು ಪಲ್ಲವಿಸಿದವು. ಆತನ ಮೆಲ್ಮಾತು, ಸುಂದರ ಮುಖ, ನಡಿಗೆ, ಮೃದುನಗೆ – ಇವೆಲ್ಲ ಕರುಣಳಲ್ಲಿ ವಿಲಕ್ಷಣ ಬದಲಾ ವಣೆಯುನ್ನುಂಟುಮಾಡಿದವು.

...ಆತ ಅವಳೊಂದಿಗೆ ಒಮ್ಮೆಯೂ ಮಾತನಾಡಿರಲಿಲ್ಲ. ಆದರೂ ಆತ ತನ್ನ ಜನ್ಮಾಂತರದ ಪರಿಚಿತನೆಂದು ಆಕೆ ಭಾವಿಸಿದಳು. ಅವಳ ಭಾವಗಳು ತೊಡಿಸಿದ ಉಡಿಗೆಗಳಲ್ಲಿ ಸುಧಾಕರ ಅವಳ ಚಂದ್ರನಾದ; ತಾನು ರೋಹಿಣಿ ಯಾದಳು. ಮೊದಮೊದಲು ಇಂತಹ ರಮ್ಯಕಲ್ಪನೆ ಕಟ್ಟುವದರಲ್ಲಿ ಅವಳಿಗೆ ಒಂದು ಬಗೆಯ ಸೊಗಸು ಕಾಣುತ್ತಿತ್ತು; ಬರಬರುತ್ತ ಹೆಚ್ಚು ಹೊತ್ತು ಇಂತಹ ಕನಸಿನಲ್ಲಿಯೇ ಕಳೆಯಹತ್ತಿದಳು.

....ಅದು ಅವಳಿಗೆ ಎಂದೂ ಅನುಭವಿಸದ ಸುಖವನ್ನು ಕೊಡುತ್ತಿತ್ತು. ಆ ಭಾವೋನ್ಮಾದದಲ್ಲಿ ಅವಳಿಗೆ ಆ ಲೋಕ ರಮ್ಯವಾಗಿ ತೋರುತ್ತಿತ್ತು. ಆ ಲೋಕದಲ್ಲಿ ಸಂಚರಿಸುವವರೆಂದರೆ ಅವರಿಬ್ಬರೇ! ಈ ಭಾವಾವೇಗದಲ್ಲಿ ಸುಖ ಪಡೆದಷ್ಟೂ ಅತೃಪ್ತಿ ಹೆಚ್ಚಾಯಿತು. ಆದೆಲ್ಲ ಕೇವಲ ಸ್ವಪ್ನಲೋಕದ ಸುಖ ವೆಂಬುದರ ಅರಿವು ಮೂಡಿದಾಗ ನಿಟ್ಟುಸಿರುಬಿಡುತ್ತಿದ್ದಳು. ಕನಸಿನ ಲೋಕ ದಿಂದ ಒಮ್ಮೆಲೆ ಕೆಳಗಿಳಿದಂತೆ ಪ್ರಪಂಚವೆಲ್ಲ ಅವಳಿಗೆ ಜಡವಾಗಿ ತೋರುತ್ತಿತ್ತು; ನಿರಾಸೆಯಾಗುತ್ತಿತ್ತು; ಬೇಸರ ಬರುತ್ತಿತ್ತು. ಮನದಲ್ಲಿ ಕೆರಳಿ ನಿಲ್ಲುತ್ತಿದ್ದವು ಅನೇಕ ಆಸೆಗಳು. ಆ ಆಸೆಗಳನ್ನೆಲ್ಲ ಈಡೇರಿಸಿಕೊಳ್ಳಲು ಮತ್ತೆ ತನ್ನ ಸ್ವಪ್ನ ಮಂದಿರಕ್ಕೆ ಕಾಲಿರಿಸುತ್ತಿದ್ದಳು.

.... ಆ ಸ್ವಪ್ನಮಂದಿರವನ್ನು ಕಟ್ಟಿದ ಮೃದುಭಾವನೆಗಳ ಎಳೆಗಳ ಸೊಬ ಗನ್ನು ಮೊದಮೊದಲು ದೂರಿನಿಂದ ನೋಡುತ್ತಿದ್ದಳು. ಆದರೆ ಆ ಭಾವಜಾಲ ಅವಳಿಗರಿಯದಲೆ ಅವಳನ್ನೆ ಸೆಳೆಯಿತು. ತಾನು ನೆಯ್ದ ಜಾಲದಲ್ಲಿ ತನ್ನದೇ ಸೆರೆ ಯಾಯಿತು. ಅವಳ ಮನಸ್ಸಿಗೆ ಅದರಿಂದ ಹೊರಬರಲು ಸಾಧ್ಯವಾಗಲಿಲ್ಲ.

....ದಿನಗಳೆದಂತೆ ಆರಾಧ್ಯಮೂರ್ತಿಯ ಧ್ಯಾನದಲ್ಲಿ ಮಗ್ನಳಾಗಹತ್ತಿದಳು. ಇದರಿಂದ ಯಾವ ಪ್ರಯೋಜನವಾದೀತು? ಎಂದು ವಿವೇಕ ಹೇಳಿದಾಗ ಕಂಬನಿಗರೆಯುತ್ತಿದ್ದಳು. ಅವಳಿಗೆ ಅದೇ ಒಂದು ಕೊರಗಾಯ್ತು; ಬೇಡದ ಕೊರಗಲ್ಲ! ಬೇಡಿ-ಬಯಸುವ ಕೊರಗು. ಆ ಕೊರಗಿನಲ್ಲಿಯೇ ಸುಖದ ಭ್ರಾಂತಿ ಮೂಡುತ್ತಿತ್ತು.

....ಇದರ ಪರಿಣಾಮ ಗಂಭೀರವಾಗತೊಡಗಿತು. ಬೆಳಗಿನ ಚಳಿಗೆ ಎಚ್ಚ ರಾದರೂ ಕಣ್ಣು ತರೆಯದೆ ಮತ್ತೆ ಮುಸುಕೆಳೆದು ತನ್ನ ರಮ್ಯಭಾವಗಳೊಂದಿಗೆ ಸರಸವಾಡಹತ್ತಿದಳು. ಅಭ್ಯಾಸದಲ್ಲಿ ಆಸಕ್ತಿ ಕಡಿಮೆಯಾಯ್ತು; ಕೆಲಸವಂತೂ

ಇನ್ನೂ ಬೇಡವಾಯ್ತು. ತನ್ನ ಹೃದಯದ ಕೊರಗನ್ನೆಲ್ಲ ತಂಬೂರಿಯ ಧ್ವನಿಯಲ್ಲಿ ತೇಲಿಬಿಡುತ್ತಿದ್ದಳು ಅನೇಕ ಬಾರಿ.

ಒಂದು ದಿನ ಕಾಲೇಜಿನಿಂದ ತಿರುಗಿ ಬರುತ್ತಿದ್ದಳು. ದಾರಿಯಲ್ಲಿ ಅಕಸ್ಮಾತ್ತಾಗಿ ಸುಧಾಕರನನ್ನು ಕಂಡಳು. ಎದೆ ಬಡಿದುಕೊಳ್ಳಹತ್ತಿತು. ತನ್ನ ಮನವ ಸೆಳೆದ ಮೂರ್ತಿಯನ್ನು ಹೃದಯದಲ್ಲಿ ತುಂಬಿಸಿಕೊಳ್ಳುವ ಬಯಕೆಗಳಿಂದ ಆತನೆಡೆಗೆ ನೋಡಿದಳು, ಮಾತನಾಡಿಸಬೇಕೆಂದು ಆತುರಪಟ್ಟಳು. ಸಮೀಪದಿಂದ ನೋಡಬೇಕೆಂದು ಬಯಸಿದಳು. ಸಮೀಪ ಬಂದಂತೆ ಅವಳ ಮೈಯಲ್ಲಿ ಒಂದು ನಿಮಿಷ ಥರಗುಟ್ಟಿತು.

ಮನದಲ್ಲಿ ಬಯಕೆಗಳು ನೂರಾರು ಮೂಡಿ ಬಂದರೂ, ಅವಳಿಂದ ಒಂದನ್ನೂ ಈಡೇರಿಸಿಕೊಳ್ಳಲಾಗಲಿಲ್ಲ. ಆತನನ್ನು ಮಾತನಾಡಿಸಲಿಲ್ಲ. ಬರಿ ನೋಡಿದಳು ಮಾತ್ರ, ಒಂದು ಬಾರಿ. ಆತ ತೀರ ಸಮೀಪಕ್ಕೆ ಬಂದ. ಕರುಣಳನ್ನು ನೋಡಿ ಮಾತನಾಡಿಸಬೇಕೆಂದಿದ್ದನೇನೋ ! ಕರುಣಾ ದೃಷ್ಟಿಯನ್ನೆತ್ತಲಿಲ್ಲ. ಆತನಿಗೆ ಸಂಕೋಚವಾಯ್ತು, ಅದೇನಾಯಿತೋ ತಿಳಿಯದು. ಆಕೆ ಈ ಹೊಯ್ದಾಟದಲ್ಲಿರುವಾಗಲೇ ಆತ ಮುಂದೆ ನಡೆದುಬಿಟ್ಟ.

ದೂರ ಹೋಗಿ ಕರುಣಾ ತಿರುಗಿದಳು ! ಅಲ್ಲೇನಿದೆ? ತಾನೆಂತಹ ಹುಚ್ಚಿ! ಮಾತನಾಡಿಸಬಹುದಿತ್ತಲ್ಲ ಎಂದುಕೊಂಡಳು. ಸುಧಾಕರನ ದರ್ಶನ ಅವಳಿಗೆ ಮತ್ತೆ ಹಳೆಯ ನೆನಹುಗಳನ್ನು ತಂದುಕೊಟ್ಟಿತು. ಮೊದಲಿಗಿಂತ ರಮ್ಯವಾಗಿ, ದಿವ್ಯವಾಗಿ ಅವಳ ಹೃದಯದಲ್ಲಿ ಮೂಡಿನಿಂತ ಆತ.

ಮನೆಗೆ ಬಂದಾಗ ಸಂಜೆಯಾಗಿತ್ತು: ಸಂಜೆಯ ಬೆಳಕಿನಲ್ಲಿ ಬೆಡಗು ಪಡೆದು ತೇಲುವ ಬಣ್ಣಬಣ್ಣದ ಮುಗಿಲುಗಳಂತೆ ಅವಳ ಮನದ ಭಾವಗಳು ಮೆರಗು ಪಡೆದಿದ್ದವು. ಬಂದವಳೆ ತನ್ನ ಕೋಣೆಗೆ ನಡೆದಳು. ದೀಪವನ್ನು ಹಚ್ಚಲಿಲ್ಲ. ಹಾಗೆಯೇ ತಲೆದಿಂಬಿಗೆ ಒರಗಿ ಕುಳಿತಳು.

....ಮತ್ತೆ ಮೊದಲಿನ 'ಬೇಸರ' ಬಂದಿತು. ಈ ಬೇಸರ ಅವಳಿಗೆ ಬೇಡವಾಗಿರಲಿಲ್ಲ.

* * *

ಚಳಿಗಾಲದ ಕೊನೆಯ ದಿನಗಳು ಸಮೀಪಿಸಹತ್ತಿದ್ದವು. ಆ ಸಂಜೆ ಕರುಣಳಿಗೆ ಬೇಸರವಾಗಿತ್ತು. ತಿರುಗಾಡಿಕೊಂಡು ಬರಬೇಕೆಂದು ನಡೆದಳು. ಊರ

ಹೊರಗಿನ ಒಂದು ತೋಪು. ಆ ತೋಪಿನ ಬಳಿಯಲ್ಲಿಯೇ ಚಿಕ್ಕದಾದ ಒಂದು ನೀರಿನ ಹೊಂಡ.

ಮಾಮರ ಕೋಗಿಲೆಯು ಬರನಿಗಾಗಿ ಕಾದಿದ್ದವು. ಒಂದು ಮಾಮರದ ಕಾಂಡಕ್ಕೆ ಒರಗಿ ಕುಳಿತಳು. ಕತ್ತಲೆಯಿನ್ನೂ ಆಗಿರಲಿಲ್ಲ. ಆರಕ್ತ ಸೂರ್ಯಬಿಂಬ ವನ್ನು ದಿಟ್ಟಿಸಿ ನೋಡಬಹುದಿತ್ತು. ಆ ಸಂಧ್ಯಾರುಣಛಾಯೆ ನೆಲಮುಗಿಲುಗಳಲ್ಲಿ ತುಂಬಿತ್ತು. ತಾನುಟ್ಟ ಬಿಳಿಸೀರೆಯೆಡೆಗೆ ನೋಡಿಕೊಂಡಳು. ಆ ಕೆಂಬೆಳಕಿನಲ್ಲಿ ಮೋಹಕವಾಗಿ ಕಂಡಿತು. ತನ್ನ ಕೈಗಳನ್ನು ನೋಡಿಕೊಂಡಳು; ಹೆಚ್ಚು ಕೆಂಪಾಗಿ ಕಂಡವು.

ಅನ್ಯ ಮನಸ್ಕಳಾಗಿ ಅತ್ತ ಇತ್ತ ಕಣ್ಣು ಹೊರಳಿಸುತ್ತ ಕುಳಿತಿರುವಾಗ ಅನತಿದೂರದಲ್ಲಿ ಸುಧಾಕರ ಬರುತ್ತಿರುವವನ್ನು ಕಂಡಳು. ಇದೇನು ಸ್ವಪ್ನವೆ? ಇದೆಂತಹ ಅನ್ಯತಗಳಿಗೆ!

ಕೆಲನಿಮಿಷ ಕಳೆದುವು. ಆತ ಸಮೀಪಕ್ಕೆ ಬಂದ. ಓ! ಆ ಕೆಂಬೆಳಕಿನಲ್ಲಿ ಕಾಂತಿವಡೆದ ಆ ಮುದ್ದು ಮುಖ! ತನ್ನ ಒಳಗಿನ ಉದ್ವೇಗವನ್ನು ತಡೆ ಹಿಡಿದಷ್ಟೂ ಅಧೀರತೆ ಅವಳನ್ನಾವರಿಸಿತು. ಆದರೂ ಆತ ಎದುರಿಗೆ ಬರುತ್ತಿರು ವಾಗಲೆ ಸಾವರಿಸಿಕೊಂಡು ಎದ್ದು ನಿಂತು "ನಮಸ್ಕಾರ" ಎಂದು ಮುಗುಳು ನಗೆ ಸೂಸಿ ನುಡಿದಳು.

"ಓ! ನಮಸ್ಕಾರ." ಎಂದ ಆತ.

"ತಿರುಗಾಡಲು ಬಂದಿದ್ದೀರಾ?" ಎಂದು ಗೊತ್ತಿದ್ದರೂ ಮಾತಿನ ನೆವ ಕ್ಕೆಂದು ತುಸು ಮುಖವನ್ನು ಮೇಲೆತ್ತಿ ಕೇಳಿದಳು.

"ಹೌದು. ಬೇಜಾರಾಗಿತ್ತು, ಬಂದೆ. ನೀವು?" ಮರುಸವಾಲು ಬಂತು.

"ನನಗೂ ಅದೇ .... ಕುಳಿತುಕೊಳ್ಳಬಹುದಲ್ಲ?" ಕೊರಳು, ಕಣ್ಣು ಕೊಂಕಿಸಿದಳು.

ಸುಧಾಕರ ಕುಳಿತುಕೊಂಡ. ಅವನಿಂದ ಒಂದೆರಡು ಮಾರು ದೂರದಲ್ಲಿ ಕರುಣಾ ಕುಳಿತಳು. ಆತನೊಡನೆ ತಾನು ಮುಂದೆ ಆಡಬೇಕಾದ ಮಾತುಗಳನ್ನು ವಾಕ್ಯದಲ್ಲಿ ಅದೆಷ್ಟೋ ಬಾರಿ ಮನಸ್ಸಿನಲ್ಲಿ ರಚಿಸಿಕೊಂಡರೂ ಚಿಕ್ಕ ಮಗುವಿನ ಮುಷ್ಟಿಗೆ ಸಿಗದೆ ಉರುಳಿ ಉರುಳಿ ಹೋಗುತ್ತಿರುವ ಜೋಳದ ಕಾಳುಗಳಂತೆ ಚಲ್ಲಾಪಿಲ್ಲಿಯಾಗಿ ಹೋಗುತ್ತಿದ್ದವು. ಒಂದೂ ಉಳಿಯುತ್ತಿರಲಿಲ್ಲ. ಶಬ್ದಗಳು

ಹುಟ್ಟುವದರಲ್ಲಿಯೆ ಕರಗಿ ಹೋಗುತ್ತಿದ್ದವು. ಕರುಣಾ ಮಾತು ಒಂದೂ ಬಾರದೆ ವಿಲಿವಿಲಿಯಾದಳು.

"ಆ ದಿನ ನಿಮ್ಮ ಸಂಗೀತ ಬಹಳೇ ಮೋಹಕವಿತ್ತು ..." ಸುಧಾಕರನೇ ಮಾತನಾಡಿದ

ಕರುಣಳ ಹೃದಯ ನೂರು ಛಂದದಲಿ ಕುಣಿಯಿತು. ಅವಳಿದೆ ಅವನ ಮಾತನ್ನು ನೂರು ಬಾರಿ ಮತ್ತೆ ಮತ್ತೆ ನುಡಿಯಿತು. ಕೃತಜ್ಞತೆಯಿಂದಲೋ ಲಜ್ಜೆಯಿಂದಲೋ ಅವಳ ಕಣ್ಣಾಲೆಗಳು ಅರೆಮುಚ್ಚಿಕೊಂಡವು.

"ನನ್ನ ಹಾಡು ನಿಮಗೆ ಸೇರಿತೇ ?" ಧೈರ್ಯ ತಂದುಕೊಂಡು ಕೇಳಿದಳು. ಅವಳ ಧ್ವನಿಯಲ್ಲಿ ಬೇಡಿಕೆಯಿತ್ತು.

"ನನಗಂತೂ ಅದು ಹುಚ್ಚು ಹಿಡಿಸಿದೆ...."

"ಅದು ನಿಮಗೆ ಹುಚ್ಚು ಹಿಡಿಸಿದ್ದರೆ, ನೀವು ನನಗೆ ಹುಚ್ಚು ಹಿಡಿಸಿದ್ದೀರಿ...." ಎಂದ ಉತ್ತರಿಸಬೇಕೆಂದು ನಾಲಗೆಯ ತುದಿಯವರೆಗೂ ಬಂದಿತ್ತು. ಆದರೆ ಒಳಗೇ ಇಂಗಿದವು ಮಾತು.

ಇಷ್ಟಾದ ನಂತರ ಮುಂದೇನು ಮಾತನಾಡಬೇಕೋ ಇಬ್ಬರಿಗೂ ತೋಚದಂತಾಯ್ತು. ಸುಧಾಕರ ಅವಳೆಡೆಗೆ ನೋಡಲು ಹಿಂಜರಿಯುತ್ತಿದ್ದ. ತುಸು ಮಾಮರದಾಚೆಗಿದ್ದ ಆಕಾಶದ ಕಡೆಗೆ ಹೊರಳಿದ ಆತನ ಮುಖವನ್ನು ಕರುಣಾ ನೋಡಿದಳು. ಮತ್ತೆ ಮತ್ತೆ ನೋಡಿದಳು.

....ಎಂತಹ ವಿನಯ ಮಾತಿನಲ್ಲಿ!

....ಮಾತಿನಲ್ಲಿಯೇ ಮನುಷ್ಯನ ಹೃದಯ ಮೂಡುವದೆಂಬ ಮಾತು ಸುಳ್ಳಲ್ಲ!

....ಅದೆಂತಹ ಮೋಡಿ ಆತನ ಕಂಗಳಲ್ಲಿ!

ಕರುಣಳಿಗೆ ಅನಿಸಿದ್ದಿದು. ಅವಳ ಮನದಲ್ಲಿ ಅಂದು ಆ ದಿನ, ಬಿಂಬಿಸಿದ ದಿವ್ಯ ಮೂರ್ತಿ, ಈ ದಿನ ಎದುರಿನಲ್ಲಿಯೇ ಇದೆ!

ಸುಧಾಕರ ಮುಖ ಹೊರಳಿಸಿದ ಅವಳೆಡೆಗೆ.

ಕರುಣಾ ಅವನನ್ನು ಹಾಗೆಯೇ ನೋಡುತ್ತಿದ್ದಳು.

ನಾಲಗೆ ಹೇಳದುದನ್ನು ಕಂಗಳುಗಳು ಹೇಳುತ್ತಿದ್ದವು.

"ನಾನು ನಿಮ್ಮ ಆರಾಧಕಳು...." ಎನ್ನುವ ಅವಳ ಭಾವಪೂರ್ಣ ನೋಟ

ಅಚಲವಾಗಿತ್ತು. ಸುಧಾಕರನ ಕಂಗಳುಗಳಲ್ಲಿ ಕರುಣಾ ಅನಂತ ಪ್ರೀತಿ, ಅಭಯ ಗಳನ್ನು ಕಂಡುಕೊಂಡಳು. "ನನ್ನ ಸ್ವಾಮಿ, ನನ್ನನ್ನು ಸ್ವೀಕರಿಸಿದ್ದಾನೆ" ಎಂಬ ನಿರ್ಮಲ ಸ್ವಾರ್ಪಣೆಯ ಉಜ್ವಲ ಭಾವನೆ ಅವಳ ಎದೆ ತುಂಬಿ ನಿಂತಿತು.

ಇಷ್ಟೆಲ್ಲ ಭಾವಪರಿಪಾಕಗೊಂಡುದು ಅರೆಕ್ಷಣದಲ್ಲಿಯೇ.

"ಯಾವಾಗಾದರೂ ನಮ್ಮ ಮನೆಗೆ ಬರಬಹುದಲ್ಲ ? " ಎಂದಳು ಮೆಲ್ಲು-ಸಿರಿನಲ್ಲಿ.

"…………"

"ಅಭ್ಯಾಸಕ್ಕೆ ತೊಂದರೆಯೇನೋ! ಆದರೂ ಯಾವಾಗಲಾದರೊಮ್ಮೆ…."

"ಹುಂ. ಆದರೆ ನೀವು ಹಾಡಿದರೆ ಮಾತ್ರ…."

"ಬಂದರೆ ಹಾಡುತ್ತೇನೆ." ಕಾಲಹೆಬ್ಬೆಟ್ಟನಿಂದ ನೆಲ ಕೆದರುತ್ತ, ಕೆದರಿದ ಮಣ್ಣನ್ನೇ ದಿಟ್ಟಿಸಿ ಹೇಳಿದಳು. ಆದರೂ "ಹೃದಯವೆಲ್ಲ ವೀಣೆಯಾಗಿ ನುಡಿಯುತ್ತೇನೆ. ನನ್ನ ಕೊರಳ ಹಾಡಿಗಿಂತ ನನ್ನೆದೆಯ ಒಲವಿನ ಮಧುರರಾಗದಲ್ಲಿ ನಿಮ್ಮನ್ನು ಮೀಯಿಸುತ್ತೇನೆ. ನನ್ನೊಲವಿನ ಅಮೃತೋದಕದಿಂದ ನಿಮ್ಮನ್ನು ಪೂಜಿಸುತ್ತೇನೆ" ಎಂದು ಮಾತ್ರ ತನ್ನೊಳಗೆ ಅಂದುಕೊಂಡಳು.

ಅದೆಷ್ಟೋ ಅರ್ಥವಾಗದ ಭಾವನೆಗಳು ಅವಳಲ್ಲಿ ತೆರೆಯೆದ್ದು ಬರುತ್ತಿದ್ದವು. ಅವುಗಳ ಅನುಭವ ಯಾವ ತರಹದ್ದೊ ಹೇಳಲು ಬರುವಂತಿರಲಿಲ್ಲ.

ಸುಧಾಕರನ ಮಾತು, ನೋಟಗಳಲ್ಲಿ ತನ್ನೆಡೆಬಯಕೆಯ, ಅಭಯ ಕಂಡಳು. ಆಗ ಜೀವನ ಒಂದು ಸಂಗೀತಲಹರಿಯಂತೆ ಅವಳಿಗೆ ಭಾಸವಾಯಿತು.

ಈಗ ಅವನೆಡೆಗೆ ನೋಡಿದಾಗ ಅಪರಿಚಿತನಂತೆ ನೋಡಲಿಲ್ಲ. ಯುಗಾಂ-ತರಗಳಿಂದ ಜೊತೆಗೂಡಿಬಂದ ತನ್ನ ಹೃದಯರಮಣನನ್ನು ಕಂಡಂತೆ ಕಂಡಳು.

ಇರಿವೆ ಬಂತೆಂಬ ನೆಪಹೂಡಿ ಆತನ ಬಳಿ ಸ್ವಲ್ಪ ಸರಿದಳು.

ಸುಧಾಕರ ಅವಳೆಡೆಗೆ ನೋಡಿದ. ಅವಳ ಕೈಬೆರಳು ನಡುಗುತ್ತಿದ್ದವು, ತನ್ನ ಕೈಗೆ ಆಕೆಯ ಕೈ ತಾಕಿದ್ದಕ್ಕೆ.

ಒಂದು ಕ್ಷಣ ಮೌನವಾಗಿದ್ದರು. ಸುಧಾಕರ ಕೈ ಹಿಂತೆಗೆದುಕೊಳ್ಳಲಿಲ್ಲ.

ಕಂಪನಗಳ ದುಗುಡ, ಭಯ ಮಾಯವಾದವು.

ಅವುಗಳ ಸ್ಥಳದಲ್ಲಿ ನಿರ್ಭಯ ಆತ್ಮೀಯ ಭಾವ ಅಂಕುರಿಸಿತ್ತು.

ಇಬ್ಬರೂ ಮಾತನಾಡಲಿಲ್ಲ.

ಗಿರಿಕಂದರಗಳಲ್ಲಿ ಭೋರ್ಗರೆಯುತ್ತ ಹರಿವ ತೊರೆ, ಬಯಲು ಪ್ರದೇಶಕ್ಕೆ ಬಂದು ಶಾಂತವಾಗಿ ಪ್ರವಹಿಸಹತ್ತಿತು.

ಆ ಪ್ರವಾಹಕ್ಕೊಂದು ನಿರ್ದಿಷ್ಟ ಗತಿ ದೊರೆಯಿತು; ಅದು ವಿಸ್ತಾರ ಪಡೆಯಿತು.

''ನೀವು ನನ್ನಲ್ಲಿ....''ಎಂದು ಸುಧಾಕರ ಹೇಳುತ್ತಿರುವಾಗ ಕರುಣಾ ಮಧ್ಯ ದಲ್ಲಿಯೇ "'ನೀವು' ಎಂದೇಕೆ ಕರೆಯುತ್ತೀರಿ ನನ್ನನ್ನು ?" ಹುಸಿಮುನಿಸಿನಿಂದ ಕೇಳಿದಳು.

''ಅಲ್ಲ....ನಾ–ನು....'' ಆತನಿಗೆ ಹೇಳಲು ಬರದಂತಾಯ್ತು.

''ನಿಮ್ಮನ್ನು ಮೊದಲು ಬಾರಿ ಕಂಡಾಗಲೆ ನನ್ನ ಹೃದಯ ಕಂಪಿಸಿತು. ನೀವೆನ್ನ ಸ್ವಾಮಿಯೆಂದು ನನ್ನಂತರಂಗ ಮಿಡಿಯಿತು. ಆ ಒಂದು ಕ್ಷಣ.... ಅದು ದೈವಸಂಕೇತವೆಂದೇ ನನ್ನ ಭಾವನೆ. ಅಂದು ಸಂಗೀತ ಕೇಳಲು ಬಂದಿ ದ್ದಿರಲ್ಲವೇ ? ಅಂದೇ ನೀವೆನ್ನ ದೈವವಾದಿರಿ. ನನ್ನ ಸಮಸ್ತ ಹೃದಯದಲ್ಲಿ ಪ್ರೇಮಭಾವವನ್ನು ಬೆಳಗಿದಿರಿ. ನಿಮ್ಮ ನೋಟದಿಂದ ನನ್ನ ಬದುಕು ಬೆಳಗಿತು. ನೀವು ಈ ವರೆಗೆ ನನ್ನೊಡನೆ ಒಂದು ಮಾತನ್ನೂ ಆಡಿರಲಿಲ್ಲ. ಆದರೂ ನಿಮ್ಮ ನೋಟ ಮಾತಿಗಿಂತ ಮೃದು, ಅರ್ಥಪೂರ್ಣವಾಗಿದ್ದವು....''

ಸುಧಾಕರ ದಿಗಿಲುಗೊಂಡವನಂತೆ ಕುಳಿತಿದ್ದ.

"ಯಾಕೆ, ನನ್ನ ಮೇಲೆ ಅಸಮಾಧಾನವೇ?" ಕ್ಷೀಣಸ್ವರದಲ್ಲಿ ಕೇಳಿದಳು.

ಅವಳೆಡೆಗೆ ಮುಖ ಬಾಗಿಸಿದ.

ಬಿಸಿಯುಸಿರು ಹಿತವಾಗಿ ಅವಳ ಕೆನ್ನೆಯಮೇಲೆ ಹಾಯ್ದು ಹೋಯ್ತು. ನಿಶ್ಚಲ ಕೊಳದ, ಸ್ಫಟಿಕದಂತಿರುವ ನೀರನ್ನು ಪಾರಿಜಾತದಿಂದ ಮೃದುವಾಗಿ ಕಲಕಿದಂತಾಯ್ತು.

ಕರುಣಾ ಆತನೆಡೆಗೆ ಒರಗಿದಳು. ತನುವೆಲ್ಲ ಕರಗಿ ಪ್ರೇಮವಾಗಿ ಹರಿ ಯಿತು. ಒರಗಿದಲ್ಲಿಂದಲೆ ಮುಖವನ್ನು ಮೇಲೆತ್ತಿದಳು.

''ಕರುಣಾ....!''ಮೆಲುದನಿ ಹೊರಸೂಸಿತು.

ಬಾನೆಲ್ಲ ಕಾಮನಬಿಲ್ಲಿನಿಂದ ಬೆಳಗಿದಂತಾಯ್ತು ಕರುಣಳಿಗೆ. ಆ ಶಬ್ದ

ದಲ್ಲಿ ಅಮೃತದ ಸವಿಯನ್ನುಂಡಳು. ತನ್ನ ತಂಬೂರಿ ಸದಾಕಾಲ ಅದನ್ನೆ ನುಡಿಯುತ್ತಿರಬೇಕೆಂದು ಬಯಸಿದಳು.

ಮತ್ತೊಂದು ಬಾರಿ ಅದನ್ನು ಕೇಳಬಯಸಿದಳು. ಕೇಳಿಯೂ ಕೇಳದಂತೆ ನಟಿಸಿದಳು.

"ಕ—ರು—ಣಾ...."

ಆ ನುಡಿಯಲ್ಲಿ ಕಾವ್ಯದ ಮಾಧುರ್ಯ, ಸಂಗೀತದ ಇಂಪನ್ನು ಕಂಡಳು.

"ಕ—ರು—ಣಾ...." ನಭವೆಲ್ಲ ಮಂಜುಳವಾಗಿ ನುಡಿದಂತಾಯ್ತು.

"ಕ—ರು—ಣಾ !"

ಸಿಡಿಲೆರಗಿದಂತೆ ಶಬ್ದವಾಯ್ತು. ಮಿಂಚಿನ ಬೆಳಕಾಡಿತು.

ಕೋಣೆಯ ಬಾಗಿಲು ತೆರೆದು ಅರುಣಾ ಒಳಗೆ ನಿಂತಿದ್ದಳು. ದೀಪ ಹತ್ತಿತು. ಗಾಬರಿಯಾಗಿ ಕರುಣಾ ಎದ್ದು ಕುಳಿತಳು.

ಕರುಣಳನ್ನು ನೋಡಿ ಅರುಣಳೆದೆ ಭಯಗೊಂಡಿತು. ಸರ್ರನೆ ಒಳ ಬಂದಳು.

"ಏನಾಗಿದೆ ಕರುಣಾ ? ಮೈಯಲ್ಲಿ ನೆಟ್ಟಗಿಲ್ಲವೇ ?" ಎನ್ನುತ್ತ ಕೊರಳು ಮುಟ್ಟಿ ನೋಡಿದಳು.

"ಹೀಗೇಕೆ ಕತ್ತಲಲ್ಲಿ ಮಲಗಿದ್ದೆ ಕರುಣಾ ? ನಾನೆಷ್ಟು ಗಾಬರಿಯಾಗಿದ್ದೆ! ಜ್ವರವೇರಿದೆಯೇನೋ ಎಂದುಕೊಂಡಿದ್ದೆ!"

ಜ್ವರವಿಲ್ಲದ್ದು ಕಂಡು ಅರುಣಳಿಗೆ ಸಮಾಧಾನವಾಯ್ತು.

ಕರುಣಾ ಏನೂ ಮಾತನಾಡಲಿಲ್ಲ.

"ಏಕೆ ಬೇಸರ ಬಂದಿತ್ತೇನು ?" ಸಹಜವಾಗಿ ಕೇಳಿದಳು ಅಕ್ಕ.

"ಅಕ್ಕಾ!" ಎಂದು ಅವಳೆದೆಯಲ್ಲಿ ಮುಖವಿರಿಸಿದಳು ಕರುಣಾ.

"ವಿಚಿತ್ರ ಹುಡಿಗೆ !" ಎಂದು ಮನದಲ್ಲಿಯೇ ಅಂದುಕೊಂಡು, ಮಮತೆಯಿಂದ ಕರುಣಳ ಬೆನ್ನ ಮೇಲೆ ಕೈಯಾಡಿಸಿದಳು.

* * *

ಯಾವ ವ್ಯತ್ಯಾಸ ತೋರದೆ ಒಂದೆರಡು ವಾರಗಳುರುಳಿದವು. ತಂಗಿಯಲ್ಲಿ ಯಾವ ಬದಲಾವಣೆಯಾಗಲಿ, ಅಸ್ವಾಭಾವಿಕತೆಯಾಗಲಿ ಕಾಣಲಿಲ್ಲ ಅರುಣಳಿಗೆ .

ಸಂಜೆಯ ನೆನಪೊಂದನ್ನುಳಿದರೆ, ತನ್ನಲ್ಲಿಯೂ ಯಾವ ಬಗೆಯ ಮಾರ್ಪಾಡು ಕಾಣಲಿಲ್ಲ ಕರುಣಳಿಗೆ. ಎಂದಿನಂತೆ ಊಟ ಮಾಡಿ ಕಾಲೇಜಿಗೆ ಹೋದಳು. ಹೋಗುವಾಗ ನಿತ್ಯದ ರೂಢಿಯಂತೆ "ಅಕ್ಕಾ, ನಾನು ಕಾಲೇಜಿಗೆ ಹೋಗುವೆ." ಎಂದು ಹೇಳಲೂ ಮರೆಯಲಿಲ್ಲ.

ಹೋಗುವಾಗ ದಾರಿಯಲ್ಲಿ ಗೆಳತಿಯರು ಸಿಕ್ಕರು. ಅವರೊಂದಿಗೆ ಹರಟುತ್ತ ನಡೆದಳು. ಒಮ್ಮೊಮ್ಮೆ ನಮಗೆ ತಿಳಿಯದಂತೆ ಕಾಲಿಗೆ ಗಾಯವಾಗಿ ರಕ್ತ ಸೋರುತ್ತಿರುತ್ತದೆ. ಮುಂದೆ ಕೆಲ ಹೊತ್ತಿನ ಮೇಲೆ ಆಕಸ್ಮಿಕವಾಗಿ ಅದರೆಡೆಗೆ ನೋಡುತ್ತೇವೆ. ಇಲ್ಲವೆ ಅದರ ವೇದನೆಯಾಗುತ್ತಿರುವ ಪ್ರಜ್ಞೆ, ತಡವಾಗಿ ಬಂದು ಗಾಬರಿಯಾಗುತ್ತೇವೆ. ಇದು ಎಲ್ಲಿ, ಯಾವಾಗ ಕೊರೆಯಿತು ? ಎಂದು ಅಚ್ಚರಿಯಿಂದ ಊಹಿಸಲು ಯತ್ನಿಸುತ್ತೇವೆ. ಹಾಗೆ ಕರುಣಳ ಮಾನಸಿಕ ಸ್ಥಿತಿಯಿದ್ದಿತು.

ಆ ದಿನ ಕಾಲೇಜಿನಲ್ಲಿ ಚರ್ಚಾಕೂಟವನ್ನೇರ್ಪಡಿಸಿದ್ದರು. ವಿಷಯವೇ? ರಾಮಾಯಣದಷ್ಟೆ ಪ್ರಾಚೀನವಾದ ವಿಷಯ; ಸಮಾಜ ಸುಧಾರಣೆಯ ಹೊಸ ಗಾಳಿ ಬೀಸಿದಂದಿನಿಂದ ಇಂದಿನವರೆಗೂ ಶಾಲೆ, ಕಾಲೇಜು, ಪತ್ರಿಕೆ, ಸಭೆ, ಸಮ್ಮೇಲನ ಎಲ್ಲ ಕಡೆಗೂ – ಶಾಲೆಯ ಬಾಲಕನಿಂದ ಮೊದಲುಗೊಂಡು ರಾಜಕಾರಣ ಮುತ್ಸದ್ದಿಯ ವರೆಗೆ – ಎಲ್ಲರೂ ಮಾತನಾಡಿ, ಚರ್ಚಿಸಿ, ಆಲೋಚಿಸಿ, ಪತ್ರಿಕೆಗಳಲ್ಲಿ ಕಂಠಶೋಷಣೆಮಾಡಿ, ಸಮಾಜವನ್ನು ಮತ್ತೆ ಇದ್ದ ಸ್ಥಿತಿಯಲ್ಲಿಯೇ ಇರಿಸಿದ "ಸ್ತ್ರೀಪುರುಷ ಸಮಾನತೆ," ಎಂಬ ವಿಷಯ. ಈಗ ಇದು ಸಾಮಾಜಿಕ ಪ್ರಶ್ನೆ ಇಲ್ಲವೆ ಸಮಸ್ಯೆಯಾಗಿ ಉಳಿದಿಲ್ಲ. ಅದೊಂದು 'ಚರ್ಚಾಕೂಟದ ವಿಷಯ' ವಾಗಿದೆ ! ಮತ್ತೆ ಅವೇ ಮಾತು, ಅವೇ ಸಮರ್ಥನೆಗಳು, ಅದೇ ಆವೇಶ, ಕಳಕಳಿ – ಮಾತಿನಲ್ಲಿ !

ಕರುಣಾ ನೇರವಾಗಿ ಮನೆಯ ಕಡೆಗೆ ಹೊರಟಳು. ಗೆಳತಿಯರೆಷ್ಟು ಆಗ್ರಹ ಮಾಡಿದರೂ ಕೇಳಲಿಲ್ಲ. ಮನೆಗೆ ಬಂದವಳೆ ಒಂದು ಚಹ ಮಾಡಿಕೊಂಡಳು. ಅರುಣಾ ಹೆಣೆಯುತ್ತ ಕುಳಿತಿದ್ದಳು. ಮಾಡಿದ ಚಹವನ್ನು ಎರಡು ಕಪ್ಪುಗಳಲ್ಲಿ ಹಾಕಿಕೊಂಡು ಅಕ್ಕನ ಬಳಿ ಕುಳಿತಳು.

"ಬೇಗ ಬಂದೆ? " ಕಪ್ಪನ್ನೆತ್ತಿ ಕೇಳಿದಳು ಅಕ್ಕ.

"ಚರ್ಚಾಕೂಟ ಇತ್ತು; ನನಗದು ಸೇರದು,"

ಮುಂದೆ ಹೆಚ್ಚು ಮಾತನಾಡದೆ ತನ್ನ ಕೋಣೆಗೆ ಹೋದಳು. ಕೆಲ

ಹೊತ್ತು ವಿಶ್ರಮಿಸಿದಳು. ಮನಸ್ಸು ಹಗುರಾಗಿತ್ತು, ತಿಳಿಯಾಗಿತ್ತು. ಯಾವ ಉದ್ದೇಶವಿಲ್ಲದೆ ಕೈಯ ಉಂಗುರವನ್ನು ತೆಗೆಯುವದು, ಮತ್ತೆ ಸೇರಿಸುವದು, ಮುಂಗುರುಳನ್ನು ತೀಡಿಕೊಳ್ಳುವದು, ಹೀಗೆ ಕೆಲ ನಿಮಿಷ ಕಳೆದಳು.

ಕಳ್ಳತನದಿಂದ ಯಾರಿಗೂ ಸುಳಿವು ಹತ್ತದಂತೆ ಭದ್ರವಾದ ಕೋಟೆಗೆ ಕಿಂಡಿಯನ್ನು ಕೊರೆದು ಮುಂದೆ ಆ ಕಿಂಡಿಯಿಂದಲೆ ರಭಸದಿಂದ ನುಗ್ಗಿ ಒಳ ಬರುವ ಶತ್ರುಗಳಿರುವದಿಲ್ಲವೇ ? ಹಾಗೆ ಸುಪ್ತ ಆಕಾಂಕ್ಷೆಗಳು ಒಮ್ಮೊಮ್ಮೆ ಪ್ರಜ್ಞಾವಸ್ಥೆಯಲ್ಲಿಯೂ ಬಹಿರಂಗವಾಗಿಯೇ ಅವಳ ಮನಸ್ಸನ್ನು ಮುತ್ತುತ್ತಿದ್ದವು. ಆಗ ಅನಿರೀಕ್ಷಿತವಾದ ಶತ್ರುಪ್ರವೇಶದಿಂದ ಗಾಬರಿಗೊಂಡು ಎದ್ದ ನಾಯಕ ಅಸಹಾಯನಾಗಿ ಯಾವ ಮಾರ್ಗವೂ ತೋಚದೆ, ಹೊಯ್ದಾಡುತ್ತ ನಿಂತು ಕೊನೆಗೆ ಹೇಗೋ ಎದುರಿಸಲೆತ್ನಿಸಿ ಕಂಗೆಟ್ಟು ನಿಂತುಬಿಡುತ್ತಾನೆ.

* * *

ಆದರೆ ಕರುಣಾ ಕಂಗೆಡುವಷ್ಟು ವೈಮನುರೆತಿರಲಿಲ್ಲ. ಹಲವಾರು ದಿನಗಳಿಂದ ಮನದ ಆಳದಲ್ಲಿ ನಡೆದ ಸಂಚಿನ ಸುಳುಹು ಮಸುಮಸುಕಾಗಿ ಕಂಡಿತು.

ಯಾವುದಾದರೊಂದು ವ್ಯಾವಹಾರಿಕ ಸೂಕ್ತವಾದ ಮಾರ್ಗವನ್ನು ಕಂಡುಕೊಳ್ಳಬೇಕಾಗಿತ್ತು ಅವಳಿಗೆ. ಸುಧಾಕರನಲ್ಲಿ ತಾನು ಅನುರಕ್ತಳಾದುದು ದಿನ ದಿನಕ್ಕೆ ಹೆಚ್ಚು ನಿಶ್ಚಿತ ರೂಪ ತಾಳಹತ್ತಿತು. ಈ ದಿನ ಅದನ್ನೆ ವಿಚಾರಿಸಹತ್ತಿದ್ದಳು. ನ್ಯಾಯಾಧೀಶನಂತೆ ನಿಷ್ಪಕ್ಷಪಾತತನದಿಂದ ವಿಚಾರಿಸಿ, ನ್ಯಾಯವನ್ನು ಬಗೆಹರಿಸುವ ವಿಷಯ ಆಗಿರಲಿಲ್ಲ ಅದು. ಇಲ್ಲಿ ನಿರ್ಣಯಿಸಬೇಕಾದ ವಿಷಯ ಅವಳ ಹೃದಯಕ್ಕೆ ಸಂಬಂಧಿಸಿದುದು. ಅದನ್ನು ವಿಚಾರಿಸಬೇಕಾದವಳೂ ಅವಳೇ! ಅಂದಮೇಲೆ ಹೇಗೆ ಸಾಧ್ಯ ?

ಅವಳದು ವಿಚಾರಿಸಿನೋಡಿ, ತಿಳಿದು ನಡೆಯುವ ಸ್ವಭಾವವಲ್ಲ. ಭಾವಿಸಿ ನಡೆಯುವ ಸ್ವಭಾವ.

ತನ್ನ ಮನದ ಅಭಿಲಾಷೆಯನ್ನು ಸುಧಾಕರನಿಗೆ ಹೇಗೆ ತಿಳಿಸಬೇಕು ?

....ಹಾಗೆ ಮಾಡಿದಲ್ಲಿ ಆತನ ಪ್ರತಿಕ್ರಿಯೆಯೇನಾಗಬಹುದು ?

ಈ ಎರಡನೆಯ ಪ್ರಶ್ನೆಗೆ ಉತ್ತರವನ್ನು ತರ್ಕಿಸುವಾಗ ಮಾತ್ರ ಅವಳು ವಿಚಾರಕ್ಕಿಂತ ಪೂರ್ವಗ್ರಹ ಅನುಕೂಲಭಾವನೆಯನ್ನೆ ಆಶ್ರಯಿಸಿದಳು.

'ಆತ ನಿರಾಕರಿಸಿದರೆ'? ಎಂಬ ವಿಚಾರ ಸುಳಿದರೂ ಅದನ್ನು ದೂರ ಅಟ್ಟಿ

ದಳು. ಯಾಕಂದರೆ ಆ ವಿಚಾರ ಅವಳಿಗೆ ಅಪ್ರಿಯವಲ್ಲವೆ ? ಅದರಿಂದ ನಿರಾಸೆಯೇ ಕಟ್ಟಿಟ್ಟ ಫಲ. ಬಯಸಿದಂತೆ ಆಗಬೇಕು, ಆಗುವದು, ಎಂಬ ಆಸೆಯ ಮೇಲೆ ಕೈಯಿಟ್ಟು ನಡೆಯುವವರೇ ಹೆಚ್ಚು ಜನ.

ಈ ಅಪ್ರಿಯ ವಿಚಾರಕ್ಕಿಂತ ಅವಳಿಗೆ ಆಶಾದಾಯಕ, ಉತ್ಸಾಹದ ಭಾವನೆಯಲ್ಲಿ ಹೆಚ್ಚು ನಂಬುಗೆಯಾಯ್ತು.

....ಆತ ನಿರಾಕರಿಸಲಾರ. ನನ್ನಲ್ಲಿ ಚೆಲ್ವಿಕೆಯಿದೆ, ಕಲಿತವಳಿದ್ದೇನೆ. ರಸಿಕತೆ ನನ್ನಲ್ಲಿದೆ, ನನ್ನ ಮೃದುಸ್ವಭಾವವಂತೂ ಅವರಿಗೆ ಗೊತ್ತಿದೆ, ಯಾವ ಕನಸುಗಾರನ ಹೃದಯದಲ್ಲಿ ಇದಕ್ಕಿಂತ ಹೆಚ್ಚಿನ ಆದರ್ಶ-ಹೆಣ್ಣಿನರೂಪ-ಮೂಡಬಹುದು ?

....ಈ ವಿಶ್ವಾಸ ಒಂದು ರೀತಿಯಿಂದ ಅವಳನ್ನು ಮುಂದುವರಿಯುವಂತೆ ಮಾಡಿದರೆ, ಇನ್ನೊಂದೆಡೆ, ಆ ದಿನ ಅವರು ಅದೆಷ್ಟು ಸ್ನಿಗ್ಧಭಾವದಿಂದ ನನ್ನೆಡೆಗೆ ನೋಡಿದರು ! ನನ್ನ ಸಂಗೀತ ಮನ ಕಲಕುವಂತಹದೆಂದು ಹೇಳಲಿಲ್ಲವೇ ? ನಾನೂ ಅವರ ಮನವನ್ನು ಕಲಕಿರಲೇಬೇಕು. ಆ ಒಂದು ಕ್ಷಣದಲ್ಲಿ ಅವರು ನನ್ನ 'ಸ್ವಾಮಿ' ಎಂಬ ಭಾವನೆ ನನಗೇಕಾಗಬೇಕು ? ಅದೆಷ್ಟು ಯುವಕರನ್ನು ನೋಡುತ್ತೇವೆ. ಬೇರೊಬ್ಬರ ವಿಷಯಕ್ಕೆ ಮೂಡದ ಭಾವನೆ ಅವರ ವಿಷಯವಾಗಿ ಮೂಡಿದುದೇಕೆ ?....

....ಆತ ನಿರಾಕರಿಸಲಾರ ! ಹಾಗೇನಾದರೂ ಅದರೆ ?....ಹೂವು ಒಂದೇ ಬಾರಿ ಅರಳುವದು ! ಇಡೀ ಜನ್ಮ ತಪವಿದ್ದು, ಮುಂದಿನ ಜನ್ಮದಲ್ಲಿಯಾದರೂ ಪಡೆಯುತ್ತೇನೆ !

ಇಂತಹ ಭಾವನೆಗಳನ್ನು ಹೆಣೆಯುತ್ತಿದ್ದಳು. ಆಸೆಯ ಮನೆಯನ್ನು ಕಟ್ಟುತ್ತಿದ್ದಳು. ಈ ವಿಚಾರಗಳಿಗೆ ತಳಹದಿ ಯಾವುದು ? ಹೀಗೆಲ್ಲ ನಡೆಯಬಹುದೇ ? ಎಂಬುದರ ಕಡೆಗೆ ಅವಳ ಗಮನವಿರಲಿಲ್ಲ.

ಪ್ರಾಯಕ್ಕೆ ಬಂದ ಹುಡುಗ-ಹುಡಿಗೆಯರೆಲ್ಲ ಹೀಗೆ ಕನಸುಕಟ್ಟುವ ಅವಸ್ಥೆಯಲ್ಲಿ ಹಾಯ್ದು ಹೋಗುತ್ತಿರಬಹುದು. ರಮ್ಯ ಕಾವ್ಯ, ಪ್ರಣಯದ ಕಾದಂಬರಿಗಳು, ಪ್ರೇಮದ ಕತೆಯ ಚಿತ್ರಪಟಗಳು—ಇವೆಲ್ಲ ಯುವಕರನ್ನು ಬೇರೆ ಪ್ರಪಂಚಕ್ಕೆ ಸೆಳೆಯುತ್ತವೆ. ಒಬ್ಬ ಲೇಖಕರು ಒಂದು ಕಡೆ, "ಯೌವನವೆಂದರೆ ಹುಚ್ಚು ಕಲ್ಪನೆಗಳ ಅವಿಚಾರ"ಎಂದು ಹೇಳಿದುದು ಸರಿಯಿದ್ದಿರಬೇಕು.

ಅಪಕ್ವವಿಚಾರ, ರಮ್ಯಕಲ್ಪನೆಗಳು, ಕರುಣಳನ್ನು ಬೇಗನೆ ನಿರ್ಧಾರಕ್ಕೆ ಬರದಂತೆ ಮಾಡಿದವು. ತನ್ನ ಮನದಲ್ಲಿ ಮೂಡಿರುವ ವಿಚಾರವನ್ನು ಅವನೆದುರು ಹೇಳಬೇಕೆಂದು ನಿರ್ಧಾರಕ್ಕೆ ಬಂದಳು. ಹೇಗೆ ? ಎಲ್ಲಿ ಆತನನ್ನು ಕಾಣಬೇಕು ?

....ಸ್ವಪ್ನದಲ್ಲಿ ಬಂದ ಅನಿರುದ್ಧನನ್ನು ಪಡೆಯಲು ಉಷೆಯು ನೆರವಿಗೆ ಗೆಳತಿಯಿದ್ದಳು !

....ದಮಯಂತಿಗೆ ಹಂಸಪಕ್ಷಿಯಿತ್ತು !

...ಶಕುಂತಲೆ ಕಮಲಪತ್ರವನ್ನು ಮೊರೆಹೊಕ್ಕಳು.

....ತಾನು....?

....ಗೆಳತಿಯ ಸಹಾಯ ಕೋರಿದರೆ ? ....ಬೆಳಗಾಗುವದರೊಳಗೆ ಊರ ತುಂಬೆಲ್ಲ ಸುದ್ದಿಯಾದೀತು ! ಅವಕ್ಕಿಂತ ಶಕುಂತಲೆ, ದಮಯಂತಿಯರಂತೆ ಬಾಯಿಯಿಲ್ಲದ ಮಧ್ಯಸ್ಥರನ್ನೇ ಆಶ್ರಯಿಸುವದೊಳಿತೆಂದುಕೊಂಡಳು.

ಅಂದು ರಾತ್ರಿ ಎಲ್ಲರು ಮಲಗಿದ ಮೇಲೆ ಕರುಣಾ ಏನೇನೋ ಬರೆದಳು–ಹರಿದು ಹಾಕಿದಳು–ಮತ್ತೆ ಬರೆದಳು.

## ಪ್ರಕರಣ : ೬

ಹಿಂದಿನ ದಿನವೆ ತಂದೆಯವರಿಂದ ಕಾಗದ ಬಂದಿತ್ತು. ಸುಧಾಕರ ಸಮಾಧಾನದ ಉಸಿರನ್ನೆಳೆದ. ಆದರೂ ಅದೇಕೋ ಉದಾಸೀನವಾಗಿಯೇ ಇದ್ದ. ಪರೀಕ್ಷೆಯ ದಿನಗಳು ಸಮೀಪಿಸಹತ್ತಿದವು. ಉತ್ತೀರ್ಣನಾಗುವ ವಿಶ್ವಾಸವಿದ್ದಿತಾದರೂ ಉತ್ತಮ ತರಗತಿಯಲ್ಲಿ ಪಾಸಾಗಬೇಕೆಂದು ಮನಸುಗೊಟ್ಟು ಓದುತ್ತಿದ್ದ.

ಅವನ ಏಕಾಗ್ರತೆಗೆ ಭಂಗ ತರುತ್ತಿರುವ ವಿಷಯವೆಂದರೆ ಅದೊಂದೇ.... ಹಣದ ಪ್ರಶ್ನೆ. ಎರಡನೆಯ ಟರ್ಮಿನ ಫೀಯನ್ನು ತುಂಬಬೇಕಾಗಿತ್ತು. ಅವಧಿ ಮೀರಿಹೋದುದರಿಂದ, ಆತನ ಹೆಸರು ನೋಟೀಸ ಬೋರ್ಡಿನ ಮೇಲೆ ಬಂದಿತ್ತು. ಹಣಕ್ಕಾಗಿ ತಂದೆಗೆ ಕಾಗದ ಬರೆಯಲು ಆತನ ಮನಸ್ಸು ಮುದುಡಿಕೊಂಡಿತು. ತಾನು ಊರಿಗೆ ಹೋದಾಗ ಮನೆಯ ಸ್ಥಿತಿಯನ್ನು ಕಂಣಾರೆ

ಕಂಡಿದ್ದ. ತಂದೆಯ ಅಸ್ವಾಸ್ಥ್ಯ, ಅವರ ಮಾನಸಿಕ ವ್ಯಥೆ ಇವುಗಳನ್ನು ನೋಡಿದ ಮೇಲಂತೂ ಹೇಳಲಾಗದ ಸಂಕಟವಾಗಿತ್ತು. ಇನ್ನು ಮಾಡಬೇಕಾದುದಾದರೂ ಏನು ? ಸ್ನೇಹಿತರನ್ನು ಕೇಳಬೇಕೇ ? ಯಾರಲ್ಲಿ ಮೊರೆಯಿಡಬೇಕು ? ಅಷ್ಟು ಹಣವನ್ನು ಕೊಡುವವರಾದರೂ ಯಾರು ? ಕೊಟ್ಟರೂ ತಾನು ಮತ್ತೆ ಹಿಂತಿರುಗಿ ಕೊಡಬೇಕಲ್ಲ ? ಆಗೆಲ್ಲಿಂದ ತರಬೇಕು ?

ತನ್ನ ದುರ್ದೈವ ನೆನೆದು ತನ್ನನ್ನು ತಾನೇ ಹಳಿದುಕೊಂಡ. ತನಗಾಗಿ ತಂದೆ, ತಮ್ಮಂದಿರು ಅನುಭವಿಸುತ್ತಿರುವ ಸಂಕಷ್ಟಗಳನ್ನು ನೆನೆದಾಗಂತೂ ಕಂಣೀರು ಚಿಮ್ಮುತ್ತಿತ್ತು. ಇಲ್ಲಿಯ ವರೆಗೆ ತಂದೆ ತನಗೆ ಹಣವನ್ನು ಹೇಗೆ ಕಳಿಸುತ್ತಿದ್ದರು ? ಎಲ್ಲಿಂದ ದೊರಕಿಸುತ್ತಿದ್ದರು ? ಎಂಬ ವಿಚಾರ ಅನೇಕ ಸಲ ಮೂಡಿದಾಗ ಎದೆಯನ್ನು ಬಿರಿಯುವ ಭಯಾನಕ ಕಲ್ಪನೆ ಅಸ್ಪಷ್ಟವಾಗಿ ಬರುತ್ತಿದ್ದಿತು. ಹೋದ ಸಲ ಊರಿಗೆ ಹೋದಾಗ ಆ ಭಾವನೆ ಸ್ಪಷ್ಟವಾದಂತಿತ್ತು. ಇದ್ದ ಒಂದು ಹೊಲವನ್ನೊ, ಮನೆಯನ್ನೊ, ಒತ್ತೆಯಿಟ್ಟಿರಬಹುದೆಂಬ ಸಂದೇಹ ನಿಚ್ಚಳವಾಗಿತ್ತು. ಮನೆಯಿಂದ ತಾನು ಅದೆಂತಹ ದೊಡ್ಡ ಬೆಲೆಯನ್ನು ಬೇಡುತ್ತಿದ್ದೇನೆಂದು ಯೋಚಿಸಿದಾಗ ಸುಧಾಕರನಿಗೆ ದಿಕ್ಕು ತೋಚದಂತಾಯ್ತು. ತನ್ನೊಬ್ಬನಿಗಾಗಿ ಚಿಕ್ಕ ತಮ್ಮಂದಿರನ್ನು ಅನಾಥರನ್ನಾಗಿ ಮಾಡುತ್ತಿದ್ದೇನೆಂದೆನಿಸಿತವನಿಗೆ.

ಯೋಚಿಸಿದಂತೆ ಭವಿಷ್ಯ ಹೆಚ್ಚು ಭಯಾನಕವಾಗಿ ತೋರಹತ್ತಿತ್ತು. ಇನ್ನೂ ಒಂದು ವರುಷ ಹೇಗೆ ಕಳೆಯಬೇಕು ? ಕಲಿಯುವದನ್ನು ಇಲ್ಲಿಗೆ ನಿಲ್ಲಿಸಿ ಯಾವುದಾದರೊಂದು ಚಾಕರಿಯನ್ನು ಹುಡುಕಬೇಕೆಂದು ಆಲೋಚಿಸಿದ. ಹೆಚ್ಚಿನ ವಿದ್ಯಾಭ್ಯಾಸ ಪಡೆಯುವದು ತನಗೆ ಅಸಾಧ್ಯವೆಂಬುದನ್ನು ಹಿಂದಕ್ಕೆ ಅತ ತಿಳಿದುಕೊಂಡಿದ್ದ. ಮ್ಯಾಟ್ರಿಕ್ ಪಾಸಾದಾಗ, ಉಳಿದವರಂತೆ ತಾನೂ ಮುಂಬೈಯನ್ನು ಸೇರಿ ನೌಕರಿಗಾಗಿ ಅಲೆಯಬೇಕೆಂದಿದ್ದ. ತಂದೆ, ಸ್ನೇಹಿತರ ಸಹಾನುಭೂತಿಯ ಒತ್ತಾಯಕ್ಕಾಗಿ ಕಾಲೇಜು ಸೇರಿದ್ದ. ಮನೆಯ ಆರ್ಥಿಕ ಸ್ಥಿತಿ ಎಷ್ಟೊ ಸರಿಯಾಗಿರಲಿಲ್ಲವೆಂಬುದೂ ತಿಳಿದಿತ್ತು. ಆಗ ತಂದೆಯವರ ಮನಸ್ಸಿಗೆ ನೋವನ್ನುಂಟುಮಾಡಬಾರದೆಂದು ಒಪ್ಪಿಕೊಂಡಿದ್ದ. ನಾಲ್ಕು ವರುಷ ಹಾಗೂ ಹೀಗೂ ಕಷ್ಟಸಹಿಸಿದರೆ ಬದುಕಿನಲ್ಲಿ ಒಂದು ಆಸರ, ನೆಲೆಯಾದರೂ ದೊರೆತೀತೆಂಬ ಆಸೆಯ ಮೇಲೆ ಕಾಲೇಜಿಗೆ ಸೇರಿದ್ದ. ಈ ಎರಡು

ವರುಷಗಳು ಕಳೆಯಬೇಕಾದರೆ ಸಾಕಾಗಿಹೋಗಿತ್ತು. ಜೀವನದಲ್ಲಿ ಪ್ರತ್ಯಕ್ಷವಾಗಿ ಬರುವ ತೊಂದರೆಗಳು, ಕಲ್ಪಿಸಿದುದಕ್ಕಿಂತ ಭೀಕರವಾಗಿರುತ್ತವೆ.

ಭವಿಷ್ಯದ ಮೇಲೆ ಭಾರ ಹಾಕಿ ಈಗ ಎರಡುವರುಷ ಕಳೆದದ್ದಾಯ್ತು. ಈಗ ಪರಿಸ್ಥಿತಿ ತೀರ ಹದಗೆಟ್ಟಿದೆಯೆಂಬುದು ಸುಧಾಕರನಿಗೆ ಅರಿಯದ ಸಂಗತಿಯಾಗಿರಲಿಲ್ಲ. ಆದ ಅನರ್ಥವೆ ಸಾಕು. ಇದ್ದ ಚೂರುಚಾರು ಆಸ್ತಿಯನ್ನು ಗಾಳಿಗೆ ತೂರಿ ತಮ್ಮಂದಿರ ಭವಿಷ್ಯಕ್ಕೆ ಬೆಂಕಿಯಿಡುವ ಸ್ವಾರ್ಥಿ ತಾನಾಗುವದು ಬೇಡವಾಯ್ತು.

ಎಂದೂ ಇಲ್ಲದ ನಾಚಿಕೆ, ವಿವಂಚನೆ, ವ್ಯಥೆಯಲ್ಲಿ ಮುಳುಗಿದ. ಇನ್ನೊಂದು ವರುಷ ದಾಟಿದರೆ ಮುಂದೇನಾದರೂ ಆದೀತು. ಇಷ್ಟು ದಿನಗಳವರೆಗೆ ತಂದೆಯವರು ಕಂಣೀರುಂಡು ತನಗಾಗಿ ನವೆಯುತ್ತಿರುವದಕ್ಕಾದರೂ ಒಂದು ಸಫಲತೆ ಬರುವಂತೆ ಮಾಡಬೇಡವೇ ? ಈಗ ಅರ್ಧಕ್ಕೆ ಓದು ನಿಲ್ಲಿಸಿದರೆ ಅವರ ಹೃದಯಕ್ಕೆ ನೋವಾಗಲಿಕ್ಕಿಲ್ಲವೆ ? ಅರೆ ಹೊಟ್ಟೆ ಉಂಡು, ಹಸು ಮಕ್ಕಳಿಗೆ ನೋವಾಗದಂತೆ ನೋಡಿಕೊಂಡು ಇಲ್ಲಿಯವರೆಗೆ ತನ್ನೊಬ್ಬನ ಭವಿಷ್ಯದ ಮೇಲೆ ಆಸೆಯಿಟ್ಟುಕೊಂಡು ಜೀವಹಿಡಿದ ತಂದೆಯ ಹೃದಯಕ್ಕೆ ತಾನು ಅನ್ಯಾಯಮಾಡಿದಂತಾಗಲಿಕ್ಕಿಲ್ಲವೆ ?....

....ಯಾವ ನಿರ್ಧಾರಕ್ಕೂ ಬರದಂತಾಯ್ತು. ನಿಷ್ಠುರ ಸತ್ಯ ಒಂದು ಕಡೆ ಆತನನ್ನು ಹಿಂಡುತ್ತಿತ್ತು. ಇನ್ನೊಂದೆಡೆ ತಂದೆಯ ಅಪಾರ ಕಷ್ಟಸಹನೆ, ತ್ಯಾಗಗಳು ಮನದುಂಬಿನಿಂತು ಕಂಗೆಡಿಸುತ್ತಿದ್ದವು.

....ಜೀವ ಹುರುಹುರು ಎನ್ನುತ್ತಿತ್ತು. ಯಾವ ಕೆಲಸಕ್ಕೂ ಮನಸ್ಸಾಗಲಿಲ್ಲ. ಈ ನೋವು, ವ್ಯಥೆಯನ್ನು ತಾನೊಬ್ಬನೆ ಅನುಭವಿಸುವದಂತೂ ಅಸಹನೀಯವಾಯಿತು. ಊಟಕ್ಕೆ ಹೋಗಬೇಕೆಂದ. ಅದಕ್ಕೂ ಉದಾಸೀನ !

ನೇರವಾಗಿ ಮಾಧವನತ್ತ ನಡೆದ. ಮಾಧವ ಊಟಕ್ಕೆ ಹೊರಡುವ ಸಿದ್ಧತೆಯಲ್ಲಿದ್ದ. ಸುಧಾಕರ ಬರುತ್ತಿರುವದನ್ನು ನೋಡುತ್ತಲೆ ಮಾಧವ ಬಾಗಿಲ ಬಳಿ ಬಂದು "ಒಳಗೆ ಬಾ, ಇನ್ನೂ ಊಟ ಮಾಡಿಲ್ಲವೆ ?" ಎಂದು ಹೆಗಲ ಮೇಲಿದ್ದ ಟವೆಲ್ಲನ್ನು ಹಗ್ಗಕ್ಕೆ ಹಾಕಿದ.

"ಬೇಜಾರಾಯ್ತು, ಹೋಗಲಿಲ್ಲ." ಎನ್ನುತ್ತ ಉಸಿರುಗರೆಯುತ್ತ ಬಂದು ಮಂಚದ ಮೇಲೆ ಒರಗಿಕೊಂಡ. ವಿಚಲಿತಮನಸ್ಕನಾಗಿ ಅಲ್ಲಿದ್ದ ವೃತ್ತಪತ್ರಿಕೆ

ಯನ್ನು ತಿರುವಿ ಹಾಕಹತ್ತಿದ. ಒಂದು ಕ್ಷಣದಲ್ಲಿಯೆ ನಾಲ್ಕು ಪುಟಗಳನ್ನು ತಿರುವಿ ಹಾಕುತ್ತಿರುವದನ್ನು ನೋಡಿದರೆ ಸುಧಾಕರನ ಮನಸ್ಸಿನಲ್ಲಿ ನಡೆಯುತ್ತಿರುವ ಹೊಯ್ದಾಟದ ಕಲ್ಪನೆ ಬರಬಹುದಾಗಿತ್ತು.

ಊರಿಗೆ ಹೋಗಿ ಬಂದಮೇಲೆ ಮಾಧವನೆದುರು ಅಲ್ಲಿ ನಡೆದ ವಿಷಯ ವನ್ನೆಲ್ಲ ವಿವರಿಸಿದ್ದ. ಸಹೃದಯರೆದುರು ಹೇಳಿಕೊಂಡಾಗಲೆ ಭಾರವಾದ ಮನಸ್ಸಿಗೆ ತುಸು ಸಮಾಧಾನ. ಈ ವರೆಗೂ ತನ್ನ ಹಣದ ತೊಂದರೆಯನ್ನು ಯಾರೆದುರೂ ಹೇಳಿರಲಿಲ್ಲ. ತನ್ನ ಬಡತನದ ತೊಂದರೆಗಳನ್ನೆಲ್ಲ ಸ್ನೇಹಿತರೆದುರು ದೊಡ್ಡದಾಗಿ ಮಾಡಿ ಹೇಳುವ ಸ್ವಭಾವ ಆತನದಲ್ಲ. ಸ್ವಾಭಿಮಾನಿ ! ಇತರರೆದುರು ತನ್ನ ಚಿಕ್ಕ ಪುಟ್ಟ ತೊಂದರೆಗಳನ್ನೆಲ್ಲ ಹೇಳಿ, ಅವರ ಸಹಾನುಭೂತಿ, ಸಹಾಯಗಳನ್ನು ದೊರ ಕಿಸುವದು, ಆತನ ಸ್ವಭಾವವಲ್ಲ. ಆದರೆ ಅದು ದುರಭಿಮಾನವಲ್ಲ. ತನಗಾಗಿ ಸ್ನೇಹಿತರಿಗೆ ತೊಂದರೆಯನ್ನು ಕೊಡಬಾರದೆಂಬ ವಿವೇಕದಿಂದ ಹಾಗಿರುತ್ತಿದ್ದ.

ಒಂದೆರಡು ನಿಮಿಷಗಳು ಜಾರಿದವು. ಕೋಣೆ ಮೌನವಾಗಿತ್ತು. ಸುಧಾ ಕರನ ಉದಾಸೀನ ಭಾವನೆ ಆತನ ಮೌನದಲ್ಲಿ ತುಂಬಿನಿಂತಿತ್ತು.

"ಯಾವ ಯೋಚನೆ ನಡೆದಿದೆ, ಸುಧಾಕರ ?"

"ಹೀಗೆಯೇ !.... ಸುಮ್ಮನೆ...."

"ಹಾಗೆಂದಿಗೂ ಇರಲಾರದು. ಗಂಭೀರ ಆಲೋಚನೆಯಲ್ಲಿದ್ದಂತಿದೆ ಯಲ್ಲ ?"

"ಗಂಭೀರ ಆಲೋಚನೆಯೇನು.... ತಿಳಿದೂ ನಾನು ದುಡುಕಿದಂತಾ ಗಿದೆ !...."

ಈ ಮಾತಿನ ಎಳೆ ಎಲ್ಲಿಂದ ಬಂದಿತೆಂಬುದು ತಿಳಿಯಲಿಲ್ಲ. ಸುಧಾಕರ ನನ್ನು ಯಾವುದೋ ಪ್ರಶ್ನೆ ಕೊರೆಯುತ್ತಿದೆಯೆಂಬುದು ಮಾತ್ರ ಆತನ ಭಾರ ವಾದ ಮಾತುಗಳಿಂದ ತಿಳಿದುಬರುತ್ತಿತ್ತು.

"....ದುಡುಕಿದಂತಾಗಿದೆ !.... ನನಗೆ ಅರ್ಥವಾಗಲಿಲ್ಲ ?" ಚಕಿತನಾಗಿ ಕೇಳಿದ ಮಾಧವ.

"ಕಾಲೇಜು ಕಲಿಯುವದು ನನ್ನಂತಹನಿಗೆ ಎಟುಕದ ಮಾತು. ಮನೆಯ ಸ್ಥಿತಿ ಗೊತ್ತಿದ್ದೂ ನಾನು ದೂರದ ಹೂವಿಗಾಗಿ ಆಸೆಪಟ್ಟಂತಾಗಿದೆ...."

"ಈಗ ನಿನಗೆ ಬಂದ ಸಮಸ್ಯೆಯಾದರೂ ಯಾವುದು ? ಹೀಗೇಕೆ ಅಧೀರ

ನಾಗಿ ಮಾತನಾಡುತ್ತಿರುವಿ ?" ತುಸು ಎತ್ತರದ ಧ್ವನಿಯಲ್ಲಿ ಕೇಳಿದ ಮಾಧವ. ಆತನ ಮಾತಿನಲ್ಲಿ ಮರುಕ ತುಂಬಿತ್ತು.

"ಫೀ ತುಂಬಬೇಕಾಗಿದೆ ಈಗ. ಇನ್ನೂ ಒಂದು ವರುಷ ಕಳೆಯುವದು ಅಸಾಧ್ಯ ಮಾಧು ! ಊರಲ್ಲಿ ತಂದೆ, ತಮ್ಮಂದಿರು ಕೊರಗುತ್ತಿರಬೇಕು. ನಾನಿಲ್ಲಿ ಸುಖವಾಗಿ ದಿನಗಳನ್ನು ನೂಕುವದೆಂದರೆ...."

....ಮುಂದೆ ಮಾತು ಬಾರದಾಯ್ತು.

ಆತನನ್ನು ಸಮಾಧಾನಗೊಳಿಸುವ ಧ್ವನಿಯಲ್ಲಿ ಮಾಧವ, "ಇಲ್ಲಿ ನೀನು ಮೋಜು ಮಾಡಲು ಬಂದಿಲ್ಲ ಸುಧಾಕರ. ನೀನು, ನಿನ್ನ ತಂದೆಯವರ ಸಂಕಷ್ಟ ಗಳನ್ನು ನೋಡು. ಅವರು ಇಷ್ಟೆಲ್ಲ ತೊಂದರೆಗಳನ್ನು ಯಾರಿಗಾಗಿ ಸಹಿಸುತ್ತಿದ್ದಾರೆ? ನಿನ್ನೊಬ್ಬನ ಮೇಲೆ ಭರವಸೆಯಲ್ಲವೆ ಅವರಿಗೆ? ನೀನು ಕಾಲೇಜು ಮುಗಿಸಿ ಒಳ್ಳೆಯ ಕೆಲಸ ದೊರಕಿಸಬೇಕು. ಮುಂದೆ ತಂದೆಯ ಜೀರ್ಣ ಭುಜದ ಮೇಲಿರುವ ಭಾರವನ್ನು ನೀನು ಹೊರಬೇಕು. ತಮ್ಮಂದಿರನ್ನು ಮುಂದೆ ಓದಿಸ ಬೇಕು. ಇನ್ನೊಂದು ವರುಷ ದಾಟಿದರೆ ತಂದೆಯವರು ಬಾಳಿನುದ್ದಕ್ಕೂ ತಪ ಸಿದ್ದುದಕ್ಕೆ ಸಫಲತೆ ಬರುವದು. ಸುಮ್ಮನೆ ನೀನು ಭಾವವಶನಾಗಿ ದುಡುಕ ಬೇಡ..... ಅದಿರಲಿ ಈಗ ನಿನ್ನ ವಿಚಾರವಾದರೂ ಏನಿದೆ?"

ಇಲ್ಲಿಯವರೆಗೆ ಮೌನವಾಗಿ ಕೇಳುತ್ತಿದ್ದ ಸುಧಾಕರ ತಟ್ಟನೆದ್ದ "ಈಗಲೆ ಕಾಲೇಜಿಗೆ ನಮಸ್ಕಾರ ಹಾಕಿ, ಬದುಕಿನ ಮಾರ್ಗ ಹುಡುಕಬೇಕೆಂದಿದ್ದೇನೆ...."

ಆತನ ವಿಚಾರ ನೋಡಿ ಮಾಧವನಿಗೆ ನಗೆ ಬಂದಿತು. ನಗುತ್ತ "ಹಾಗೆ ಮಾಡಿದರೆ ಮಾರ್ಗ ತಪ್ಪುತ್ತೀ ! ಇಲ್ಲಿಯವರೆಗೆ ಹಲವಾರು ಬಗೆಯ ಆಪತ್ತು, ನೋವುಗಳನ್ನೂ ನುಂಗಿ ನಿನಗೆ ಕಲಿಸಿದ ತಂದೆಯವರಿಗೇನು ಹೇಳುತ್ತೀ?"

"ಅವರು ಅನುಭವಿಸುತ್ತಿರುವದನ್ನು ನೋಡಲಾಗದೆ, ನಾನಂತೂ ಈ ರೀತಿಯ ನಿರ್ಣಯಕ್ಕೆ ಬಂದಿದ್ದೇನೆ ಮಾಧವ !" ಎಂದಾಗ ಸುಧಾಕರನೆದುರು ಆತನ ಮನೆಯ ದಾರುಣ ಚಿತ್ರ ಹಾಯ್ದು ಹೋಯಿತು.

"ಇದಕ್ಕೇ ತಪ್ಪು ಎನ್ನುವದು. ಹೀಗೆಲ್ಲ ಧೈರ್ಯ ಬಿಟ್ಟು ನಿರಾಶೆಯಿಂದ ವಿಚಾರಿಸಿದಾಗ ಇಡೀ ಬದುಕೇ ಭಾರವಾಗುವದು ಸಹಜ. ಸಮಾಧಾನದಿಂದ ಆಲೋಚಿಸಿದರೆ ಮಾರ್ಗವಿದ್ದೇ ಇರುತ್ತದೆ. ಈ ವರುಷವಂತೂ ತೊಂದರೆಯಿಲ್ಲದೆ ದಾಟಬಹುದಲ್ಲ ?" ಎಂದು ಸುಧಾಕರನತ್ತ ನೋಡಹತ್ತಿದ.

“ಹೂಂ. ಹಾಗೂ ಹೀಗೂ ದಾಟಬಹುದು....ಮುಂದೆ?”

“ಮುಂದೆ! ಹೀಗೇಕೆ ಬೀದಿಯಲ್ಲಿ ನಿಂತ ನಿರ್ಗತಿಕನಂತೆ ಮಾತನಾಡು ತ್ತಿರುವಿ? ನಿನಗೇನಾಗಿದೆ? ಮುಂದಿನ ವರುಷ ‘freeship’ಗಾಗಿ ಯತ್ನಿಸೋಣ. ನಿನ್ನಂತಹನಿಗೆ ಅದು ಅಸಾಧ್ಯವಲ್ಲ. ಒಬ್ಬ ಒಳ್ಳೆಯ ಆಟಗಾರರನ್ನು ಕಳೆದು ಕೊಳ್ಳಲು ನಮ್ಮ ಪ್ರಿನ್ಸಿಪಾಲರು ಎಂದಿಗೂ ಸಮ್ಮತಿಸಲಾರರು....”

“ಅದೆಲ್ಲ ನಂನೋರಾಜ್ಯ ಭವಿಷ್ಯತಿ ಯಾರಿಗೆ ಬೇಕು ಮಾಧು? ಆ ಹಾದಿ ಯನ್ನೇ ಬಿಟ್ಟುಬಿಟ್ಟರಾಯಿತು.”

“ನಂದು ರಾಜ್ಯ ಅನ್ನದಿದ್ದರೆ ಭಾಗ್ಯ ಏನು ಇದ್ದಲ್ಲೇ ಬರುವದೇ? ನೀನು ಸುಮ್ಮನಿದ್ದು ಬಿಡು. ಆಯಿತೇ. ನಾನು ಹೇಳಿದಂತೆ ಮಾಡು. ಉಳಿದ ಯೋಚನೆ ನನಗಿರಲಿ. ಸುಮ್ಮನೆ ಇಲ್ಲದ ಕಾಲ್ಪನಿಕ ಭಯಕ್ಕೆ ಆಸ್ಪದ ಕೊಡಬೇಡ.

ಮಾಧವನ ಮಾತಿನಲ್ಲಿಯ ಅಭಯ, ವಿಶ್ವಾಸಗಳನ್ನು ಕಂಡು ಸುಧಾಕರನ ಜೀವಕ್ಕೆ ಸ್ವಲ್ಪ ಸಮಾಧಾನವಾಯಿತು. ಒಂದು ಕ್ಷಣದ ಭಾವನೆ, ತನ್ನಲ್ಲಿ ನಿರಾಸೆ ಯನ್ನು ತುಂಬಿದುದಕ್ಕಾಗಿ, ಅದರಿಂದಾಗಿ ತಾನು ಹೀಗೆ ಅನಾವಶ್ಯವ ಭಯ ವ್ಯಥೆ ಗಳಿಗೀಡಾದುದನ್ನು ತಿಳಿದಾಗ ತನ್ನ ಅಧೈರ್ಯವನ್ನು ಹಳಿದುಕೊಳ್ಳುವಂತಾಯ್ತು.

ಮೆಲ್ಲಗೆ ಆತನ ಮುಖದ ಮೇಲೆ ಸಮಾಧಾನದ ಭಾವ ಮೂಡಿ ಬಂದಿತು. “ನೀನು ಅದೇನು ಮಾಡುತ್ತೀ ಹೇಳಬಾರದೇ?” ಮಾಧವನನ್ನು ಕೇಳಿದ.

“ಒಳ್ಳೆಯ ಲೋಕವಿನ್ನೂ ಸುಟ್ಟಿಲ್ಲ ಸುಧಾಕರ. ಸ್ನೇಹಿತರು ನಿನ್ನ ಕೈ ಬಿಡಲಾರರು, – ಅಂತಹ ಅಕಲ್ಪಿತ ವಿಷಮ ಸ್ಥಿತಿ ಬಂದರೆ – ಇಂದೇ ಸಾಯಂ ಕಾಲ ಪ್ರಿನ್ಸಿಪಾಲರ ಮನೆಗೆ ಹೋಗೋಣ. ಪರಿಸ್ಥಿತಿಯನ್ನು ನಿವೇದಿಸೋಣ. ಅವರೆಂದಿಗೂ ನಿನ್ನನ್ನು ನಿರಾಸೆಗೊಳಿಸಲಾರರು.”

ಸುಧಾಕರ ಸುಮ್ಮನಿದ್ದ.

“ಹುಂ, ಏಳು, ಅದನ್ನೆಲ್ಲ ಹಿಂದಿನಿಂದ ಯೋಚಿಸೋಣ. ಈಗಂತೂ ಊಟ ಮಾಡಿಬರೋಣ ನಡೆ.” ಎಂದು ಸುಧಾಕರನನ್ನು ಎಳೆದುಕೊಂಡು ಇಬ್ಬರೂ ಹೊರಗೆ ಬಂದರು. ಕೋಣೆಗೆ ಕೀಲಿ ಹಾಕಿ, ಮುಂದೆ ನಡೆದ ಸುಧಾಕರನನ್ನು ಕೂಡಿಕೊಂಡು, ಆತನ ಹೆಗಲ ಮೇಲೆ ಕೈಯಿಟ್ಟು “ನೀನೆಂತಹ ಆಟಗಾರನೋ! ಒಂದಿಷ್ಟೂ ಧೈರ್ಯವಿಲ್ಲ! ತೊಂದರೆಗಳನ್ನು ಎದುರಿಸುವದರಲ್ಲಿಯೇ ಜೀವಂತ ಜೀವನವಿದೆ!”

ಇಬ್ಬರೂ ನಕ್ಕರು. ಊಟದ ಮನೆಗೆ ಬಂದಾಗ ಮಧ್ಯಾಹ್ನವಾಗಿತ್ತು. ವಿಶೇಷಗೊಂದಲವಿಗಲಿಲ್ಲ ಅಲ್ಲಿ. ಸಮಾಧಾನವಾಗಿ ಊಟಮಾಡಿದರು. ಮಧ್ಯೆ ಮಧ್ಯೆ ಸುಧಾಕರ ತನ್ನ ಮನೆಯ ಆಪತ್ತುಗಳನ್ನೆಲ್ಲ ಹೇಳಿದ ಮಾಧವನೆದುರು. ಆತನ ಧೈರ್ಯದ ಬೆಂಬಲ ದೊರೆತುದರಿಂದ ಸುಧಾಕರನಲ್ಲಿ ಮತ್ತೆ ಭವಿಷ್ಯದಲ್ಲಿ ಆಸೆ ಮೂಡಿತು.

ಊಟವಾದ ಮೇಲೆ ಇಬ್ಬರೂ ಮಾಧವನ ಕೋಣೆಗೆ ಬಂದರು. ಸುಧಾಕರ ನನ್ನು ಒಬ್ಬನನ್ನೇ ಬಿಟ್ಟರೆ ಮತ್ತೆ ಇಲ್ಲದ ಯೋಚನೆಯಿಂದ ತಲೆಕೆಡಿಸಿಕೊಳ್ಳುವ ನೆಂದು ಬಗೆದು, ತನ್ನ ಜೊತೆಗೇ ಕರೆದುಕೊಂಡು ಬಂದಿದ್ದ.

ವಿಚಾರಗಳಿಂದ ಬಳಲಿದ ಸುಧಾಕರನಿಗೆ ಸ್ವಲ್ಪ ಹೊತ್ತಿನಲ್ಲಿಯೇ ನಿದ್ದೆಯ ಜೊಂಪು ಬರಹತ್ತಿತು. ಮಾಧವನೂ ಒರಗಿಕೊಂಡ. ಅವನಿಗೆ ನಿದ್ದೆ ಬರಲಿಲ್ಲ. ಮಧ್ಯಾಹ್ನದ ನಿದ್ದೆ ಅವನಿಗೆ ಸೇರುತ್ತಿರಲಿಲ್ಲ. ಎದ್ದು ಓದುತ್ತ ಕುಳಿತ. ನಡು ನಡುವೆ ಸುಧಾಕರನ ಬಗೆಗೆ ಅನೇಕ ವಿಚಾರಗಳು ಬಂದು ನಿಲ್ಲುತ್ತಿದ್ದವು. ಸ್ನೇಹ, ತಮ್ಮಿಬ್ಬರನ್ನು ಒಂದುಗೂಡಿಸಿದುದಕ್ಕೆ ಆತನಿಗೆ ಹೆಮ್ಮೆಯಿತ್ತು. ತನ್ನಿಂದಾಗುವ ಸಹಾಯವನ್ನು ಮಾಡಲು ಮಾಧವನಿಗೆ ಆತುರ. ಸಹಾಯ ಮಾಡಿದೆನೆಂಬ ಸಾತ್ವಿಕ ಅಹಂಕಾರ ಆತನಲ್ಲಿ ಮೂಡುತ್ತಿರಲಿಲ್ಲ. ಅದು ಸ್ನೇಹಋಣ, ಮನುಷ್ಯ ನಾಗಬಯಸುವವನ ಕರ್ತವ್ಯವೆಂದು ಬಗೆದಿದ್ದ. ಸಾಯಂಕಾಲ ಪ್ರಿನ್ಸಿಪಾಲರನ್ನು ಕಂಡು ಹೇಗೆ ಪ್ರಸ್ತಾಪಿಸಬೇಕು ? ಸುಧಾಕರನಿಗೆ ಇನ್ನೊಂದು ವರುಷ ಹಣದ ತೊಂದರೆಯಿಲ್ಲದಂತೆ ಮಾಡಬೇಕಾದರೆ ಏನು ಮಾಡಬೇಕು ? ಹೀಗೆಯೇ ಯೋಚನೆಯಲ್ಲಿ ಸಮಯ ಜಾರಹತ್ತಿತು.

"ಒಳ್ಳೆಯ ಕಾರ್ಯಕ್ಕೆ ವಿಘ್ನ ಬರಲಾರದು. ಒಳ್ಳೆಯದರಲ್ಲಿಯೇ ಪರ್ಯವಸಾನ ಹೊಂದುತ್ತದೆ, ದೇವರಿದ್ದಾನೆ...." ಎಂದು ಧೈರ್ಯತಾಳಿದ.

ಸುಧಾಕರನ ಬದುಕು ಯಾವ ಆತಂಕಗಳಿಲ್ಲದೆ ಬೆಳೆದು ಬರುವಂತಿದ್ದರೆ ಹೇಗಾಗುತ್ತಿತ್ತು ? ಉಳಿದ ಹುಡುಗರಂತೆ ಆತನೂ ಮೋಜು ಮಾಡಿ, ಮನೆಯ ಯಾವ ವ್ಯಾಪಗಳಿಲ್ಲದೇ ಕಲಿಯುವಂತಹ ಸ್ಥಿತಿಯಿದ್ದರೆ....? ಆತನಿಗಾಗಿ ಮರುಕಪಡುವದೊಂದೆ ತನ್ನ ಪಾಲಿಗೆ ಬಂದುದಕ್ಕೆ ಮಾಧವನಿಗೆ ವ್ಯಥೆಯಾಯ್ತು. ತನ್ನ ಸ್ಥಿತಿಯಾದರೂ ಏನಿದೆ? ಇದ್ದುದರಲ್ಲಿ ಚೆನ್ನಾಗಿತ್ತಾದರೂ ಇನ್ನೊಬ್ಬರಿಗೆ ಆಸರ ನೀಡುವಂತಹ ಒಳ್ಳೆ ಸ್ಥಿತಿಯಾಗಿರಲಿಲ್ಲ. ಒಬ್ಬರೊಬ್ಬರ ಸಂಕಷ್ಟಗಳಲ್ಲಿ

ನೆರವಾಗಬೇಕೆಂದು ಹೃದಯ ಹಲುಬಿದರೂ ವಸ್ತುಸ್ಥಿತಿ ಮನಸನ್ನು ಹಿಂಡು ತ್ತಿತ್ತು. ತುಸು ಹೆಚ್ಚುಕಡಿಮೆ ಇಬ್ಬರೂ ಒಂದೇ ನಾವಿನಲ್ಲಿ ತೇಲುವವರೇ!

...ಒಂದೇ ನಾವಿನಲ್ಲಿ ತೇಲುವವರೇ ಹೆಚ್ಚಿರಬಹುದೇನೋ ನಮ್ಮ ದೇಶ ದಲ್ಲಿ, ಎಂದೆನಿಸಿತಾತನಿಗೆ.

ಓದುತ್ತಿರುವಾಗ ಮಧ್ಯೆ ಮಧ್ಯೆ ಈ ವಿಚಾರಗಳು ಬಂದು ನಿಲ್ಲುತ್ತಿದ್ದವು. ಪುಸ್ತಕ ಮುಚ್ಚುತ್ತಿದ್ದ, ಮತ್ತೆ ಓದುತ್ತಿದ್ದ. ಕೊನೆಗೆ ಓದು ಸಾಗದಂತಾಯ್ತು. ಕುಳಿತಲ್ಲಿಯೇ ಒರಗಿದ.

ಒಂದು ಗಂಟೆ ಕಳೆದಿರಬಹುದು. ಬಾಗಿಲ ಬಳಿ ಕಾಲ ಸಪ್ಪಳ ಕೇಳಿ ದಂತಾಯ್ತು. ಬಂದವರು ನಾಲ್ಕಾರು ಜನ ಇದ್ದಿರಬೇಕೆಂದೆನಿಸಿತು. ಬಾಗಿಲು ಬಡೆಯುತ್ತ ಜೋರಾಗಿ, ಜೋಡುಧ್ವನಿಯಲ್ಲಿ "ಮಾಧವರಾವ್! ಓ, ಮಾಧವ ರಾವ್!" ಎಂದು ಕೂಗಿದಂತಾಯ್ತು.

ಮಾಧವ ಎದ್ದು ಬಾಗಿಲು ತೆರೆದ. ರಾಮನಾಥ, ಜಾನಿ, ಬಾಳಕೃಷ್ಣ, ಗೋಪಾಲ ಎಲ್ಲರೂ ಬಂದಿದ್ದರು. ಇಂತಹ ಅಸಮಯದಲ್ಲಿ ಇವರೇಕೆ ಬಂದ ರೆಂದು ಮಾಧವನಿಗೆ ಅಚ್ಚರಿಯಾಯ್ತು.

"ಬರ್ರಿ, ಒಳಗೆ." ಎಂದು ಸ್ವಾಗತಿಸಿದ.

"ನಾವು ಬರುವಂತಿಲ್ಲ; ನೀವೇ ಬರಬೇಕು ಸಧ್ಯ, ರಾಮನಾಥನ ಕೋಣೆಗೆ. ಮತ್ತೆ ಸುಧಾಕರ ಎಲ್ಲಿದ್ದಾರೆ? ಅವರ ಕೋಣೆಯಲ್ಲಿ ನೋಡಿಯೇ ಬಂದೆವು." ಎನ್ನುತ್ತ ಜಾನಿ ಒಳಗೆ ಕಾಲಿಟ್ಟ.

ಸುಧಾಕರ ಇಲ್ಲಿಯೇ ಮಲಗಿದ್ದಾನೆ. ಅದಿರಲಿ, ಈಗೇನು ರಾಮನಾಥನ ಕೋಣೆಯಲ್ಲಿ? ನನಗೇನೂ ತಿಳಿಯದಾಗಿದೆಯಲ್ಲ!"

"ಅದೆಲ್ಲ ಅಲ್ಲಿ ಹೋದ ಮೇಲೆಯೇ ತಿಳಿಯುವದು. ಏಕೋ ರಾಮನಾಥ?" ಎನ್ನುತ್ತ ಶಶಿ ರಾಮನಾಥನೆಡೆಗೆ ನಗುತ್ತ ನೋಡಿದ.

ಇದೇನೋ ಮೋಜಿನ ರಹಸ್ಯವಿರಬೇಕೆಂದುಕೊಂಡ ಮಾಧವ. ಇಸ್ಪೀಟು ಆಡಲಿಕ್ಕೆ ಕರೆಯುತ್ತಿರಬಹುದು, ಇಲ್ಲವೆ ಹಾಳು ಹರಟೆಗೆ ಕರೆದೊಯ್ಯುತ್ತಿರ ಬಹುದೆಂದುಕೊಂಡ. ಆದರೂ ಇಂತಹ ಮಧ್ಯಾಹ್ನದಲ್ಲಿ ಊರೊಳಗಿಂದ ಇಷ್ಟು ದೂರದವರೆಗೆ ಈ 'ಚೌಕಳಿ' ಬರಬೇಕಾದರೆ ವಿಶೇಷವೇನೋ ಇರಬಹುದೆಂದು ಊಹಿಸಿದ.

ಸುಧಾಕರನ ಭುಜವನ್ನು ಅಲುಗಿಸುತ್ತ "ಓ! ಸುಧಾಕರ, ಏಳು ಮಹಾರಾಯಾ....ನಿನ್ನ ಸ್ವಾಗತಕ್ಕಾಗಿ ನಾವೆಷ್ಟು ಜನ ಬಂದಿದ್ದೇವೆ ನೋಡು!" ಎನ್ನುತ್ತ ಜಾನಿ ಎಚ್ಚರಿಸಿದ.

ಸುಧಾಕರ ಕಣ್ಣು ಬಿಟ್ಟು ನೋಡುತ್ತಾನೆ, ಕೋಣೆಯ ತುಂಬ ತಲೆಗಳು! ಇನ್ನೂ ನಿದ್ದೆಯ ಮಬ್ಬಿನಲ್ಲಿದ್ದ ಆತ ಎದ್ದು, ತೀಲುಧ್ವನಿಯಲ್ಲಿ ಆಕಳಿಸುತ್ತ "ಇದೇನು ದಾಳಿ ಮಾಡಿದ್ದೀರೋ?" ಎಂದು ಮೇಲಕ್ಕೆದ್ದು ಮೈಯೊಡ್ಡು ಮುರಿದ.

"ದಾಳಿ ರಾಮನಾಥನ ಕೋಣೆಗೆ. ಬೇಗ ನಡೆ." ಎಂದ ಶಶಿ.

ಸ್ನೇಹಿತರೆಲ್ಲ ರಾಮನಾಥನ ಕೋಣೆಗೆ ನಡೆದರು. ಕೋಣೆಯಲ್ಲಿ ಬಂದು ನೋಡಿದಾಗ ಮಾಧವನಿಗೆ ವಿಸ್ಮಯವಾಯಿತು. ಮಧ್ಯದಲ್ಲಿ ಕಾಗದ ಹಾಸಿ ಅದರ ಮೇಲೆ ಅವಲಕ್ಕಿಯನ್ನು ಗುಡ್ಡದಾಕಾರದಲ್ಲಿ ಹಾಕಿದ್ದರು. ಅದರ ಬದಿಯಲ್ಲಿ ಬಾಳೆಯ ಹಣ್ಣುಗಳು! ಎಲ್ಲರೂ ಸುತ್ತಲೂ ಕುಳಿತುಕೊಂಡರು.

ಗುಡ್ಡ ಸವೆಯುತ್ತ ನಡೆಯಿತು; ಕೋಣೆಯ ಮೂಲೆಯಲ್ಲಿ ಬಾಳೆ ಹಣ್ಣಿನ ಸಿಪ್ಪೆ ರಾಶಿಯಾಗಿ ಬಿದ್ದವು. ಚಹ ಮಾಡಲು ಏಳುವ ಮುನ್ನ ರಾಮನಾಥ ತನ್ನ ಪಾಲಿನ ಅವಲಕ್ಕಿಯನ್ನು in advance ಎರಡೂ ಮುಷ್ಟಿಯಲ್ಲಿ ತೆಗೆದುಕೊಂಡನಲ್ಲದೆ ಬಾಯಲ್ಲಿಯೂ ತುಂಬಿದ್ದರಿಂದ ಮುಖ ಹನುಮಪ್ಪನ ಮುಖದ ರೂಪ ತಳೆದಿತ್ತು.

"ಇದರ ಕಾರಣ ತಿಳಿಯಲಿಲ್ಲವಲ್ಲ?" ಕುತೂಹಲದಿಂದ ಸುಧಾಕರ ಕೇಳಿದ.

"ನಮಗೆ ಅದನ್ನು ರಸವತ್ತಾಗಿ ಹೇಳಲು ಬಾರದು. ಆ ಮಾರುತಿರಾಯನನ್ನೇ ಕೇಳಿರಿ." ಎನ್ನುತ್ತ ರಾಮನಾಥನೆಡೆಗೆ ಕೈಮಾಡಿದ.

ರಾಮನಾಥನಿಗೆ ಗಂಟಲಲ್ಲಿ ಸಿಕ್ಕಿದಂತಾಗಿತ್ತು. ಇತ್ತ ಮಾತನಾಡಲು ಬಾರದು; ನುರಿಸಲೂ ಬಾರದು. ಏನೋ ಹೇಳಬೇಕೆಂಬ ತವಕ ಗಂಟಲವರೆಗೆ ಬರುತ್ತಿತ್ತು. ಮಧ್ಯೆ ಅರೆನುರಿದ ಅವಲಕ್ಕಿ ಆತಂಕವಾಗಿತ್ತು. ಅಂತೂ ಗಡಬಡಿಸಿಕೊಂಡು ನುಂಗಿದ, ಬಹು ಪ್ರಯಾಸದಿಂದ. ನೀರು ಕುಡಿಯುತ್ತ ನಾಟಕೀಯ ಧ್ವನಿಯಲ್ಲಿ "ನನಗೆ ಹೇಳಲು ನಾಚಿಕೆಯಾಗುತ್ತದೆ. ನೀನೆ ಹೇಳು ಶಶಿ." ಎಂದು ಸಲಜ್ಜಿತ ವಧುವಿನಂತೆ ಒಯ್ಯಾರವಾಗಿ ಹೇಳಿದ. ಆತನ ನಿಲುವು,

ಆ ಧ್ವನಿ, ಮುಖಮುದ್ರೆಗಳು ನಗೆ ತಂದವು. ಹೆಂಗಳೆಯರ ಧ್ವನಿಯನ್ನು ಅನುಕರಿಸಿ, ಅವರ ಹಾವಭಾವಗಳಲ್ಲಿ ಮಾತನಾಡುವ ಆತನನ್ನು ನೋಡಿ ಮಾಧವ ಬಿದ್ದುಬಿದ್ದು ನಕ್ಕ.

"ನೀನು ಸ್ತ್ರೀಪಾರ್ಟ್ ಚೆನ್ನಾಗಿ ಹಾಕುತ್ತೀ ನೋಡು" ಎಂದ ಮಾಧವ.

ಬಾಯಿಯಲ್ಲಿ ಅವಲಕ್ಕಿಯನ್ನು ನುರಿಸುತ್ತಿದ್ದ ಶಶಿ ಹೇಳಿದ:

"ಈ ಸಮಾರಂಭದ ಕಾರಣ ಹೇಳಲಾ ? ರಾಮನಾಥನಿಗೆ ಮದುವೆ ನಿಶ್ಚಯವಾಗಿದೆ."

"ಹೌದೇನೋ ?" ಎನ್ನುತ್ತ ಮಾಧವ ಆತನೆಡೆಗೆ ನೋಡಿದ.

"ಮದುವೆ ನಿಶ್ಚಯಕ್ಕೆ ಸಿಹಿ ಏನಾದರೂ ಮಾಡಬೇಕಲ್ಲವೇ? ಈ ಹೊಟ್ಟೆ ಯುರಿಯುವ ಖಾರ ಒಳ್ಳೆಯದಲ್ಲ." ಎನ್ನುತ್ತ ಸುಧಾಕರ ನೀರು ಕುಡಿಯಲು ಎದ್ದ.

"ಸಿಹಿ ಮಾಡಿಸಬಹುದಾಗಿತ್ತು ಸುಧಾಕರ. ಆದರೆ ನನ್ನ ಹೃದಯ ದುಃಖದಿಂದ ಭಾರವಾಗಿದೆ !" ನಾಟಕದಲ್ಲಿಯ ಭಗ್ನಪ್ರಣಯಿಯಂತೆ ಮಾತನಾಡಿದ ರಾಮನಾಥ.

ರಾಮನಾಥನ ಹಾಸ್ಯದ ರೀತಿಯೇ ಹಾಗೆ. ಜೀವನದಲ್ಲಿ ಯಾವ ಪ್ರಸಂಗಕ್ಕೂ ಆತ "ಗಂಭೀರ" ಎಂದು ಕರೆಯುತ್ತಿರಲಿಲ್ಲ. ಎಲ್ಲವನ್ನೆಲ್ಲ ನಗುತ್ತ ಎದುರಿಸುತ್ತಿದ್ದ. ಹರಟೆಯಲ್ಲಂತೂ ಆತ ಬೇಕೇಬೇಕು. ಆತನಿಲ್ಲದ ಹರಟೆಯೆಂದರೆ ಉಪ್ಪಿಲ್ಲದ ಅವಲಕ್ಕಿಯಂತೆ. ವಿವಿಧ ಹಾವಭಾವಗಳಲ್ಲಿ ಎಲ್ಲರನ್ನೂ ಅನುಕರಣೆ ಮಾಡಿ ಮಾತನಾಡಿ ನಗಿಸುತ್ತಿದ್ದ. ಆದರೆ ಆತ ಕೋಡಂಗಿಯಾಗಿರಲಿಲ್ಲ. ಆತನ ಮಾತಿನಲ್ಲಿಯ ಹಾಸ್ಯ ರಸವತ್ತಾಗಿರುತ್ತಿತ್ತು.

ಚಹ ಸಿದ್ಧವಾಯಿತು. ಅರ್ಧಕ್ಕೆ ನಿಂತಿದ್ದ ಮಾತನ್ನು ಸುಧಾಕರ ಮತ್ತೆ ಮುಂದುವರಿಸಿದ:

"ಮದುವೆ ನಿಶ್ಚಯವಾದುದಕ್ಕೆ ದುಃಖವೇಕೆ ರಾಮನಾಥ ?"

"ನೀನಿನ್ನೂ ಹಸು ಸುಧಾಕರ. ಪ್ರೇಮಿಗಳ ಹೃದಯದ ಭಾವನೆಗಳು ನಿನಗೆ ಹೇಗೆ ಅರ್ಥವಾಗಬೇಕು ?" ಎನ್ನುತ್ತ ನಿರಾಸೆಯ ಉಸಿರನ್ನೆಳೆದ ರಾಮನಾಥ.

"ಅಭಿನಯ ಉತ್ತಮವಾಗಿದೆ. ನೀನು ನಾಟಕಕಂಪನಿಯನ್ನೇಕೆ ಸೇರ

ಬಾರದು ?" ಜಾ:ನಿ ಚೇಷ್ಟೆ ಮಾಡಿದ.

ಆತನ ಅಭಿನಯವನ್ನು ನೋಡುವ ಮೋಜಿನ ಬಯಕೆ ಎಲ್ಲರಿಗೂ. ಅದಕ್ಕೆ ರಸಭಂಗ ಉಂಟಾಗಬಾರದೆಂದು, ಮಾಧವ ಭಗ್ನಪ್ರೇಮಿಯನ್ನು ಸಾಂತ್ವನ ಗೊಳಿಸುವ ಧ್ವನಿಯಲ್ಲಿ "ಮುಂದೇನಾಯಿತು ?" ಎಂದು ಕೇಳಿದ.

"ನಾನೊಬ್ಬ ಹುಡಿಗೆಯನ್ನು ಪ್ರೀತಿಸಿದ್ದೆ. ಜೊತೆಯಾಗಿಯೇ ಓದುತ್ತಿದ್ದಳವಳು. ನನ್ನ ಅನುರಾಗ ಸಫಲತೆಯಲ್ಲಿ ಕೊನೆಗೊಳ್ಳಲಿಲ್ಲ. ನನ್ನ ಹೃದಯವೇ ಸೀಳಿದಂತಾಗಿದೆ !" ಎನ್ನುತ್ತ ಎದೆಯ ಮೇಲೆ ಕೈಯಿಟ್ಟುಕೊಂಡ.

"ಏಕೆ ? ನಿಮ್ಮ ಮನೆಯಲ್ಲಿ ಬೇಡವೆಂದರೇ ?" ಶಶಿ ಕೇಳಿದ.

"ಇಲ್ಲ."

"ಹಾಗಾದರೆ ವಿಜಾತಿಯವಳಿದ್ದಳೇ ?" ಗೋಪಾಲ ನಡುವೆ ಬಾಯಿ ಹಾಕಿದ.

"ಅದೂ ಇಲ್ಲ. ಎಲ್ಲವೂ ನಾನು ಬಯಸಿದಂತೇ ಆಗಿತ್ತು. ಮದುವೆಯ ದಿನವೊಂದನ್ನು ಗೊತ್ತುಪಡಿಸುವದು ಮಾತ್ರ ಉಳಿದಿತ್ತು....ಆದರೆ...."

"ಏನಾದರೂ ಅನರ್ಥ ಸಂಭವಿಸಿತೇನು ?" ಕಾತರದಿಂದ ಸುಧಾಕರ ಕೇಳಿದ.

"ಅನರ್ಥವೇನು ? ಉಳಿದದ್ದೆಲ್ಲ ಅಣಿಯಾಗಿತ್ತು. ಹುಡಿಗೆಯ ಸಮ್ಮತಿಯೊಂದು ಮಾತ್ರ ಬೇಕಾಗಿತ್ತು."

ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಕ್ಕರು. ರಾಮನಾಥನ ಕಥೆ ಸ್ವಾರಸ್ಯವಾಗಿತ್ತು.

"ಕತೆ ಚೆನ್ನಾಗಿ ಹೇಳುತ್ತೀ ರಾಮನಾಥ ! ಅಭಿನಯವನ್ನು ಚೆನ್ನಾಗಿ ಸಾಧಿಸಿಕೊಂಡಿರುವಿಯಲ್ಲ !" ಎಂದು ಮಾಧವ ಹೊಗಳಿದ.

ಹರಟಿಗೆ ಕುಳಿತರೆ ವೇಳೆಯ ಕಡೆಗೆ ನೋಡುವವರಾರು ? ಹೊತ್ತು ಆಗಲೆ ಐದು ಗಂಟೆಗೆ ಸಮೀಪಿಸಿತ್ತು. ಪ್ರಿನ್ಸಿಪಾಲರ ಮನೆಗೆ ಹೋಗುವದು ಒಮ್ಮೆಲೆ ನೆನಪಾಯಿತು ಮಾಧವನಿಗೆ. "Congrats ರಾಮನಾಥ, ಮದುವೆಗೆ ನಮ್ಮನ್ನು ಮರೆಯಬೇಡ." ಎಂದು ಹೇಳಿ ಮಾಧವ ಏಳಲು ಅಣಿಯಾದ.

ಆತನನ್ನು ಕೆಣಕಿ ಮೋಜು ನೋಡಬೇಕೆಂದು ಶಶಿ "ಹುಡಿಗಿ ಹೇಗೆ ಇದ್ದಾಳೆ ? ಕಲಿತವಳಿದ್ದಾಳೆಯೇ ?" ಎಂದು ಕೇಳಿದ.

"ಮನೆಯಲ್ಲಿಯ ಸಂಬಂಧ. ಅಕ್ಕನ ಮಗಳು."

ಈ ಒಂದು ಮಾತಿನಲ್ಲಿಯೇ ಎಲ್ಲ ಪ್ರಶ್ನೆಗಳಿಗೂ ಉತ್ತರವಿತ್ತು.

ಸಿಗರೇಟಿನ ಅಮಲಿನಲ್ಲಿ ಉಳಿದವರೆಲ್ಲ ಗೋಡೆಗೆ ಒರಗಿಕೊಂಡೇ ಮಾತ ನಾಡುತ್ತಿದ್ದರು. ಬಾಳಕೃಷ್ಣ ನಡುನಡುವೆ ಆಕಳಿಸುತ್ತಿದ್ದ. ಮಾಧವ ಹೊರ ಡುವ ಸೂಚನೆಯನ್ನು ಕೊಡುತ್ತ ಮೇಲಕ್ಕೆದ್ದ.

"Thanks, ರಾಮನಾಥ! ಮೇಲಿಂದ ಮೇಲೆ ಹೀಗೇ ಆಗುತ್ತಿರಲಿ ಸಮಾರಂಭಗಳು." ಎನ್ನುತ್ತ ಕೈಕುಲುಕಿ "ನಾವು ಹೋಗಬೇಕಾಗಿದೆ, ಸ್ವಲ್ಪ ಕೆಲಸವಿದೆ. ಕ್ಷಮಿಸು." ಎಂದು ಸುಧಾಕರನೊಂದಿಗೆ ಹೊರಬಂದ.

ಜಾ:ನಿಯ ಹರಟೆ, ಹಾಡು ಇನ್ನೂ ಸಾಗಿದ್ದವು.

ರಾಮನಾಥನ ಕೋಣೆಯಿಂದ ಹೊರಬಂದ ಮೇಲೆ ಇಬ್ಬರೂ ಕೆಲಹೊತ್ತು ಮಾತನಾಡದೆ ನಡೆದರು.

"ನಾನು ಕೋಣೆಯಲ್ಲಿರುತ್ತೇನೆ. ನೀನು ಬೇಗನೆ ಬಂದುಬಿಡು. ಪ್ರಿನ್ಸಿ ಪಾಲರನ್ನು ಭೆಟ್ಟಿಯಾಗಿ ಬರೋಣ." ಎಂದು ಹೇಳಿ ಮಾಧವ ಮುಂದೆ ನಡೆದ.

ಸುಧಾಕರ ಕೋಣೆಯೊಳಗೆ ಕಾಲಿಟ್ಟಾಗ ಹರೀಶ ಹೊರಡುವದರಲ್ಲಿದ್ದ.

"ಬೇಗನೆ ಹೊರಬಿದ್ದಿರಲ್ಲ ಈ ದಿನ?" ಎಂದ ಸುಧಾಕರ.

"ದೂರದ ಆಪ್ತರೊಬ್ಬರು ಬಂದಿದ್ದಾರೆ. ಭೆಟ್ಟಿಯಾಗಲು ಹೇಳಿಕಳುಹಿ ದ್ದಾರೆ. ಮಧ್ಯಾಹ್ನವೆಲ್ಲ ನೀವು ಎಲ್ಲಿದ್ದಿರಿ?"

"ಮಾಧವನಲ್ಲಿ ಕುಳಿತಿದ್ದೆ. ರಾಮನಾಥನ ಮದುವೆ ನಿಶ್ಚಯವಾಗಿದೆ ಯಂತೆ. ಅದಕ್ಕಾಗಿ ಚಿಕ್ಕ ಔತಣವನ್ನೇರ್ಪಡಿಸಿದ್ದ."

"ಹೀಗೋ! ಸರಿಯಾಯ್ತು. ನಾನು ತಿರುಗಿ ಬರಲು ತುಸು ತಡವಾದೀತು. ಊಟಕ್ಕೆ ನನಗಾಗಿ ಕಾಯಬೇಡಿರಿ." ಎಂದು ಹೇಳುತ್ತ ಹರೀಶ ಹೊರಗೆ ನಡೆದ.

ಮುಖ ತೊಳೆದುಕೊಂಡು ಬಂದು ಕನ್ನಡಿಯೆದುರು ನಿಂತ ಸುಧಾಕರ. ತೊಡಕಿದ ಕೂದಲುಗಳನ್ನು ಸಾವಕಾಶವಾಗಿ ಬಿಡಿಸುತ್ತ ಅತ್ತ ಇತ್ತ ಅಲೆದಾಡಿದ. ಒಪ್ಪವಾಗಿ ಬಾಚಿಕೊಂಡ. ಶುಭ್ರ ಬಿಳಿ ಪ್ಯಾಂಟು, ಅಂಗಿಯನ್ನು ಧರಿಸಿದ. ಮತ್ತೊಮ್ಮೆ ಕನ್ನಡಿಯಲ್ಲಿ ಮುಖ ನೋಡಿಕೊಂಡು ಹಣೆಯ ಮೇಲೆ ಸಾಲು ಗೊಂಡು ನಿಂತಿದ್ದ ಬೆವರು ಹನಿಗಳನ್ನು ಒರೆಸಿಕೊಂಡು ಹೊರಬಂದ.

ಕೋಣೆಗೆ ಕೀಲಿಯನ್ನು ಹಾಕುತ್ತಿದ್ದ. ಅಷ್ಟರಲ್ಲಿ ಅಂಚೆಯಾಳು "ಸರ್!"

ಎಂದು ಕೂಗುತ್ತ ಬಂದ. "ನಿಮಗೊಂದು 'Express Delivery' ಇದೆ." ಎಂದು ಹೇಳುತ್ತ ಪಾಕೀಟೊಂದನ್ನು ಕೈಯುಲ್ಲಿಟ್ಟ. ಸಹಿ ಮಾಡಿ ಕಾಗದವನ್ನು ಹಿಂತಿರುಗಿ ಕೊಟ್ಟ. ಅಂಚೆಯಾಳು ಹೋರಟು ಹೋದ.

ನೀಲಿ ಬಣ್ಣದ ಪಾಕೀಟು. ಹೊಳಪಿನ ಹೊರಮೈ ಅದಕ್ಕೆ. ಮೇಲೆ ಇಂಗ್ಲೀಷಿನಲ್ಲಿ ಮುದ್ದಾಗಿ ಬರೆದ ಅಕ್ಷರಗಳು. ತಂದೆಯವರದಿರಬಹುದೆಂಬ ಮೊದಲು ಬಂದ ಸಂದೇಹ ಬಹಳ ವೇಳೆ ಉಳಿಯಲಿಲ್ಲ. ಒಡೆದು ಓದಬೇಕೆಂದ. ಅಷ್ಟರಲ್ಲಿ ಮಾಧವ ಒದರಿದ. ತಡವಾಗುತ್ತದೆಂದು ಪಾಕೀಟನ್ನು ಕಿಸೆಯುಲ್ಲಿಟ್ಟು ಕೊಂಡು ಲಗುಬಗೆಯಿಂದ ನಡೆದ.

ಇಬ್ಬರೂ ಕೂಡಿ ಕಾಲೇಜಿನ ಬದಿಯ "Botanical Garden" ದಾಟಿ, ಒಳದಾರಿಯಿಂದ ನಡೆದರು. ತುಸು ದೂರದಲ್ಲಿಯೆ ಪ್ರಿನ್ಸಿಪಾಲರ ಮನೆ. ಯಾವ ಆಡಂಬರವಿಲ್ಲದೆ ಕಟ್ಟಿದ ಸೊಗಸಾದ ಮನೆ ಅದು. ಎದುರಿಗೆ ಬೆಳಿಸಿದ ಸುಂದರ ಕೈತೋಟದಲ್ಲಿ ಜಾತಿವಿಜಾತಿಯ ಹೂಗಿಡಗಳು ಸ್ವಾಗತಕ್ಕೆ ಸಿದ್ಧವಾಗಿ ನಿಂತಿದ್ದವು. ಒಳಗೆ ಕಾಲಿಟ್ಟರು.

ಮನೆ ಪ್ರಶಾಂತವಾಗಿತ್ತು, ಮೌನವಾಗಿತ್ತು. ಹೊರಗಿನ ಕೋಣೆಯಲ್ಲಿ ಕಸಗುಡಿಸುತ್ತಿದ್ದ ಆಳನ್ನು ಮೆಲ್ಲಗೆ ಕರೆದ ಮಾಧವ.

"ಸಾಹೇಬರು ಇದ್ದಾರೆಯೇ?"

ಪೊರಕೆಯನ್ನು ಅಲ್ಲಿಯೇ ಕೆಳಗಿಟ್ಟು ಬಂದು "ಒಳಗೆ ಇದ್ದಾರೆ. ಯಾರು ಬಂದಿದ್ದಾರೆಂದು ಹೇಳಲಿ?" ಎಂದು ಕೇಳಿದ.

"ವಿದ್ಯಾರ್ಥಿಗಳು ಬಂದಿದ್ದಾರೆಂದು ಹೇಳು."

ಒಂದೆರಡು ನಿಮಿಷಗಳಲ್ಲಿ ಒಳಗಿಂದ ಬಂದ ಆಳು "ಒಳಗೆ ಹೋಗಿರಿ." ಎಂದು ಹೇಳಿ ಮತ್ತೆ ಕೆಲಸದಲ್ಲಿ ತೊಡಗಿದ.

ವಯಸ್ಸು, ಅನುಭವಗಳಿಂದ ಮಾಗಿದ ೫೩–೫೪ ವರುಷದ ಪ್ರಿನ್ಸಿಪಾಲರು ಯಾವುದೋ ಹೊಸ ಪುಸ್ತಕದಲ್ಲಿ ತಲ್ಲೀನರಾಗಿದ್ದರು. ಓದುವದರಲ್ಲಿ ಅವರ ಅಭಿರುಚಿ ಇಂದಿಗೂ ಕಡಿಮೆಯಾಗಿರಲಿಲ್ಲ. ಬದುಕೆಲ್ಲ ಜ್ಞಾನಾರ್ಜನೆಗಾಗಿಯೇ ಇದೆಯೆಂದು ಸೂಚಿಸುತ್ತಿದ್ದವು ಅವರ ವಿಶಾಲ ಹಣೆಯ ಮೇಲೆ ಮೂಡಿದ ಗೆರೆಗಳು. ಒಳಗೆ ಬಂದವರೆಡೆಗೆ ಅವರು ನೋಡುವ ದೃಷ್ಟಿಯಲ್ಲಿ ಅಭಯವಿತ್ತು. ತಂದೆಯಂತೆ ಮಮತೆಯಿಂದ "ಕುಳಿತುಕೊಳ್ಳಿರಿ." ಎಂದು ಹೇಳಿ, "ರಾಮಾ,"

ಎಂದು ಕೂಗಿದರು ಸಾವಕಾಶವಾಗಿ.

ಒಳಗಿನಿಂದ ಬಂದ ರಾಮು ಕುಳಿತ ಮೂವರನ್ನು ನೋಡಿದ. ಸಂಕೇತದ ಅರ್ಥವಾದವನಂತೆ ಮತ್ತೆ ಒಳಗೆ ಹೋದ.

"ಏನು ಕೆಲಸವಿದೆ?" ಎಂದು ಕೇಳಿದರು.

ಯಾರು ಮೊದಲು ಮಾತನಾಡಬೇಕೆಂಬುದೇ ತಿಳಿಯದಾಯ್ತು ಇಬ್ಬರಿಗೂ. ಮಾಧವನೆ ಧೈರ್ಯ ತಂದುಕೊಂಡು "ಸರ್! ನಿಮ್ಮಿಂದ ಒಂದು ಉಪಕಾರವಾಗಬೇಕಾಗಿದೆ...." ಎಂದು ದೈನ್ಯದಿಂದ ಹೇಳಿದ.

"ಅಂತಹದೇನಪ್ಪಾ ಹೇಳು ?"

ಅನುಮಾನಿಸುತ್ತಲೆ ಮಾಧವ ಪೀಠಿಕೆ ಹಾಕಿದ :

"ಸರ್ ! ಈತ ನನ್ನ ಸ್ನೇಹಿತ ಸುಧಾಕರ. ನಮ್ಮ ಕಾಲೇಜಿನಲ್ಲಿಯೇ ಓದುತ್ತಿದ್ದಾನೆ. ಈ ವರುಷವೇ ಹೊಸದಾಗಿ ಕಾಲೇಜಿಗೆ ಸೇರಿದ್ದಾನೆ. ಈಗ ಈತನಿಗೆ...."

"ಎಷ್ಟು ದೀರ್ಘ ಪೀಠಿಕೆ ಇದು ! ನೀನು ಎಂ. ಆರ್. ಭಾಂಡಾರಿಯಲ್ಲವೇ? ಅಪರಿಚಿತನ ವಿಷಯವಾಗಿ ಹೇಳುತ್ತಿರುವಂತೆ ಮಾಡುತ್ತೀಯಲ್ಲ. ಈತ ಸುಧಾಕರ. ನಮ್ಮ ಕಾಲೇಜಿನ "T. T. Champion" ಅಲ್ಲವೆ ?"

ಇಬ್ಬರಿಗೂ ಆಶ್ಚರ್ಯ ಆನಂದಗಳೆರಡೂ ತುಂಬಿ ಬಂದವು. ಸಾವಿರಾರು ಹುಡುಗರಲ್ಲಿ ತಮ್ಮನ್ನು ಗುರುತಿಸಿ ನೆನಪಿನಲ್ಲಿಟ್ಟುಕೊಳ್ಳುವದೆಂದರೆ !

"ಈ ಸಲ ನೀನು ಎಂ. ಎ. ಮುಗಿಸುತ್ತೀಯಲ್ಲವೆ ಮಾಧವ ?"

ಮಾಧವ ಸುಮ್ಮನಿದ್ದ.

"ಹೀಗೇಕೆ ಮುಗ್ಧನಾಗಿದ್ದೀ ? ನನ್ನ ಕಾಲೇಜಿನ ವಿದ್ಯಾರ್ಥಿಗಳ ಪರಿಚಯ ನನಗಿರುವದರಲ್ಲೇನು ಆಶ್ಚರ್ಯವಿದೆ ? ಹೂಂ. ಹೇಳು ಯಾವ ಕೆಲಸಕ್ಕಾಗಿ ಬಂದಿರುವಿರಿ ?"

ಸುಧಾಕರನತ್ತ ಮಾಧವ ನೋಡಿದ.

ಸುಧಾಕರ ತಾನೆ ಸಾವರಿಸಿಕೊಂಡು ಹೇಳಹತ್ತಿದ:

"ಸರ್! ನಾನು ಬಡವ. ತಂದೆಯವರಿಗೆ ನಾನೊಬ್ಬನೆ ಆಸರ. ತಮ್ಮಂದಿರಿಬ್ಬರೂ ಚಿಕ್ಕವರಿದ್ದಾರೆ. ತಂದೆಯವರಿಗೆ ವೃದ್ಧಾಪ್ಯ. ಬಡತನದಲ್ಲಿಯೂ ಕಲಿಯುವ ಹವ್ಯಾಸಕ್ಕೆ ಬಿದ್ದಿದ್ದೇನೆ. ಈ ವರುಷ ನನಗೆ ಶಿಕ್ಷಣ ಮುಂದುವರಿಸಲು

ಅಸಾಧ್ಯವಾಗಹತ್ತಿದೆ...."

"ಕಾರಣ ?"

"ಫೀ ತುಂಬಲು ಹಣವಿಲ್ಲ. ನಿಮ್ಮನ್ನಲ್ಲದೆ ಯಾರಲ್ಲಿ ಮೊರೆಯಿಡಬೇಕು ನಾನು? ನನ್ನ ಬದುಕಿಗೊಂದು ನೆಲೆ ತಂದುಕೊಡುವದು ನಿಮ್ಮ ಕೈಯ್ಯಲ್ಲಿದೆ...."

ಇಷ್ಟು ಹೇಳಬೇಕಾದರೆ ಸುಧಾಕರನ ಉಸಿರು ತಡೆತಡೆದು ಬರುತ್ತಿತ್ತು. ತನ್ನ ದೈನ್ಯಾವಸ್ಥೆಯನ್ನು ನಿವೇದಿಸಿ, ಆಶಾಪೂರ್ಣ ದೃಷ್ಟಿಯಿಂದ ಪ್ರಿನ್ಸಿಪಾಲ ರೆಡೆಗೆ ನೋಡಿದ.

ಪ್ರಿನ್ಸಿಪಾಲರ ಮೀಸೆಯ ಹಿಂದೆ ತುಂಟತನ ಅವಿತಿತ್ತು. ಇಳಿವಯಸ್ಸಿನಲ್ಲಿ ದ್ದರೂ ಒಂದೊಂದು ಸಲ ಅವರು ಶಾಲೆಯ ಬಾಲಕನಂತೆ ತುಂಟರಾಗುತ್ತಿದ್ದರು ಮಾತಿನಲ್ಲಿ. ಬೆಳೆಯುವ ಹುಡುಗರ ಮಧ್ಯದಲ್ಲಿಯೇ ಅವರ ಬಾಳು ಹರಿದು ಬಂದಿತ್ತು. ಅವರಿಗೆ ತಮ್ಮ ಮುಪ್ಪಿನ ಅರಿವೇ ಇರುತ್ತಿರಲಿಲ್ಲ. ಹುಬ್ಬುಗಳ ನ್ನೇರಿಸಿ, ಕಡ್ಡಿಯನ್ನು ಮುರಿದಂತೆ "ಅದೆಲ್ಲ ಸರಿಯಾಯ್ತು. ಬಡವರಿಗಾಗಿ ಈ ಕಾಲೇಜು ಇಲ್ಲ" ಎಂದು ಹೇಳಿ ಸುಧಾಕರನೆಡೆಗೆ ನೋಡಿದರು. ಮಾಧವ ನಂತೂ ಕುಸಿದು ಹೋದ. ಈ ಬಗೆಯ ಪ್ರತಿಕ್ರಿಯೆ ಬರುವದೆಂದು ಆತ ಕನಸಿ ನಲ್ಲಿಯೂ ಎಣಿಸಿರಲಿಲ್ಲ.

ಸುಧಾಕರನಿಗಂತೂ ಕೊರಳು ಬಿಗಿದು ಬಂದಿತು. ತನ್ನ ಬದುಕು ಇನ್ನು ಮುಗಿದಂತಾಯ್ತೆಂದು ತಿಳಿದ. ಕಂಣಲ್ಲಿ ನೀರು ತುಂಬಿ ಬಂದಿತು. ಏನೋ ಹೇಳಬೇಕೆನ್ನುವದರಲ್ಲಿ ಪ್ರಿನ್ಸಿಪಾಲರು ಎದ್ದು ಮುಂದೆ ಬಂದು ಆತನ ಭುಜ ಚಪ್ಪರಿಸುತ್ತ "ನೀನು ಹುಡಿಗೆಯಾಗಿ ಹುಟ್ಟಬೇಕಾಗಿತ್ತು ನೋಡು. ಅಳುವ ದೇಕೆ? ಬದುಕಿನಲ್ಲಿ ಧೈರ್ಯ ಬೇಕು ಸುಧಾಕರ. ನಿನಗಿಂತ ವಿಷಮ ಸ್ಥಿತಿಯಲ್ಲಿ ನಾನು ಬೆಳೆದು ವಿಧಿಯೊಂದಿಗೆ ಹೆಣಗಿದ್ದೇನೆ." ಎನ್ನುತ್ತ ಶತಪಥ ಹಾಕಹತ್ತಿ ದರು. ತಮ್ಮ ಹಿಂದಿನ ಬಾಳು ನೆನಪಾಗಿ ಆವೇಶ ಬಂದಂತಾಗಿತ್ತು ಅವರಿಗೆ. "ನನಗೆ ವಿದ್ಯಾರ್ಥಿಗಳ ಸಂಕಷ್ಟಗಳು ಗೊತ್ತು. ಅನೇಕರ ದಾರುಣ ಕತೆಗಳನ್ನು ಕೇಳಿದ್ದೇನೆ. ಪರಿಸ್ಥಿತಿಗಾಗಿ ಹೆದರಬಾರದು ನೋಡು. ಈಗ ನಿನ್ನನ್ನು ನೋಡಿದರೆ ನನಗೆಂತಹ ಅಭಿಮಾನ ಗೊತ್ತೆ? ನಮ್ಮ ಕಾಲೇಜಿನ ಶ್ರೇಷ್ಠ ಆಟಗಾರ ನೀನು.. ಆಟಗಾರನಾಗಿ ಅಳಬೇಕೆ ?....ಥೂ.... ಅದಿರಲಿ, ಈಗ ನೀನು ಕೊಡಬೇಕಾದ ಫೀಯೆಷ್ಟಿದೆ ?"

"ಈ ಟರ್ಮಿನದು, ಸರ್!"

"ಹೂಂ!....ನೀನೇನು ಚಿಂತಿಸಬೇಡ. ಅದಕ್ಕೇನಾದರೂ ದಾರೀ ಹುಡುಕೋಣ...."

ಕೃತಜ್ಞತೆಯಿಂದ ಸುಧಾಕರನ ಹೃದಯ ಬಾಗಿತು. ಯಾವ ಶಬ್ದಗಳಲ್ಲಿ ವ್ಯಕ್ತಗೊಳಿಸಬೇಕೆಂಬುದು ಅರಿಯದಂತಾಯ್ತು.

"ಮತ್ತೆ ಮುಂದಿನ ವರುಷ 'Free-ship'ಗಾಗಿ ಅರ್ಜಿ ಮಾಡು. ಎಲ್ಲ ಅನುಕೂಲತೆಗಳು ದೊರೆಯುವಂತೆ ಮಾಡುತ್ತೇನೆ. ಆದರೆ ಒಂದು ಕರಾರಿನ ಮೇಲೆ...." ಎನ್ನುತ್ತ ಆತನೆಡೆಗೆ ನೋಡಿದರು. ಮತ್ತು ಸುಧಾಕರನ ದೃಷ್ಟಿಯಲ್ಲಿ ಹುದುಗಿದ ಪ್ರಶ್ನೆಯನ್ನರಿತುಕೊಂಡರವರು. "ನೀನು ಮುಂದಿನ ವರುಷ 'University Champion' ಆಗಿ ಕಾಲೇಜಿಗೆ ಕೀರ್ತಿ ತರುವ ಭರವಸೆಯನ್ನು ಕೊಡಬೇಕು" ಎಂದು ಮೀಸೆಯಲ್ಲಿಯೆ ನಕ್ಕರು.

ಸಂತೋಷ, ಹೆಮ್ಮೆ, ಕೃತಜ್ಞತೆಗಳಿಂದ ಸುಧಾಕರನ ಹೃದಯ ತುಂಬಿ ಬಂತು.

"ನಿಮ್ಮ ಆಶೀರ್ವಾದ ಬಲದಿಂದ ಆ ಹೆಮ್ಮೆಯ ಸ್ಥಾನವನ್ನು ನಾನು ಗಳಿಸಬಲ್ಲೆ ಸರ್!" ಎಂದು ಆತ್ಮವಿಶ್ವಾಸದಿಂದ ಹೇಳಿದ.

ಒಂದು ಕ್ಷಣ ಸುಧಾಕರನಿಗೆ ಹಿಡಿಸಲಾರದ ಸಂತೋಷವಾಯ್ತು. ತಂದೆಯಂತೆ ಕಂಡ ಪ್ರಿನ್ಸಿಪಾಲರ ಬಗೆಗೆ ಮೂಡಿ ನಿಂತ ಗೌರವ, ವಿಶ್ವಾಸಗಳಿಂದ ಆತ ಮಾತನಾಡದಂತಾದ. ಅತ್ಯಂತ ಕೃತಜ್ಞತೆಯಿಂದ ನಮಸ್ಕರಿಸಿದ.

ಆತನನ್ನು ಮೇಲಕ್ಕೆಬ್ಬಿಸಿದ ಪ್ರಿನ್ಸಿಪಾಲರು "ಈಗ ಸಮಾಧಾನವಾಯಿತಿಲ್ಲೋ? ಯಾವ ಯೋಚನೆಯನ್ನೂ ನೀನು ಮಾಡಬೇಡ ಇನ್ನು; ತಿಳಿಯಿತೇ? ಮನಸ್ಸುಗೊಟ್ಟು ಓದು; ಆಟವಾಡು." ಎಂದು ಆತ್ಮೀಯ ನಗೆಯಲ್ಲಿ ಹೇಳಿದರು. ಮತ್ತೆ ಬಾಗಿಲವರೆಗೆ ಬಂದು, "ರಾಮಾ" ಎಂದು ಕೂಗಿದರು.

ಒಳಗಿನಿಂದ ರಾಮು 'ಟ್ರೇ' ತೆಗೆದುಕೊಂಡು ಬಂದ. ಇಬ್ಬರಿಗೂ ಕಾಫಿ ಕೊಟ್ಟು, ಸಾಹೇಬರ ಟೇಬಲ್ಲಿನ ಮೇಲೊಂದನ್ನಿಟ್ಟು, ಅಪ್ಪಣೆಗಾಗಿ ಕಾಯುತ್ತ ನಿಂತ.

"ನಾನು ರಾತ್ರಿ ಊಟಮಾಡುವದಿಲ್ಲವೆಂದು ಒಳಗೆ ಹೇಳು!" ಎಂದು ಹೇಳಿ ಆತನನ್ನು ಒಳಗೆ ಕಳಿಸಿದರು.

ತಾವು ಸ್ವೀಕರಿಸುವವರೆಗೆ ಕಾಯುತ್ತ ನಿಂತಿದ್ದ ಮಾಧವ-ಸುಧಾಕರರಿಗೆ ಕಾಫಿ ತೆಗೆದುಕೊಳ್ಳಲು ಹೇಳಿ ತಾವೂ ಸಾವಕಾಶವಾಗಿ ಕುಡಿಯಹತ್ತಿದರು.

ಕೊನೆಗೊಮ್ಮೆ ನಮಸ್ಕರಿಸಿ "ಹೋಗಿಬರುತ್ತೇವೆ ಸರ್!" ಎಂದು ಇಬ್ಬರೂ ಮೇಲೆದ್ದರು.

"ಯಾವ ತೊಂದರೆಯಿದ್ದರೂ ಸಂಕೋಚವಿಲ್ಲದೆ ಬರುತ್ತಿರಬೇಕು ನೀವು" ಎಂದು ಹೇಳಿ ಸುಧಾಕರನತ್ತ ತಿರುಗಿ, "ಅಳುತ್ತ ಬರಬಾರದು; ನಗುತ್ತ ಬರಬೇಕು ತಿಳಿಯಿತೇ?" ಎಂದು ಹೇಳಿ ಬೀಳ್ಕೊಟ್ಟರು. ಹೆತ್ತ ತಂದೆಗಿಂತ ಹೆಚ್ಚು ಮಮತೆ, ಅಂತಃಕರಣ, ವಿಶ್ವಾಸಗಳಿಂದ ತುಂಬಿದ ಪ್ರಿನ್ಸಿಪಾಲರ ಹೃದಯವನ್ನು ಕಂಡು ಸುಧಾಕರ ಸಹಸ್ರಾರು ಬಾರಿ ಮನಸ್ಸಿನಲ್ಲಿಯೇ ಅವರಿಗೆ ವಂದಿಸಿದ.

* * *

ಹೊರಗೆ ಸಂಜೆಯ ಬೆಳಕು ಹರಡಿತ್ತು. ಆಗ ಪ್ರಕೃತಿಯಲ್ಲಿಯ ಚೇತನಾ-ಚೇತನವೆಲ್ಲ ದೈವಿಕಸೌಂದರ್ಯ ಪ್ರೀತಿಗಳಿಂದ ತುಂಬಿ ನಿಂತಂತೆ ಕಂಡಿತು. ಸುಧಾಕರನಿಗೆ ಅದೇ ಈಗೊಂದು ತಾಸಿನ ಹಿಂದೆ? ಚಳಿಗಾಲದಲ್ಲಿ ಎಲೆಯುದುರಿ ಬರಲಾಗಿ ನಿಂತ ಗಿಡದಂತೆ ಮ್ಲಾನವಾಗಿ ನಿಶ್ಚೇತನವಾಗಿ ಕಾಣುತ್ತಿದ್ದ ಬಾಳ ವೃಕ್ಷ ಈಗ ಒಮ್ಮೆಲೆ ಹೂತಂತೆ ಕಂಗೊಳಿಸಿತು. ಬದುಕು ನೋಡುವ ಕಂಣಿನಲ್ಲಿದೆಯಲ್ಲವೇ? ಎಂದು ತನ್ನೊಳಗೆ ತಾನೆ ಅಂದುಕೊಂಡ ಸುಧಾಕರ. ಆತನ ಹೃದಯ ಬಾನವಿಸ್ತಾರಕ್ಕೆ ಚಾಚಿತ್ತು. ಎಂದೂ ಇಲ್ಲದ ಸಮಾಧಾನ, ಸಂತೋಷಗಳು ಉಕ್ಕೇರಿದ್ದವು. ಅಂತಹ ಸುಖದ ಗಳಿಗೆಯಲ್ಲಿ ದೂರ ಬಹುದೂರದ ವರೆಗೆ ತಿರುಗಾಡಬೇಕೆಂದೆನಿಸಿತು ಆತನಿಗೆ.

ಇಬ್ಬರೂ ಆತ್ಮತೃಪ್ತಿಯಿಂದ ನಡೆಯುತ್ತಿದ್ದರು. ಬೀದಿಯಲ್ಲಿ ಓಡಾಡುವ ಜನ, ವಾಹನಗಳೆಲ್ಲ ಅಂದು ವಿಶೇಷ ಉತ್ಸಾಹ, ಬೆಡಗುಗಳಿಂದ ನಡೆದಂತೆ ಸುಧಾಕರನಿಗೆ ಭಾಸವಾಯಿತು. ಆನಂದ ತುಂಬಿದ ಹೃದಯಕ್ಕೆ ವಿಶ್ವವೆಲ್ಲ ಆನಂದಮಯವಾಗಿಯೇ ಕಾಣುತ್ತದಂತೆ.

'China-Coffee-House' ನಲ್ಲಿ ಮತ್ತೊಂದು ಸಲ ಒತ್ತಾಯದಿಂದ ಮಾಧವನಿಗೆ ಕಾಫಿ ಕುಡಿಸಿದ. ಸ್ನೇಹ, ವಿಶ್ವಾಸಗಳಿದ್ದಲ್ಲಿ ಬದುಕಿಗೆ ಅಭಯವಿದೆಯೆಂಬ ಅನುಭವ ಅಂದು ದೊರಕಿತ್ತು ಸುಧಾಕರನಿಗೆ. ಈ ವೈವಿಧ್ಯಪೂರ್ಣ ಜಗತ್ತಿನಲ್ಲಿ ತನ್ನಂತಹ ಅಲ್ಪಜೀವಿಗೂ ಆಸರವಿದೆ, ಸ್ನೇಹಿತರ ಸಹಾನುಭೂತಿ

ಯಿಸೆ; ಅವರ ನೆರವಿನಿಂದ ತಾನೊಬ್ಬ ವ್ಯಕ್ತಿಯಾಗಿ ರೂಪುಗೊಳ್ಳುತ್ತಿರುವ ಚಿತ್ರವನ್ನು ಆತನ ಮನಸ್ಸು ಬರೆಯಹತ್ತಿತು.

ದೂರ ಸಾಗಿ ಬಂದರು. ಆ ಹಾಳು-ಮನೆಯ ಸಮೀಪಕ್ಕೆ ಬಂದಾಗ ಇನ್ನೂ ಪಶ್ಚಿಮದ ಬೆಳಕು ಮಸುಕಾಗಿರಲಿಲ್ಲ.

"ಅಲ್ಲಿ ಕುಳಿತುಕೊಳ್ಳೋಣವೇ ?" ಎಂದು ಮಾಧವನನ್ನು ಕೇಳಿದ.

ನಡುವಿನ ಹಾಳು ನೆಲವನ್ನು ತುಳಿದು, ಅಲ್ಲಿದ್ದ ಕಲ್ಲುಹಾಸಿನ ಮೇಲೆ ಇಬ್ಬರೂ ಕುಳಿತುಕೊಂಡರು. ತನ್ನ ಬಾಲ್ಯದಿಂದ ಈ ವರೆಗಿನ ಕತೆಯನ್ನೆಲ್ಲ ಸುಧಾಕರ ಮಾಧವನಿಗೆ ಹೇಳಿದ. ಯಾವ ಅಂತಃಕರಣದಿಂದ ಮಿಡಿದು ಹೇಳಿದನೋ! ಸುಧಾಕರನ ನಿಷ್ಕಲಂಕ ಮನಸ್ಸು, ಸರಳ ಜೀವನ, ಆತನ ಆತ್ಮೀಯತೆಗಳಿಂದ ಮೊದಲೇ ಮುಗ್ಧನಾಗಿದ್ದ ಮಾಧವನಿಗೆ, ಆತನ ಕತೆಯನ್ನು ಕೇಳಿದ ಮೇಲಂತೂ ತಾವು ಒಡಹುಟ್ಟಿದವರೆನ್ನುವಷ್ಟು ಸಹಜಾಂತಃಕರಣಭಾವ ಸ್ಫುರಿಸಿತು.

ತನ್ನ ಕತೆಯಿಂದ ಪ್ರಾರಂಭವಾಗಿ ಆ ಹಾಳು-ಮನೆಯ ಕತೆಗೆ ಬಂದು ನಿಂತವು ಅವರ ಮಾತುಗಳು. ಸುಧಾಕರನ ಕುತೂಹಲದ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುತ್ತ ಮಾಧವ ಕೊನೆಗೆ ಹೇಳಿದ: "ಇದು ಒಬ್ಬ ಆಗರ್ಭ ಶ್ರೀಮಂತನ ಮನೆ. ಒಬ್ಬನೆ ಮಗ. ಆತ ವಯಸ್ಕನಾಗುವದರೊಳಗಾಗಿ ತಂದೆತಾಯಿಗಳಿಬ್ಬರೂ ರೈಲಿನಪಘಾತಕ್ಕೆ ಬಲಿಯಾದರು. ಸುಶಿಕ್ಷಿತನಾದ ಹುಡುಗ. ಸ್ಫುರದ್ರೂಪಿ. ಮೇಲೆ ಶ್ರೀಮಂತ. ಅಳಿಯನನ್ನಾಗಿ ಮಾಡಿಕೊಳ್ಳಲು ಅನೇಕರು ಯತ್ನಿಸಿದರಂತೆ. ಆತ ಅನುರಕ್ತನಾದ ಹುಡಿಗೆಯೇ ಬೇರೆ. ವಿಧಿ ಸಂಚು ಮಾಡಿದುದೇ ಬೇರೆಯಾಯ್ತು. ಆತನ ಮನೀಷೆಯನ್ನು ಎಂದಿಗೂ ಅರಿಯಲಾರದೆ ಹೋದ ಆ ಹುಡಿಗೆ ಬೇರೆಯವನೊಂದಿಗೆ ಮದುವೆಯಾದಳು. ಅವ್ಯಕ್ತಪ್ರೇಮ ಅವನನ್ನೇ ಬಲಿ ತೆಗೆದುಕೊಂಡಿತು. ಆ ದಿನ ಊರು ಬಿಟ್ಟು ಹೋದವ ಇನ್ನೂ ತಿರುಗಿಲ್ಲ. ಎಲ್ಲಿರುವನೆಂಬುದರ ಸುಳಿವೂ ಇಲ್ಲ. ಇದೆಲ್ಲ ಜನ ಹೇಳುವ ಕತೆ. ಇನ್ನೂ ಬೇರೆ ಒಂದೆರಡು ಕತೆಗಳೂ ಇವೆ ಈ ಮನೆಯ ವಿಷಯವಾಗಿ."

"ಇದೆಲ್ಲ ಎಂತಹ ಹುಚ್ಚು ಭ್ರಮೆ! ತನ್ನ ಪ್ರೇಮ ಮಿಥ್ಯವೆಂಬುದರ ಅರಿವು ಹೇಗೆ ಬರಲಿಲ್ಲ ಆತನಿಗೆ ?"

"ಅದೇನೋ ನನಗೆ ತಿಳಿಯದು. ಈ ಕತೆಯ ಸತ್ಯಾಂಶವೆಷ್ಟಿದೆಯೋ

ಬಲ್ಲವರಾರು ?"

"ಅಂತೂ ನನ್ನ ದೃಷ್ಟಿಯಲ್ಲಿ ಆತನೊಬ್ಬ ಹುಚ್ಚ – ಭ್ರಾಂತ – ಇಷ್ಟೆ."

ಕತ್ತಲು ಕವಿಯುತ್ತ ಬಂದಿತು. ಸದ್ದಿಲ್ಲದೆ ಬರುವ ಕತ್ತಲೆ ಸೃಷ್ಟಿಯ ಚೆಲುವನ್ನೆಲ್ಲ ನುಂಗಿತು. ದಾರಿಗೆ ಬಂದು ಕೂಡಿದರು. ತುಸು ಲಗುಬಗೆಯಿಂದ ಹೆಜ್ಜೆಯಿಡತೊಡಗಿದರು. ಉಲ್ಲಸಿತ ಮನಸ್ಸಿಗೆ ಆಯಾಸವೆನಿಸಲಿಲ್ಲ. ದೊಡ್ಡ ಭಾರ ಇಳಿದಂತಾಗಿತ್ತು. ತನ್ನ ಶಿಕ್ಷಣ ಆತಂಕವಿಲ್ಲದೆ ಮುಂದುವರಿಯುವದನ್ನು ನೆನೆದಾಗ ಸುಧಾಕರನಿಗೆ ಅಪರಮಿತ ಹಿಗ್ಗು. ಆದರೂ ತಂದೆಯ ಭಾರ ಪೂರ್ಣವಾಗಿ ಇಳಿಯಲಾರದಂತಿತ್ತು. ಮುಂದಿನ ಹೊಣೆ ಹೊರುವ ಸಿದ್ಧತೆಯಲ್ಲಿ ಒಂದು ಹೆಜ್ಜೆಯನ್ನು ಮುಂದಿಟ್ಟಂತಾಗಿತ್ತು.

ಕೋಣೆಯ ಬಳಿ ಬಂದಾಗ ರಾತ್ರಿ ಒಂಬತ್ತು ಗಂಟೆಗೆ ಸಮೀಪಿಸಿತ್ತು.

"ಸುಖವಾಗಿ ಮಲಗು ಸುಧಾಕರ. ನಾಳೆ ತಂದೆಯವರಿಗೊಂದು ಕಾಗದ ಹಾಕು." ಎಂದು ಹೇಳಿ ಮಾಧವ ಮುಂದೆ ತನ್ನ ಕೋಣೆಗೆ ಹೋದ.

ಸುಧಾಕರ ಒಳಗೆ ಬಂದು ದೀಪ ಹಚ್ಚಿದ. ತಂದೆಗೆ ಕಾಗದ ಬರೆಯುವದೆಂದ ಕೂಡಲೆ ಅಂದು ಸಾಯಂಕಾಲ ತನಗೆ ಬಂದ ಕಾಗದದ ನೆನಪಾಯ್ತು. ಚಟ್ಟನೆ ಓಡಿ ಬಾಗಿಲನ್ನು ಮುಂದೆ ಮಾಡಿ ಬಂದ. ಕಿಸೆಯಲ್ಲಿಯ ಪಾಕೀಟನ್ನು ಹೊರಗೆ ತೆಗೆದ. ಮೇಲೆ ಬರೆದ ವಿಳಾಸವನ್ನು ನೋಡಿದ. ಮತ್ತೆ ಮತ್ತೆ ನೋಡಿದ. ತನ್ನ ಹೆಸರು ವಿಳಾಸಗಳನ್ನು ಪೂರ್ತಿ ತಿಳಿಯದ ಅಪರಿಚಿತರೊಬ್ಬರು ಬರೆದಿರುವರೆಂದುಕೊಂಡ ಮನದಲ್ಲಿ, ಆ ಮುದ್ದಾದ ಸುಂದರ ಲಿಖಿತ, ಮನವನ್ನು ಸೆಳೆಯಿತು. ಸೌಮ್ಯವಾದ ಮಿಂಚಿನ ಸೆಳಕೊಂದು ಹರಿದಂತಾಯ್ತು.

To

Shree. Sudhakar,
Room No. 12 New Hostels,

..................

....ಸುಕೋಮಲೆಯೋರ್ವಳ ಹಸ್ತಾಕ್ಷರವಿದ್ದಿರಬಹುದೆಂಬ ಭಾವನೆ ಆತನಿಗೆ ಅರಿಯದೆ ಹೃದಯಾಂತರಾಳದಲ್ಲಿ ಮೂಡಿತು. ತನಗರಿಯದ ಅಪರಿಚಿತರಾರು ಬರೆದಿದ್ದಾರು ? ಇಲ್ಲವೆ ಪರಿಚಿತರಿದ್ದು ವಿಳಾಸ ಪೂರ್ತಿ ಗೊತ್ತಿರಲಿಕ್ಕಿಲ್ಲವೇ? ಪೋಸ್ಟಿನ ಮುದ್ರೆಗಳನ್ನು ಸೂಕ್ಷ್ಮವಾಗಿ ನೋಡಿದ. ಊರ ಹೆಸರು ತೀರ ಮಸು

ಕಾಗಿದ್ದಿತು. ಊಹೆಗೆ ನಿಲುಕದಂತಾಯ್ತು. 'ಯಾರದಿರಬಹುದು?' ಎಂದು ಪಾಕೀಟಿನ ಒಂದು ಬದಿಯನ್ನು ನಯವಾಗಿ ಬಿಚ್ಚಿದ.

ಒಳಗಿದ್ದುದು ಒಂದು ನೀಲವರ್ಣದ ಕಾಗದ. ಕೈಗೆತ್ತಿಕೊಂಡು ಬಿಡಿಸಿ ನೋಡಿದ.

ಸುಂದರವಾದ ಅಕ್ಷರಗಳಲ್ಲಿ,

"....ನನ್ನ ನೆನಹು ನಿಮಗಿರದಿದ್ದರೂ, ನಿಮ್ಮ ನೆನಹು, ಪರಿಚಯಗಳು ನನಗೆ ನಿತ್ಯ ಸ್ಮರಣೆಗೆ ಬರುತ್ತವೆ ದಯವಿಟ್ಟು ಬರುವ ಆದಿತ್ಯವಾರ ನಿಮ್ಮನ್ನು ಕಾಣಬಯಸುತ್ತೇನೆ. 'Green-Hotel' ಬಳಿ ಕಾದಿರುತ್ತೇನೆ. ನನ್ನ ಹೃದಯದ ಪ್ರಾಮಾಣಿಕತೆಯ ಮೇಲೆ ಭರವಸೆಯಿಟ್ಟು ಬರಬೇಕು."

ಬರೆದವರಾರೆಂಬುದು ತಿಳಿಯುವಂತಿಲ್ಲ. ಯಾವ ಊರಿಂದ ಬಂದುದು ಎಂಬುದರ ಸುಳಿವಿಲ್ಲ. ಯಾತಕ್ಕೆ, ಏನು ಕೆಲಸ? ಇವುಗಳ ಉಲ್ಲೇಖವಿಲ್ಲ!

ಸುಧಾಕರ ಸಂದಿಗ್ಧ ಸ್ಥಿತಿಯಲ್ಲಿ ಸಿಲುಕಿದ. ಈತ ಅಥವಾ ಈಕೆಯೇ?.... ಯಾರಿರಬಹುದು? ಅಪರಿಚಿತನಂತೂ ಸರಿ. ಕಾಗದ ಓದಿದ ಮೇಲಾದರೂ ಪರಿಚಯ ಸಿಕ್ಕದಂತಾಗಲಿಲ್ಲ! ಹತ್ತಾರು ಬಾರಿ ಯೋಚಿಸಿದರೂ ಸಮಾಧಾನ ವಾಗಲಿಲ್ಲ. ಅಂಚೆಯಾಳು ತಪ್ಪಿ ಬೇರೆಯವರ ಕಾಗದವನ್ನು ತನಗೆ ಕೊಟ್ಟಿರ ಬಹುದೇನೊ ಎಂಬ ಸಂದೇಹದಿಂದ ವಿಳಾಸವನ್ನುಮತ್ತೊಂದು ಬಾರಿ ನೋಡಿದ. ಅದು ಸರಿಯಾಗಿಯೇ ಇತ್ತು.

ಕಾಗದವನ್ನು ಮೊದಲು ಟ್ರಂಕಿಗೆ ಸೇರಿಸಿದ. ಮೋಜಿಗಾಗಿ ಅಥವಾ ಫಜೀತಿ ಮಾಡಲು ಯಾರಾದರೂ ಬರೆದಿದ್ದರೆ?.... April-Fool ಮಾಡಲು ಹಾಗೆ ಯಾರಾದರೂ ಬರೆದಿದ್ದಿರಬಹುದೇ?.... ಎಷ್ಟು ಬಗೆಯ ಕಲ್ಪನೆ ಮಾಡಿ ದರೂ ನಿಶ್ಚಿತವಾದ ಸಮಾಧಾನದ ಉತ್ತರ ದೊರೆಯಲಿಲ್ಲ.

ಹಿಂದಕ್ಕೊಮ್ಮೆ ಹರಟೆಕೊಚ್ಚುವಾಗ ವಿನೋದಕ್ಕಾಗಿ ಶಶಿ "ಇನ್ನೇನು ಸುಧಾಕರ, ನೀನು ಕಾಲೇಜ 'Champion.' ನಿನ್ನ ರೂಪ, ಆಟಗಾರಿಕೆಗಳಿಗೆ ಮನಸೋತ ಹುಡುಗಾರ್ತಿಯರು ನಿನ್ನ ಬೆನ್ನು ಬಿಡುವದೇ ಇಲ್ಲ." ಎಂದು ಹೇಳಿದ್ದ.

ಆ ಮಾತು ನೆನಪಾಗಿ "ಹಾಗೇನಾದರೂ ಯಾ-ರಾ-ದ-ರೂ....?" ಎಂಬ ವಿಚಿತ್ರ ಸಂದೇಹ ಮೂಡಿತು.

ಮರುಕ್ಷಣದಲ್ಲಿಯೇ "ನಾನೆಂತಹ ಹುಚ್ಚು ಕಲ್ಪನೆ ಕಟ್ಟುತ್ತಿದ್ದೇನೆ. ಯಾವ ಹುಡಿಗೆಯ ಪರಿಚಯವೂ ನನಗಿಲ್ಲ; ನನಗಾರು ಬರೆಯಬೇಕು?" ಎಂದು ಸಮಾಧಾನ ತಂದುಕೊಂಡ.

ಅಂತೂ ಮೂಲಪ್ರಶ್ನೆ ಯಕ್ಷಪ್ರಶ್ನೆಯಾಗಿಯೇ ಉಳಿಯಿತು. ಬರೆದವರು ಗಂಡೋ ಹೆಣ್ಣೋ ತಿಳಿಯದಾಯ್ತು. "ಹಾಳಾಗಿ ಹೋಗಲಿ; ಈ ಅನಾಮಧೇಯರಿಗಾಗಿ ನಾನೇಕೆ ತಲೆಕೆಡಿಸಿಕೊಳ್ಳಬೇಕು?" ಎಂದವನೇ ಮೇಲಕ್ಕೆದ್ದ. ಕೋಣೆಯಲ್ಲಿ ಅತ್ತಿತ್ತ ಸುಳಿಯಹತ್ತಿದ. ಅವನು ಆ ಪರ ಯೋಚನೆಯನ್ನು ಬಿಟ್ಟರೂ ಅದು ಅವನನ್ನು ಬಿಡಲಿಲ್ಲ. ಊಟಕ್ಕೆ ನಡೆದ. ಗೆಳೆಯರೊಂದಿಗೆ ಹರಟಿದ. ಅಲ್ಲಿಯೂ ಅದು ಅವನ ಬೆನ್ನು ಬಿಡಲಿಲ್ಲ.

ಹರೀಶನಿನ್ನೂ ಬಂದಿರಲಿಲ್ಲ. ಬಾಗಿಲನ್ನು ಮುಂದೆ ಮಾಡಿಕೊಂಡು ಮಲಗಿಬಿಟ್ಟ. ಮುಸುಕೆಳೆದರೂ ಅದು ಮತ್ತೆ ನುಸುಳಿ ಮುಸುಕಿನೊಳಗೇ ಬಂದಿತು. ಅದನ್ನು ದೂರವಾಗಿರಿಸಲೆತ್ನಿಸಿದಷ್ಟು ಸಮೀಪ ಬರಹತ್ತಿತ್ತು. ಇಂತಹ ಕಾಟಕ್ಕೆ ಆತನೆಂದೂ ಸಿಲುಕಿರಲಿಲ್ಲ.

...."ಭಾನುವಾರ ದಿನ ಹೋಗಿ ನೋಡಿದರೆ ಗೊತ್ತಾಗಿಬಿಡುವದಲ್ಲ?" ಎಂಬ ಸೂಕ್ತಪರಿಹಾರ ದೊರೆಯಿತು. ಆದರೆ ಭಾನುವಾರದ ವರೆಗೆ ಮನಸ್ಸಿನ ಕಾತರವನ್ನು ತಡೆಯುವದು ಹೇಗೆ?

...."ಈಗಂತೂ ಸ್ವಸ್ಥವಾಗಿ ಮಲಗೋಣ" ಎಂದುಕೊಂಡವನೇ ಮಗ್ಗುಲಾಗಿ ಹೊರಳಿದ.

...."ಭಾನುವಾರ ಹೋಗಿ ನೋಡಬಹುದೇನೋ ಸರಿ. ಅದರಿಂದ ಇಲ್ಲದ ಗೊಂದಲಕ್ಕೆ ಸಿಲುಕಿಬಿದ್ದರೆ? ಅಪಹಾಸ್ಯಕ್ಕೀಡಾಗುವಂತಾದರೆ?...." ಈ ದಿಶೆಯಲ್ಲಿ ನಡೆದಿತ್ತು ಅವನ ವಿಚಾರ.

....ಕೊನೆಗೆ "ಭಾನುವಾರವಂತೂ ಬರಲಿ." ಎಂದುಕೊಂಡು ಮಲಗಿದ.

* * *

ಭಾನುವಾರ ಬಂದೇ ಬಿಟ್ಟಿತು. ಇತ್ತೀಚೆಗೆ ಮೌನಗಂಭೀರಳಾಗಿರುತ್ತಿದ್ದ ಕರುಣಾ ಮತ್ತೂ ಗಂಭೀರಳಾಗಿದ್ದಳು. ಮಧ್ಯಾಹ್ನ ಊಟ ಮುಗಿಸಿ ತನ್ನ ಕೋಣೆಯನ್ನು ಸೇರಿದಳು. ಯಾವ ಭಾವನೆಯ ಪ್ರೇರಣಾಬಲದಿಂದಲೋ ಕಾಗದ ಬರೆದದ್ದಾಗಿತ್ತು. ಅದರ ಯುಕ್ತಾಯುಕ್ತತೆಯನ್ನು ವಿಚಾರಿಸದೆ ಅದನ್ನು

ಕಳಿಸುವ ಕಾರ್ಯವೂ ಜರುಗಿಹೋಗಿತ್ತು. ಬರೆಯುವಾಗಿದ್ದ ಧೈರ್ಯ ಹಾಕಿದ ಮೇಲೆ ಹೋಯಿತು. ಆಗ ಮಾತ್ರ ಅಂಜಿದಳು.

"....ಅವರು ಬರದಿದ್ದರೆ ?"

....ಆಗ ಆಗುವ ನಿರಾಸೆಯನ್ನು ದುಃಖವನ್ನು ಹೇಗಾದರೂ ಸಹಿಸಬಹುದು. ಆದರೆ ಈ ಪತ್ರದ ವಿಷಯ ನಾಲ್ಕು ಜನರಿಗೆ ತಿಳಿದರೆ ಹೇಗೆ ?.... ಈ ವಿಚಾರ ಅವಳನ್ನು ನಾಲ್ಕೈದು ದಿನಗಳಿಂದ ಕಾಡುತ್ತಿತ್ತು. ತಾನು ಬರೆದದ್ದು ಪ್ರಮಾದವಾಯಿತೆಂದೆನಿಸಿತು. ಮನದಲ್ಲಿಯೇ ನಡುಗಿದಳು. ಸಂಕಟಪಟ್ಟಳು. ಯಾರೆದುರು ಹೇಳುತ್ತಾಳೆ ?

....ಪರಿಣಾಮವನ್ನು ಯೋಚಿಸಿದಂತೆಲ್ಲ ಅಧೀರಳಾದಳು. ಆದರೂ ಯಾವುದೋ ಒಂದು ಹುಚ್ಚು ಧೈರ್ಯ ಅವಳಿಗೆ. ತಾನೇ ಬರೆದುದೆಂಬುದಂತೂ ತಿಳಿಯುವಂತಿಲ್ಲ. ಆ ಸುಧಾಕರ ಬಾರದಿದ್ದರೆ ಹೃದಯಕ್ಕೆ ಆಘಾತವಾದರೂ ಅಪವಾದವಂತೂ ಬರಲಾರದು....ಹೀಗೆ ತನಗೆ ತಾನೆ ಸಮಾಧಾನ ಹೇಳಿಕೊಂಡಳು.

ಬಂದೇ ಬರುವನೆಂಬ ವಿಶ್ವಾಸ ಅಚಲವಾಗಿ ಬೇರೂರಿತ್ತು ಅವಳಲ್ಲಿ. ಅಶುಭವನ್ನೇಕೆ ನೆನೆಯಬೇಕು ? ದಾರುಣಭವಿಷ್ಯದ ಚಿತ್ರವನ್ನೇಕೆ ಬರೆದುಕೊಳ್ಳಬೇಕು ? ನಿರಾಸೆಯ ಭಾವನೆಯೇ ಮೂಲವಾಗಿ ಏಕೆ ಬರಬೇಕು?.... ಆಶಾವಾದಿಯಾಗಿ ಮುಂದೆ ನಡೆಯುವದರಲ್ಲಿ ಸುಖವಿದೆ... ಹೀಗೇ ಅನೇಕ ರೀತಿಯಿಂದ ತನ್ನ ಕೃತಿ, ವಿಚಾರಗಳನ್ನು ಸಮರ್ಥಿಸಿಕೊಂಡಳು. ಕಟ್ಟಿದ ಕನಸು ಏನೇ ಇದ್ದರೂ, ತಾನು ಕೈಕೊಂಡ ಕ್ರಮ ಅನೈತಿಕವಾದುದಲ್ಲವೆಂಬುದೊಂದರ ಬಗೆಗೆ ಅವಳಿಗೆ ಖಚಿತವಾಗಿತ್ತು.

ಗಂಟೆ ಸಾಯಂಕಾಲ ನಾಲ್ಕಾಗಿತ್ತು. ಕರುಣಳೆದ್ದು ಒಳಗೆ ನಡೆದಳು. ಅರುಣಾ ಇನ್ನೂ ಮಲಗಿದ್ದಳು. ಬಚ್ಚಲು ಮನೆಗೆ ಹೋಗಿ ಮುಖ ತೊಳೆದುಕೊಂಡು ಬಂದಳು. ಕನ್ನಡಿಯೆದುರು ನಿಂತು ತನ್ನ ಬಿಂಬವನ್ನೇ ದಿಟ್ಟಿಸಿ ನೋಡಿದಳು.

"ಕರುಣಾ, ನಿನ್ನ ಬದುಕು ಇಂದು ಶ್ರುತಿಗೊಂಡು ನುಡಿವ ವೀಣೆಯಂತಾಗಲಿದೆ." ಎಂದು ಆ ಬಿಂಬ ಹೇಳಿದಂತಾಯ್ತು. ಮೆಲ್ಲನೆದ್ದು ಮಂಚದ ಮೇಲೆ ಕುಳಿತುಕೊಂಡಳು. ಅಚ್ಚ ಕಪ್ಪುಕೂದಲನ್ನು ನೀಳವಾಗಿ ನಯವಾಗಿ

ಬಾಚಿದಳು. ಸಡಿಲು ಜಡೆಯನ್ನು ಹೆಣೆದು ತನ್ನಂತೆ ಸುಕೋಮಲವಾಗಿರುವ ಪಾರಿಜಾತದ ನಾಲ್ಕೈದು ಹೂಗಳನ್ನು ಸೇರಿಸಿ ಕಟ್ಟಿ ಮುಡಿದಳು. ಅವರ ವಾಸನೆಗೆ ತಾನೆ ವಿಸ್ಮೃತಿಯ ಲೋಕದಲ್ಲಿ ತೇಲಿದಳು. ಸುಗಂಧದ ತೈಲವನ್ನು ಲೇಪಿಸಲಿಲ್ಲ; ಮುಖಕ್ಕೆ ಸ್ನೊಪೌಡರ ಬಳಿಯಲಿಲ್ಲ; ಸಹಜ ಸೌಂದರ್ಯವನ್ನು ಕೃತಕವಾಗಿ ಅಭಿವ್ಯಕ್ತಗೊಳಿಸಲು ಅವಳೆಂದಿಗೂ ಒಪ್ಪುತ್ತಿರಲಿಲ್ಲ. ಬಿಳಿ ಸೀರೆಯನ್ನುಟ್ಟಳು. ಬಿಳಿದಾದ ಕುಪ್ಪಸ – ಮೊಳಕೈವರೆಗೆ ತೋಳಿರುವ – ಕುಪ್ಪಸ ತೊಟ್ಟಳು. ಹಣೆಯಲ್ಲಿ ಕುಂಕುಮದ ಚಿಕ್ಕೆಯಿಟ್ಟಳು. ಯಾವ ಆಡಂಬರ, ಅಲಂಕಾರಗಳಿಲ್ಲದೆ ನಿಸರ್ಗದತ್ತ ಚೆಲ್ವಿಕೆಯಲ್ಲಿ ಕರುಣಾ ಹೆಚ್ಚು ಮೋಹಕವಾಗಿ ಕಂಡಳು. ಮುಗ್ಧನಯನಗಳಿಗೆ ಅಂದು ಚಾಂಚಲ್ಯ ಬಂದಿತ್ತು. ಮನದ ಭಾವ ನಾಲಗೆಯ ಮೇಲೆ ಮೂಕವಾಗಿ ಮಲಗಿತ್ತು. ಅದನ್ನು ಭದ್ರವಾಗಿ, ಹೊರಗೆಡವದಂತೆ ನೋಡಿಕೊಳ್ಳುತ್ತಿದ್ದವು, ಅವಳ ರುಚಿರಪಲ್ಲವದಂತಿರುವ ಅಧರಗಳು. ಇನ್ನೊಂದು ಬಾರಿ ತನ್ನನ್ನು ನೋಡಿಕೊಂಡಳು ಕನ್ನಡಿಯಲ್ಲಿ. ಅಮೃತಶಿಲೆಯಲ್ಲಿ ಸೃಷ್ಟಿಕರ್ತನ ಚೆಲ್ವಿಕೆಯ ಕಲ್ಪನಾವಿಲಾಸ ಮೈ ಪಡೆದಂತಿತ್ತು ಅವಳ ಚೆಲುವು. ಜೇನು ಹಾಡು, ಚೆಂಗುಲಾಬಿ, ಮಧುರಕಾವ್ಯಗಳನ್ನು ಹಿತವಾಗಿ, ಹದವಾಗಿ ಬೆರಸಿ ಕರುಣಳಲ್ಲಿ ತುಂಬಿದಂತಿತ್ತು. ತನ್ನ ಭಾವಮುಗ್ಧ ಕಂಗಳ ಬಿಂಬವನ್ನು ಮತ್ತೆ ನೋಡಿದಳು. ಆ ನೋಟ, ಸಾಂತ್ವನ-ಸಫಲತೆಗಳನ್ನು ದೈನ್ಯದಿಂದ ಯಾಚಿಸುವಂತಿತ್ತು. ಕೋಣೆಯಿಂದ ಹೊರಗೆ ಮೆಲ್ಲನಡಿಯಿರಿಸಿದಳು.

ಅಕ್ಕ ಮಲಗಿದಲ್ಲಿಗೆ ಬಂದು ನಿಂತಳು. ಒಂದು ಕ್ಷಣ ಎವೆಯಿಕ್ಕದೆ ಅಕ್ಕನನ್ನು ನೋಡಿದಳು. ಅವಳ ಬಳಿ ಕುಳಿತು, ಅನುಮಾನಿಸುತ್ತ "ಅಕ್ಕಾ," ಎಂದು ಕಂಪಿಸುವ ಧ್ವನಿಯಲ್ಲಿ ನುಡಿದಳು.

ಅರುಣಾ ಎಚ್ಚತ್ತು ಮಲಗಿದಲ್ಲಿಂದಲೇ ಕಣ್ಣರಳಿಸಿ ನೋಡಿದಳು ತಂಗಿಯನ್ನು.

ಸಹಜ ಮುಗ್ಧಹಾಸದಿಂದ "ಅಕ್ಕಾ, ನಾನು ಕಾಲೇಜಿನ ಕಡೆಗೆ ತಿರುಗಾಡಿಕೊಂಡು ಬರುತ್ತೇನೆ." ಎಂದಳು.

"ಬೇಗ ಕತ್ತಲಾಗುವದರೊಳಗಾಗಿ ಬಂದುಬಿಡು."

ಅಕ್ಕನ ಸಮ್ಮತಿ ತೆಗೆದುಕೊಂಡು ನೆಗೆದಳು ಕರುಣಾ.

"ಜೊತೆಗೆ ಯಾರನ್ನಾದರೂ ಕರೆದುಕೊಂಡು ಹೋಗು." ಎಂದು ಅಕ್ಕ

ಎಚ್ಚರಿಸಿದಳು.

"ಜೊತೆಗೆ ಇದ್ದಾರೆ." ಎನ್ನುತ್ತಲೆ ಹೊರಗೆ ಓಡಿದಳು.

ತನ್ನ ಮಾತಿಗಾಗಿ ತಾನೇ ಮನದಲ್ಲಿ ನಕ್ಕಳು.

"ಅಕ್ಕಾ, ಬಾಳಿನ ಜೊತೆಗಾರರೇ ಇದ್ದಾರೆ" ಎಂದೇ ಉತ್ತರಿಸಬಹುದಾಗಿತ್ತು, ಎಲ್ಲ ಇರುವಂತಿದ್ದರೆ, ಆಗುವಂತಾಗಿದ್ದರೆ.

ಸಂಜೆಯ ಕಿತ್ತಳೆಯ ಬಣ್ಣ ಕರುಣಳನ್ನಪ್ಪಿತು. ಅದರ ಸಹವಾಸದಿಂದ ಅವಳ ಮೈ ಅವರ್ಣನೀಯ ಕಾಂತಿಯನ್ನು ಪಡೆದಿತ್ತು. ಶುಭ್ರ ಮೋಡ ತೇಲುತ್ತಿರುವಂತೆ ನಡೆದಳು. ಅವ್ಯಕ್ತ ಭಯ, ಕಾತರ, ನಾಚಿಕೆಗಳು ಬಣ್ಣಬಣ್ಣದ ತೆರೆಗಳನ್ನೆಬ್ಬಿಸುತ್ತಿದ್ದವು ಅವಳ ಹೃದಯದಲ್ಲಿ.

ಮುಂದೆ ತನ್ನ ಬದುಕಿನ ಸರ್ವಸ್ವವಾಗಲಿರುವವನ ಮಂಗಲ ದರುಶನಕ್ಕಾಗಿ ಹೊರಟ ಸುಕೋಮಲ ಮುಗ್ಧ ಪ್ರೇಯಸಿಯಂತೆ ನಡೆದಳು. ಮೌನವಾಗಿ ನಡೆದಿದ್ದರೂ ಆ ಮೌನದಲ್ಲಿ ಮಲ್ಲಿಗೆಯ ಕಂಪು ತುಂಬಿತ್ತು. ಆ ಮೌನವನ್ನನುಭವಿಸುವದರಲ್ಲಿ ಅದೆಂತಹ ಸುಖವಿತ್ತು ಕರುಣಳಿಗೆ !

ಬೆಡಗಿನ ಆ ಸಂಜೆ ಕಳೆಯಿತು. ಬಳಲಿದ ಸೂರ್ಯ ರಣರಂಗದಲ್ಲಿ ಹತನಾಗಿ ಬಿದ್ದ ಚಕ್ರವರ್ತಿಯಂತೆ ಕಂಡ. ಮೆಲ್ಲಗೆ ಕತ್ತಲೆಯ ಜಾಲದಲ್ಲಿ ಜಗತ್ತು ನುಸುಳಹತ್ತಿತು.

ಕರುಣಾ ಮನೆಯೆಡೆಗೆ ಹೊರಟಾಗ ಬೀದಿಯಲ್ಲಿ ವಿಪರೀತ ಗದ್ದಲ. ಹೋಗುವವರೆಲ್ಲ ತನ್ನನ್ನೇಕೆ ಸಂದೇಹದೃಷ್ಟಿಯಿಂದ ನೋಡುತ್ತಾರೆ ? ಎಂಬ ಭಯ ಅವಳಿಗೆ. ಹೃದಯ ಬಡಿದುಕೊಳ್ಳಹತ್ತಿತು. ಆವೇಗ ಹೆಚ್ಚಿತು. ಬೇಗ ಬೇಗನೆ ನಡೆಯಹತ್ತಿದಳು; ಸಾವಕಾಶವಾಗಿ ಓಡಹತ್ತಿದಳೆಂದರೂ ತಪ್ಪಾಗಲಿಕ್ಕಿಲ್ಲ. ಹೋಗುವಾಗ ಹಿಂತಿರುಗಿ ನೋಡುವಳು. ಬೆಚ್ಚಿದ ಭಯ ಕಂಗಳಲ್ಲಿ ಹುದುಗಿತ್ತು. ಮುಖವೆಲ್ಲ ಬೆವರಿತು. ಆತುರದ ಅನಿಶ್ಚಿತ ಹೆಜ್ಜೆಗಳನ್ನಿಡುವಾಗ ಜೋಲಿ ತಪ್ಪಿದಂತಾಗುತ್ತಿತ್ತು. ಜನವೆಲ್ಲ ತನ್ನನ್ನು ಒಬ್ಬ ಅಪರಾಧಿಯಂತೆ ನೋಡುತ್ತಿರುವದೆಂಬ ಕಲ್ಪನೆ ಅವಳಿಗೆ. ಮುಖ ಮೇಲಕ್ಕೆತ್ತಲಿಲ್ಲ. ಯಾವಾಗ ಮನೆಯನ್ನು ಕಂಡೇನೋ ಎಂದೆನಿಸಿತವಳಿಗೆ.

ದೂರದಲ್ಲಿ ಮನೆಯನ್ನು ಕಾಣುತ್ತಲೆ ತುಸು ಸಮಾಧಾನ, ಧೈರ್ಯ

ಬಂದಿತು. ಬಂದವಳೇ ನೇರವಾಗಿ ತನ್ನ ಕೋಣೆಗೆ ನಡೆದಳು. ದೀಪ ಹಚ್ಚದೆ ಮಲಗಿಬಿಟ್ಟಳು. ಊಟಕ್ಕೆಬ್ಬಿಸಲು ಬಂದ ಅರುಣಾ ಗಾಬರಿಯಾಗುವಂತಿತ್ತು. ಕರುಣಳನ್ನು ಮೇಲಕ್ಕೆಬ್ಬಿಸಿದಳು. ಅವಳೇನು ಮುಖ ಮೇಲಕ್ಕೆತ್ತಲಿಲ್ಲ; ಮಾತನಾಡಲಿಲ್ಲ. ಮುಖನೆಲ್ಲ ಜೋರಾಗಿ ಬೆವತಿತ್ತು. ದುಸ್ವಪ್ನ ಕಂಡು ಭೀತರಾದವರಂತಾಗಿತ್ತು ಅವಳ ಮುಖ. ಎಂದೂ ಇಲ್ಲದ ಕ್ಲೇಶಕ್ಕೊಳಗಾಗಿದ್ದಳು ಕರುಣಾ.

"ಹೀಗೇಕೆ ಮಾಡುತ್ತೀ ಕರುಣಾ ? ಏನಾಗಿದೆ ? ನನಗೆ ಹೇಳಬಾರದೆ?" ಎಂದು ಕೇಳುವಾಗ ಅರುಣಳಿಗೆ ಅಳು ಬರುವಂತಾಯ್ತು.

ಕರುಣಾ ಮಾತನಾಡಲಿಲ್ಲ. ಯಾಂತ್ರಿಕವಾಗಿ ಮೇಲೆದ್ದಳು. ಅಕ್ಕನ ಜೊತೆಗೆ ಹೋಗಿ ಊಟ ಮುಗಿಸಿ ಮತ್ತೆ ಬಂದು ಮಲಗಿಬಿಟ್ಟಳು. ಅರುಣಾಳೂ ಹೆಚ್ಚುಮಾತನಾಡಿಸಲಿಲ್ಲ. ತಂಗಿಯ ಈ ಮುಖ ನೋಡಿ ಅವಳೆದೆ ಧಸಕ್ಕೆಂದಿತು.

ಗಣಪತರಾಯರು ಅಂದು ಮನೆಗೆ ತಡವಾಗಿ ಬಂದರು. ಅವರೆದುರು ಹೇಳಲಿಲ್ಲ ಅರುಣಾ; ತನ್ನೊಳಗೇ ನುಂಗಿಕೊಂಡಳು. ಮರುದಿನ ಸಮಾಧಾನದಿಂದಿದ್ದಾಗ ತಂಗಿಯನ್ನು ಕೇಳಿದರಾಯ್ತೆಂದು ಸುಮ್ಮನಿದ್ದಳು.

ಕರುಣಾ ನೊಂದರೆ, ಅತ್ತರೆ, ಅರುಣಳಿಗೆ ಹಿಂಸೆಯಂತಾಗುತ್ತಿತ್ತು. ತಬ್ಬಲಿ ತಂಗಿಗೆ ತಾನೇ ಅಕ್ಕ, ತಾಯಿ, ಎಲ್ಲ. ಹೊಟ್ಟೆಯ ಮಗುವಿಗಿಂತ ಹೆಚ್ಚಾಗಿ ಜೋಪಾನ ಮಾಡಿದ್ದಳು ತಂಗಿಯನ್ನು. ಅರುಣಳ ಜೀವನದ ಒಂದು ಮಹತ್ವದ ಬಿಡಿಸಲಾರದ ಅಂಗವಾಗಿ ಬೆಳೆದು ಬಂದಿದ್ದಳು ಕರುಣಾ.

* * *

ಇತ್ತ ಸುಧಾಕರ ಹಾಸ್ಟೆಲಿಗೆ ತಿರುಗಿ ಬಂದಾಗ ಸಮಯ ಎಂಟುಗಂಟೆಯಾಗಿತ್ತು. ಊಟಕ್ಕೆ ಹೊರಡುವ ಮುನ್ನ ಮಾಧವನಲ್ಲಿಗೆ ಬಂದ.

"ಏನು ಮಹಾರಾಯಾ, ಸಾಯಂಕಾಲ ಎಷ್ಟು ಹುಡುಕಬೇಕು ನಿನ್ನನ್ನು? ಇವತ್ತು ಸಿನೇಮಾಕ್ಕೆ ಹೋಗುವ ಯೋಚನೆಯಿತ್ತು. ಒಬ್ಬನೆ ಎಲ್ಲಿ ಹೋಗಿದ್ದೆ?" ಎಂದು ಮಾಧವ ಪ್ರಶ್ನಿಸಿದ.

"ಬೇಸರಿಕೆ ಬಂದಿತ್ತು. ಓದಿ ಓದಿ ತಲೆ ಕಾಯ್ದಿತ್ತು. ಒಬ್ಬನೇ ಹೋಗಿ ಸುತ್ತಾಡಿಕೊಂಡು ಬಂದೆ." ಎಂದು ಸುಧಾಕರ ಸಹಜವಾಗಿಯೇ ಉತ್ತರಿಸಿದ.

ಏನನ್ನೋ ಮರೆಮಾಜುತ್ತಿದ್ದೇನೆಂಬುದು ಸುಧಾಕರನಿಗೊಬ್ಬನಿಗೇ

ಗೊತ್ತು.

"ಊಟಕ್ಕೆ ಬರುವದಿಲ್ಲವೇ ?" ಎಂದು ಮಾತಿನ ದಾರಿಯನ್ನೇ ಬದಲಿಸಿದ.

"ನನ್ನದಾಯ್ತು. ನೀನು ಬೇಗ ಉಂಡು ಬಾ." ಎಂದ ಮಾಧವ.

ಸುಧಾಕರ ಊಟ ಮುಗಿಸಿ ಅರ್ಧ ಗಂಟೆ ಹರಟೆ ಹೊಡೆದು ತನ್ನ ಕೋಣೆಗೆ ಬಂದ. ಬರುವಷ್ಟರಲ್ಲಿ ಹರೀಶ ತುಂಬ ದಣಿದವನಂತೆ ಮಲಗಿಬಿಟ್ಟಿದ್ದ.

ಸುಧಾಕರನೂ ಬಂದವನೆ ಹಾಸಿಗೆಯ ಮೇಲೆ ಉರುಳಿದ. ಇನ್ನೊಂದು ಮಗ್ಗುಲಾಗುವಷ್ಟರಲ್ಲಿ ಒಂದು ಗಂಟೆ ಕಳೆದಿತ್ತು. ಆದರೆ ನಿದ್ದೆ ಮಾತ್ರ ಬೇಗನೆ ಹತ್ತಲಿಲ್ಲ.

* * *

ಕರುಣಾ ಮಲಗಿದಲ್ಲಿಯೇ ಹೊಯ್ದಾಡುತ್ತಿದ್ದಳು.

ಅರುಣಾ ತಂಗಿಗಾಗಿ ಮರುಗುತ್ತ ಹತ್ತಿರವೆ ಕುಳಿತು ಎವೆ ಮುಚ್ಚದೆ ಕಾಲವನ್ನು ನೂಕುತ್ತಿದ್ದಳು.

ಸುಖನಿದ್ರೆಯಲ್ಲಿದ್ದವರೆಂದರೆ ಗಣಪತರಾಯರೊಬ್ಬರೆ.

---

# ೬ : ಪದ್ಮಾವತಿಯ ಕತೆ

ನಾನಿಯ ತಂದೆ ಬೆಂಗಳೂರಿನಿಂದ ತಿರುಗಿ ಬಂದಿರಲಿಲ್ಲ. ಮನೆಗೆ ಈಗ ಗುರೂಮಾಮಾ ಯಜಮಾನ. ಆತ ಹೆಂಡತಿಯನ್ನು ಕಳೆದುಕೊಂಡ ಮೇಲೆ ತನ್ನ ಆಸ್ತಿಯನ್ನೆಲ್ಲ ಮಾರಿ ಹಣವನ್ನು ಭದ್ರವಾಗಿಟ್ಟುಕೊಂಡು ನಾನಿಯನ್ನು ದತ್ತಕ ಮಾಡಿಕೊಳ್ಳುವ ವಿಚಾರದಿಂದಲೇ ತಂಗಿಯ ಮನೆಯಲ್ಲಿ ಇರಹತ್ತಿದ್ದ. ನಾನಿಯ ತಾಯಿ ತೀರಿದ ಮೇಲೆ ಗುರೂಮಾಮಾನ ಮೇಲೆ ಒಂದು ರೀತಿಯಿಂದ ಹೆಚ್ಚಿನ ಜವಾಬ್ದಾರಿ ಬಿದ್ದಂತಾಗಿತ್ತು.

ನಾನಿಯ ಅಣ್ಣ ರಾಮು B.Com. ಪಾಸಾಗಿ 'Income-Tax-Dept' ನಲ್ಲಿ ಕ್ಲಾರ್ಕನಾಗಿದ್ದ. 'ನಿಮ್ಮ ಹುಡುಗ ಅಡ್ಡಹಾದಿ ಬಿದ್ದಾನ' ಎಂದು ಗಣ್ಯವ್ಯಕ್ತಿಯೊಬ್ಬರು ತಂದ ಗಾಳಿಯ ವರ್ತಮಾನ ಕೇಳಿ ಮನೆತನದ ಮರ‍್ಯಾದೆಗೆ ಹೆದರಿ ಗುರೂಮಾಮಾ ಬೆಳಗಾವಿಗೆ ಹೋಗಿದ್ದ. ರಾಮುನಿಗೆ ಸರಿಯಾಗಿ ಬುದ್ಧಿ ಹೇಳಬೇಕೆಂದೇ ಮನಸ್ಸಿನಲ್ಲಿ ಮಾಡಿದ್ದ. ಅಲ್ಲಿ ಹೋಗಿ ನೋಡಲಾಗಿ ಪ್ರಸಂಗ ಅಂತಹ ಗಂಡಾಂತರದ್ದಿರಲಿಲ್ಲ. ಆದ್ದರಿಂದ ಒಮ್ಮೆಲೆ ರಾಮುನೆದುರು ಈ ವಿಷಯ ತೆಗೆಯಬಾರದೆಂದು ನಿಶ್ಚಯಿಸಿ, ಆತನ ಮೇಲೆ ಕಾವಲಿರಿಸಿ ಹಾಗೇ ತಿರುಗಿ ಬಂದಿದ್ದ.

ಈಗ ಒಂದೆರಡು ದಿನಗಳಿಂದ ಗುರೂಮಾಮಾನ ವಿಚಾರವೇ ಕೋ ಬೇರೆಯಾಯಿತು. ರಾಮುನನ್ನು ಕರೆಸಿ ಸ್ಪಷ್ಟವಾಗಿ ತಿಳಿಹೇಳಿ ಎಚ್ಚರಿಕೆ ಕೊಡಬೇಕು ಎಂದು ಅನಿಸುತ್ತಿತ್ತು. ಅಥವಾ ಅವನಿಗೊಂದು ಕಾಗದ ಬರೆಯಬೇಕೆಂದೂ ವಿಚಾರಿಸಿದ. ಕೊನೆಗೆ ಅವೆರಡನ್ನೂ ಬಿಟ್ಟು "ನಾವs ಖಡ್ಡಿ ಇದ್ದದ್ದನ್ನ ಗುಡ್ಡಾ ಮಾಡಿಧಾಂಗ ಆದೀತು. ಅಂಥಾ ವ್ಯಾಳ್ಯಾ ಬಂದರ ನೋಡೂಣಂತ. ರಾಮು ನನಗ ಮೀರ‍್ಯಾನೇನು." ಎಂದು ಸಮಾಧಾನ ತಂದುಕೊಂಡ.

* * *

ನಾನಿಗೆ ಮನೆಯಲ್ಲಿ ಕೂಡಲಾಗಲಿಲ್ಲ. ಮಧ್ಯಾಹ್ನ ನಾಲ್ಕುಗಂಟೆಯಾಗಿತ್ತು. ಗುರೂಮಾಮಾ ಮಲಗಿದ್ದ. ಅಡುಗೆಯ ಮನೆಯಲ್ಲಿ ನಾರಾಯಣಾಚಾರಿ ಚಹದ ಸಿದ್ಧತೆಯಲ್ಲಿದ್ದ. ಹೊರಗೆ ಹೊರಟ ನಾನಿಯನ್ನು ನೋಡಿ "ನಾನಾಸಾಹೇಬ, ಚಹಾಕ್ಕ ಇಟ್ಟೇನಿ. ತೊಗೊಂಡು ಹೋಗು." ಎಂದು ಕರೆದ.

ಅವಸರದಲ್ಲಿದ್ದ ನಾನಿ "ನಾ ಒಲ್ಲೆ. ಈಗ ಕಕ್ಕೀ ಮನಿಗೆ ಹೋಗಿ ಬರತೀನಿ." ಎಂದು ಹೇಳಿ ಮುಂದೆ ನಡೆದುಬಿಟ್ಟ. ಕಕ್ಕಿಯ ಮನೆಯೊಳಗೆ ಬಂದಾಗ ಹೊರಗಿನ ಪಡಸಾಲೆಯಲ್ಲಿ ಹಿರಿಯ ಮಗಳು ಸುನೀತಾ ಒಂದು ಯಾವುದೋ ಪುಸ್ತಕ ಹಿಡಿದುಕೊಂಡು ಕುಳಿತಿದ್ದಳು. ಒಳಗೆ ಬರುತ್ತಿದ್ದ ನಾನಿಯನ್ನು ಕಂಡು "ಬಾರಪಾ, ಈಗೇನು ಅಪರೂಪ ಆಗಿಬಿಟ್ಟೀಯಲ! ಊರಾಗರs ಇದ್ದ್ಯೋ ಇಲ್ಲೋ?" ಎಂದು ಬರಮಾಡಿಕೊಂಡು ಕೇಳಿದಳು.

ಕೆಳಗೆ ಕೂಡುತ್ತ ನಾನಿ "ಊರಾಗೇ ಇದ್ದೀನಿ. ಕಕ್ಕಿ ಇದ್ದಾಳೇನು ಮನ್ಯಾಗ?" ಎಂದು ಕೇಳಿದ.

"ಒಳಗ ಅಕ್ಕೀ ಹಳಮಾಡ್ಲಿಕ್ಕೆ ಹತ್ಯಾಳ. ಒಳಗs ನಡಿಯಲಾ."

ನಾನಿ ಸುನೀತಳ ಹಿಂದೆ ನಡೆದ.

"ಅವ್ವಾ, ನಾನಿ ಬಂದಾನ ನೋಡು." ಎಂದು ಸುನೀತಾ ತಾಯಿಗೆ ಹೇಳಿದಳು.

"ಅಂತೂ ಬಡವರ ಮನಿ ನೆನಪಾತಪಾ ನಿನಗೊಬ್ಬಗರs! ಕೂಡು. ಮತ್ತೇನಪಾ, ಎಲ್ಲಾ ಅರಾಮ ನಡದದs?"

"ಹೂಂ, ಎಲ್ಲಾ ನೆಟ್ಟಗ ನಡದsದ. ಸಿಂಧೂ ಎಲ್ಲೆ? ಮನ್ಯಾಗ ಕಾಣಸೂದುಲ್ಲಲ್ಲಾ?" ಎಂದು ಕೇಳಿದ.

"ಇಲ್ಲೇ ಎಲ್ಯರ ಆಡಲಿಕ್ಕೆ ಹೋಗಿರಬೇಕು. ಸುನೀ, ಚಹಾ ಮಾಡು ಒಂದಿಷ್ಟು." ಎಂದು ಮಗಳನ್ನು ಒಳಗೆ ಕಳಿಸಿದಳು.

"ನಮ್ಮನ್ನ ದೂರ ಮಾಡಿಬಿಟ್ಟೀಯಪಾ ಈಗ. ಸಣ್ಣಾತಿದ್ದಾಗ ಸದಾ ಇಲ್ಲೇ ಕಕ್ಕೀ ಮನ್ಯಾಗs ಓಡ್ಯಾಡತಿದ್ದಿ. ಈಗ ಧೊಡ್ಡಾತಾಗೀದಿ. ತಿಳವಳಿಕಿ ಬಂದsದ. ಮಂತ್ಯಾನದ (ಮನೆತನದ) ವಿಚಾರಪೇಚೂ ಗೊತ್ತಾಗತಾವ. ಯಾಕಪಾ?"

"ನಾ ಮೊದಲಿನ್ಹಾಂಗs ಇದ್ದೀನಿ ಕಕ್ಕೀ. ನೀನು ತಪ್ಪು ಕಲ್ಪನಾ ಮಾಡಿಕೊಂಡೀದಿ."

"ಸುಮ್ಮನ ಅಂದ್ನೆಪಾ. ನೀ ಹಾಂಗ ತಿಳಕೋಬ್ಯಾಡಾ. ನಿಮ್ಮ ಅಪ್ಪ ದ್ವೇಷಾ ಸಾಧಿಸಿದರೂ ನೀ ಭಂಗಾರದಂಥಾ ಹುಡುಗ. ಗುಣದಾಗ ನಿಮ್ಮ ಅವ್ವನ್ನ ಹೋಲತೀ ನೋಡು. ಆ ಮಹಾರಾಯಳನ್ನ ತಂಪೊ್ತ್ಯಾಗ ನೆನಸಬೇಕು. ಆಕಿ ಜೀವಂತಿದ್ದರ ಹೀಂಗ ಪಾಲು ಕೊಟ್ಟು

ಮನೀ ಹೊಸ್ತಲಾ ದಾಟ್ಸೂದನ್ನ ನಾಡಿಗೊಡತಿದ್ದ ಳೇನು ?"

ಹಿಂದಿನ ಕತೆಯನ್ನು ನೆನೆದು ಉದ್ವಿಗ್ನಳಾಗಿ ಮಾತನಾಡುತ್ತಿದ್ದಳು ಕಕ್ಕಿ. ನಾನಿಗೆ ಅದಾವುದೂ ನೆಟ್ಟಗೆ ತಿಳಿಯುವಂತಿದ್ದಿಲ್ಲ. ಕಕ್ಕಿಗೆ ಅನ್ಯಾಯವಾಗಿದೆ; ಅವಳ ಮನಸ್ಸಿಗೆ ದೊಡ್ಡ ಪೆಟ್ಟಾಗಿದೆಯೆಂಬುದಷ್ಟು ಮಾತ್ರ ಗೊತ್ತಿತ್ತು.

ಕಕ್ಕಿ ಮತ್ತೆ ಮುಂದುವರಿಸಿದಳು :

"ನಿನ್ನ ನೋಡಿದಾಗೆಲ್ಲಾ ಹಿಂದಿನ ದಿವಸ ನೆನಪಾಗಿ ಕೆಟ್ಟ ಕಸಿವಿಸಿ ಆಗತದ. ಒಬ್ಬರಿಗೆ ಕೆಟ್ಟ ಮಾಡೇನು ಅಂದರ ಮನಶ್ಯಾನ ಕೈಯಾಗ ಏನದ ಬಿಡು. ನೋಡಿಕೊಂಬಾವಾ ದೇವರಿದ್ದಾನ. ಉಳದ್ದೇನಿಲ್ಲ ನಂದು. ಇವರು ಜೀವಂತಿದ್ದಾಗ ಪಾಲಾಗಿದ್ದರ ಅಣ-ತಮ್ಮಕಿ ಅಂತಃಕರಣ ಉಳೀತಿತ್ತು. ಎರಡು ಹೆಣ್ಣು ಹುಡುಗೂರ್ನ ಕಟಕೊಂಡು ನಾ ಬ್ಯಾರೆ ಸಂಸಾರ ಹೂಡೂ ಪರಿಸ್ಥಿತಿ ಬಂದದ್ದಕ್ಕ ದುಃಖ ಆಗತದ...... ನನ್ನ ವಸ್ತೂನ ಇಲ್ಲದ ಮ್ಯಾಲೆ, ಉಳದವರು ಯಾರು ಆದಾರು ಹೇಳು ? ಅದಕ್ಕs ನಾನು ಪಾಲಾಗು ಮುಂದ ಕೊಟ್ಟದ್ದನ್ನ ಕಣ್ಮುಚ್ಚಿ ತೊಗೊಂಡು ಕೂತೆ. ಈ ಹಳೇಮನಿ, ಎರಡು ಸಣ್ಣೂ ಹೊಲಾ ನನ್ನ ಪಾಲಿಗೆ ಕೊಟ್ಟ ನಿಮ್ಮಪ್ಪ. ಭಂಗಾರ ಕೇಳಿದ್ರ 'ಹಿಂದಕs ಮಾರಿಕೊಂಡ್ವಿ' ಅಂತ ಅಂದ ಬಿಟ್ಟ. ಇವತ್ತಿಗೂ ನನ್ನ ಮ್ಯಾಲೆ ವರ್ಮ ಸಾಧಸೂದಂದ್ರ !...."

ಈ ಬಗೆಯ ಆಘಾತ ನಾನಿಗೆ ತಡೆಯದಾಯ್ತು. ಅನೇಕ ಸಲ ಕಕ್ಕಿಯ ಮನೆಗೆ ಬಂದಿದ್ದರೂ ಹೀಗೆಂದಿಗೂ ಅವಳು ಮಾತನಾಡಿರಲಿಲ್ಲ.

"ಕಕ್ಕೀ, ನಾ ಇನ್ನೊಮ್ಮೆ ನಿಮ್ಮ ಮನಿಗೆ ಬರಬೇಕೋ ಬ್ಯಾಡೋ?" ಎಂದು ಕೇಳಿಬಿಟ್ಟ.

"ನಿನಗ ಅನಲಿಲ್ಲೋ ನಾನಿ. ಹಾಂಗ ಕೇಳಿದರ ನಾ ಯಾರ್‍ನೂ ಬೈಯ್ಯಾರಿ. ಏನೋ ನೆನಪಾತು, ಅಂದೆ. ನೀನು ನಮ್ಮ ಮನಿಗೆ ಬರೂದು ನಿಮ್ಮಪ್ಪಗ ಸೇರಿಕಿ ಇಲ್ಲ. ಅದಕ್ಕ ನಮ್ಮ ಮನೀ ಕಾಲಾಗ ನೀ ಸುಳ್ಳೆ ಅನಿಸಿಗೋಬಾರದೂ. ಕಕ್ಕೀ ಅಂತ ಅಂತಃಕರಣದ್ಲೇ ಬರತೀದಿ.... ಅಲ್ಲಾ, ಮಾತು ಹೇಳಿದೆ. ಈಗ ನಮಗೂ ನೂರಾಎಂಟು ಚಿಂತಿ ಎದ್ದ್ಯಾಗ. ಸುನೀ ಬೆಳದು ಕೂತ್ಲು. ಇಷ್ಟ ದಿವಸ ಕಲಿಯೂ ನೆವಾ ಅರೆ ಇತ್ತು. ಈಗ ಮ್ಯಾಟ್ರಿಕಿ ಆತು. ಮುಂದ ಹ್ಯಾಂಗಪಾ ದೇವರs ಅಂತ ಅನಲಿಕ್ಕೆ ಹತ್ತೀನಿ. ಲಗ್ನ ಅಂದರೇನು ಸುಸೂತ್ರs ? ವರಾ ಹ್ಯಾಂಗರ ಸಿಕ್ಕಾವು.

ಮುಂದಿನ ವಿಚಾರ? ಸಂಸಾರ ಹ್ಯಾಂಗ ಸಾಗಬೇಕು, ಮದಿವಿಗೆ ರೊಕ್ಕಾ ಹ್ಯಾಂಗ ಕೂಡಿಸಬೇಕು? ಏನು, ಇದ್ದದ್ದನ್ನೆಲ್ಲಾ ತೂರಿಕೊಂಡು ಹೋಗೂದದನs?"

ನಾನಿ ಮುಖ ಕೆಳಗೆ ಹಾಕಿಕೊಂಡು ಕೇಳುತ್ತಿದ್ದ. ಕಕ್ಕಿಗೆ ಏನೆಂದು ಹೇಳಬೇಕು? ಅವಳೂ ಉತ್ತರವನ್ನು ಅಪೇಕ್ಷಿಸಿದಂತಿರಲಿಲ್ಲ. ತನ್ನ ಕತೆಯೆಲ್ಲ ನಾನಿಗೆ ಒಮ್ಮೆ ಹೇಳಬೇಕೆಂದಿದ್ದಳು, ಅಷ್ಟೆ.

ಸುನೀತಾ ಚಹ ತೆಗೆದುಕೊಂಡು ಬಂದಳು. ಅವಳಿಗೂ ತಾಯಿಯ ಕೆಲಕೆಲವು ಮಾತು ಕೇಳಿಸಿದ್ದವು.

"ನಿನ್ನ ಕಥಿ ನಡದಿತ್ತೇನವಾ?" ಎಂದು ಕೇಳಿದಳು.

"ನಿನ್ನ ಲಗ್ನದ ವಿಚಾರ ನಡದದ ಬಾರವಾ." ಎಂದು ನಾನಿ ಅಂದ.

"ನಮ್ಮ ಅವ್ವಗೊಂದು ಉದ್ಯೋಗ ಇಲ್ಲ. ತಿರಗಿಮುರಗಿ ಲಗ್ನಾ, ಲಗ್ನಾ!"

"ಹೌದು ನಮ್ಮವ್ವಾ! ನಿನಗ ಹುಡಗಾಟಿಕಿ ಆಗೇದ. ನಿಮ್ಮನ್ನ ದಂಡಿಗೆ ಹತ್ತಸೂ ತನಕಾ ಸತ್ತು ಸುಂಣ ಆಗತೀವಿ. ದಿವಸ ನೋಡೀಯಾ ದಿನದಿನಕ್ಕ ನಾಜೂಕ ಆಗಲಿಕ್ಕೆ ಹತ್ಯಾವ. ದೇವರು ಎಲ್ಲಾ ಸುರಳೀತ ಪಾರಮಾಡಿದಾ ಅಂದ್ರ ನೆಟ್ಟಗ ನಮ್ಮ ನಶೀಬ. ಸ್ವಲ್ಪ ಏನಾರೆ ಸೊಟ್ಟ ಆತಂದ್ರ....? ಆ ನಡುವಿನ ಮನಿ ಲಕ್ಷ್ಮಂಬಾಯಿ ಮನೀ ಸುದ್ದಿ ಕೇಳಿ ದಾಗಿಂತೊಟ್ಟೂ ಹೆದರಿಕಿ ಬಂದಬಿಟ್ಟದಪಾ." ಎಂದು ಕೊನೆಯ ವಾಕ್ಯವನ್ನು ಸ್ತ್ರೀವಿಶಿಷ್ಟ ಶೈಲಿಯಲ್ಲಿ ಅಂದಳು.

ಅದಕ್ಕೆ ಸುನೀತಾ ನಗುತ್ತ "ಇಕೀದೊಂದು ಹುಚ್ಚs! ಎಲ್ಲಾರು ಆಕೀ ಮಗಳ್ಹಾಂಗs ಇರತಾರೇನು?"

ಈ ಗುಂಭ ನಾನಿಯನ್ನು ತನ್ನ ಸ್ವಾಧೀನಲ್ಲಿ ಸಂಪೂರ್ಣ ತೆಗೆದುಕೊಂಡಿತು. ಒಮ್ಮೆಲೆ ಸೆಟೆದು ಕುಳಿತು "ಅದೇನು ಸುದ್ದಿ ಕಕ್ಕೀ, ಆಕೀ ಮಗಳದು?" ಎಂದು ಕೇಳಿದ.

ಕಕ್ಕಿ ಯಾವ ಆಸಕ್ತಿಯನ್ನೂ ತೋರದ ರೀತಿಯಲ್ಲಿ ರಾಗವೆಳೆಯುತ್ತ "ಅದs, ಹಿಂಗs ಆತು ಬಾರಪಾ. ನಡುವಿನ ಮನೀ ಲಕ್ಷ್ಮಂಬಾಯಿ ಮಗಳಿದ್ದಾಳಲ್ಲ ಪದ್ದಿ, ಆಕೀ ಪುರಾಣ ಇದು. ಆಕೀ ಅಣ್ಣನ ಗೆಳ್ಯಾ ಒಬ್ಬಾವ ಇದ್ದ. ಇದ್ದ ಯಾಕ, ಇದ್ದಾನ. ಯಾವಾಗರ ಮನೀಗೆ ಬರತಿದ್ದ.ಖರೇ ಅಂದರ ಭಾಳ ಸಂಭಾವಿತ ಹುಡುಗ ಮತ್ತ! ಆ ಹುಡುಗ

ಮನಿಗೆ ಬಂದಾಗ ಈ ಪದ್ದಿ ಇದಿರಿಗೆ ಓಡ್ಯಾಡೂದು, ಚಹಾ ಒಯ್ದು ಕೊಡೂದು, ಮಾಡತಿತ್ತು. ಮನ್ಯಾಗ ಸಲಿಗೀನೂ ಹಂಗs ಅದ. ತನ್ನ ಕರೀ ಬಣ್ಣಾ, ಸುಡಗಾಡ ಮಾರಿ, ಮರತs ಬಿಟ್ಟಿದ್ಲು. ಫ್ಯಾನ್ಸಿ ನೋಡಿದರ ಹೆಂತೆಂತವರು ಝುಕ್ಸೂ ಹಾಂಗ! ಒಮ್ಮೆನೋ ಆ ಕಡೀ ಹುಡುಗ ಅದೂ.... ಏನs ತಾಯಿ ಅದರ ಹೆಸರು...ವಾರೇಶ,... ಆ ವಾರೇಶನ ಕೈಯ್ಯಾಗ ಒಂದು ಚೀಟಿ ಕೊಟ್ಟು ಕಳಿಸಿದಳಂತ..."

"ಯಾರಿಗೆ?" ಎಂದು ನಾನಿ ಆತುರದಿಂದ ಕೇಳಿದ.

ತನ್ನ ಕಾದಂಬರಿಯ ಕತೆಯನ್ನು ಹೋಲಬಹುದಾದ ಘಟನೆಯೇ ನಡೆಯುತ್ತಿರುವದನ್ನು ಕೇಳಿ ನಾನಿಗೆ ಆಶ್ಚರ್ಯವಾಯಿತು.

"ಆ ಹುಡುಗಗs, ಮತ್ಯಾರಿಗಿನ್ನ."

"ಇದು ಆದದ್ದು ಎಂದ?"

"ಒಂದು ತಿಂಗಳ ಆಗಿದ್ದೀತು; ಯಾಕs ಸುನೀ? ಯಾವಾಗರು ನಮ್ಮ ಮನಿಗೇ ಬರತಿದ್ಲು, ಮಾತು-ಕಥಿ ಆಡತಿದ್ಲು. ಒಂದು ದಿವಸ ಒಳೆ ಗುಟ್ಟಾಗಿ ನಮ್ಮ ಸುನೀ ಮುಂದ ಏನೇನೋ ಹೇಳತಿದ್ಲು. ನನ. ಗ್ಯಾಕೋ ಸಂಶಯ ಬಂತು ನೋಡು. ಪದ್ದಿ ಹೋದವ್ಯಾಲೆ ಸುನೀನ್ನ ಕೇಳಿದೆ, ಏನು ಹೇಳಿದ್ಲು ಅಂತ?"

"ಏನು ಹೇಳಿದಳs ಸುನೀತಾ?" ಎಂದು ನಾನಿ ಕೇಳಿಯೇಬಿಟ್ಟ.

"ಮತ್ತs ನೋಡವಾ ಸುನೀತಾ, ಇವತ್ತ ನಮ್ಮ ಮನ್ಯಾಗ ನನ್ನ ಮದಿವಿ ಮಾತು ಹೊರಟಿತ್ತು. ನಮ್ಮ ಅಣ್ಣಾ ತನ್ನ ಗೆಳ್ಯಾ ಒಬ್ಬರ್‍ಯಾರೋ ಇದ್ದಾರ ಅಂತ ಅಪ್ಪಗ ಹೇಳ್ಲಿಕ್ಕೆ ಹತ್ತಿದ್ದಾ. ಆ ವರದ ಸಲುವಾಗೇ ಖಟಿಪಿಟಿ ನಡಧಾಂಗದನವಾ. ದೈವದಾಗ ಏನೇನು ಅದನೋ, ಯಾರು ಕಂಡಾರವಾ? ನೀ ಯಾರ ಮುಂದೂ ಹೇಳಬಾರದು ಮತ್ತ. ನನ್ನಾಣಿ ಆಗೇದಂತ ಆಣಿ ಇಟ್ಟು ಹೇಳಿದಳು..." ಎಂದು ಸುನೀತಾ ಮುಗಿಸಿದಳು.

ನೆಲದಲ್ಲಿ ಹುಗಿದುಹೋದ ಒಂದು ಪ್ರಾಚೀನ ಐತಿಹಾಸಿಕ ಪಟ್ಟಣ ವನ್ನು ಅಗಿದು ಶೋಧಿಸಿದಷ್ಟು ಸಂಭ್ರಮವಾಯ್ತು ನಾನಿಗೆ!

ಇನ್ನೂ ವಿವರಗಳನ್ನು ಸಂಗ್ರಹಿಸಬೇಕೆಂಬ ವಿಚಿತ್ರ ಲವಲವಿಕೆ ಉಂಟಾಯಿತು.

"ಆಕಿ ಬರೆದ ಪತ್ರಕ್ಕ ಆ ಹುಡುಗ ಏನಾದರೂ ಉತ್ತರಾ ಬರೆದು ಕಳಿಸಿದನೇನು?"

"ಅದೆಲ್ಲಾ ಉಸಾಬರಿ ನಾ ಯಾಕ ಮಾಡ್ಲಿ ಮ್ಹಾರಾಯಾ? ಅಂದಾ ಕರಾ ಕಿತಾಪತಿ ಮುಂದಿ ಇದ್ದಾರ ಈ ಓಣ್ಯಾಗ. ಒಂದು ಹೋಗಿ ಒಂದು ಆದೀತು ಅಂತ ನಾ ಥಣ್ಣಗ ಇದ್ದು ಬಿಟ್ಟೆ. ಆಕೀನೂ ಮುಂದ ಒಂದೆರಡ ಸರತೆ ಭೆಟ್ಟ್ಯಾದರೂ ಅದನ್ನೇನು ಹೇಳ್ಲಿಲ್ಲ." ಎಂದು ಸುನೀತಾ ಹೇಳಿದಾಗ ನಾನಿಗೆ ಏಕೋ ನಿರಾಸೆಯಾಯಿತು.

"ಇತ್ಲಾಗ ಎಂಟ್ಹತ್ತು ದಿವಸಾತು, ಪದ್ದಿ ನಮ್ಮ ಮನಿಕಡೆ ಕಾಲು ಹಾಕದs !" ಎಂದು ಕಕ್ಕಿ ಸಮಾರೋಪ ಮಾಡಿದಳು.

ನಾನಿಗೆ ಇನ್ನು ಹೆಚ್ಚು ಕೇಳಲು ಮಾರ್ಗ ಉಳಿಯಲಿಲ್ಲ. ಹಾಗೆ ಕೇಳುವದು ಕುತ್ಸಿತ ಉತ್ಸುಕತೆಯಾದೀತು, ಕಕ್ಕಿಗೆ ತನ್ನ ಬಗೆಗೆ ಇಲ್ಲದ ತಪ್ಪು ಕಲ್ಪನೆ ಆದೀತೆಂದು ಅಷ್ಟು ಹೊತ್ತಿನ ನಂತರ ಹೊಳೆಯಿತು.

"ಸುನೀತಾಗ ಎಲ್ಲ್ಯರ ವರಾ ನೋಡೀಯೋ?"ಎಂದು ಕಕ್ಕಿಯನ್ನು ಉದ್ದೇಶಿಸಿ ಕೇಳಿದ.

"ಹಾಂಗ ಸಣ್ಣಾಗಿ ಸುರುಹಚ್ಚೇನೆಪಾ. ಒಂದೆರಡು ಕಡೆ ಕೂಡಿ ಬಂದsದ. ತೋರಸಲಿಕ್ಕೆ ಹೋಗಬೇಕಾಗೇದ. ಪತ್ರದ ಹಾದಿ ನೋಡಲಿಕ್ಕೆ ಹತ್ತೀನಿ. ಇಂಥಾದಕ್ಕೆಲ್ಲಾ ಗಂಡಸರು ಬೇಕು ನೋಡು. ಗುರೂ. ಮಾಮಾನ ಅಂಥಕ್ಕರಣ ಅದs ಅಂತ ನನಗ ಯಾವ ಕಾಳಜಿ ಇಲ್ಲಾ. ಅವರs ಖಟಿಪಿಟಿ ಮಾಡಿ ಸುನೀ ಲಗ್ನದ ಸಲುವಾಗಿ ಓಡ್ಯಾಡತಾರ. ಇದು ನಿಮ್ಮ ಅಪ್ಪಗ ಸಹನ ಆಗೂದುಲ್ಲಾ. ಆದರ ಎದುರಿಗೆ ಅನ್ನೂ ಹಾಂಗಿಲ್ಲಾ ! ಆ ಬ್ಯಾನಿ ಎಂಥಾದದ ಒಳಗ! ಯಾಕಂದರ ನಿಮ್ಮಪ್ಪನ ನೂರಾ ಎಂಟು ಕಂತ್ರಾಟ ಗುರೂಮಾಮಾಗ ಎಲ್ಲಾ ಗೊತ್ತವ. ಅದಕ್ಕ ಈಗೊಂದಪೆಂಟ್ಹತ್ತು ದಿವಸದ್ಹಿಂದ ಮಾಮಾ ಬಂದಾಗ ಎಲ್ಲಾ ಹೇಳಿದೆ. ನೀವs ಪುಣ್ಯಾ ಕಟಿಗೊಂಡು ನನ್ನ ಪಾಲಿಗೆ ಬಂದಷ್ಟು ಭಂಗಾರಾ, ಇಲ್ಲಾಂದ್ರ ಅದರ ಬದಲಿ ಅಜಮಾಸು ಕಿಮ್ಮತ್ತಿನ ತಕ್ಕ ರೊಕ್ಕಾನರ ಕೊಡಿಸಿ ನನ್ನ ಪಾರುಮಾಡಿರಿ" ಅಂತ ಹೇಳಿಕೊಂಡೀನೇನಪಾ. ಸ್ವಲ್ಪ ಮನಸಿನ ಮ್ಯಾಲೆ ತೊಗೊಂಡ್ಹಾಂಗ ಕಾಣಸ್ತದ...."

"ಮಾಮಾ ಇದನ್ನೆಲ್ಲಾ ನನ್ನ ಮುಂದ ಹೇಳಿಲ್ಲ ನೋಡು ಕಕ್ಕಿ !" ಎಂಹು ನಾನಿ ಉದ್ಗಾರ ತೆಗೆದ. ಆಗ ಆತನಿಗೆ ಕಕ್ಕಿಯ ಮೊದಲಿನ ಮಾತುಗಳ ಸಂದರ್ಭ, ಅರ್ಥ ಹೊಳೆಯಿತು.

"ನಿನ್ನ ಮುಂದ ಹ್ಯಾಂಗ ಹೇಳತಾರ? ಇವೆಲ್ಲಾ ಮನೆತನದ ಸೂಕ್ಷ್ಮ

ವಿಷಯ. ನಿಮ್ಮ ಮಾಮಾನ ಯೋಗ್ಯತಾ ಯಾರಿಗೆ ಬಂದೀತೋ! ಸಮುದ್ರ ಇದ್ದಾಂಗ ಇದ್ದಾನ. ಮುರಿಯೂ ಮನೆತನ ಎಷ್ಟು ಉಳಿಸ್ಯಾನ. ಅಂವಾ!"

ಗುರೂಮಾಮಾನ ವ್ಯಕ್ತಿತ್ವದ ಈ ಭಾಗ ನಾನಿಗೆ ಹೊಸದು. ಆತನ ಬಗೆಗಿದ್ದ ಸಲಿಗೆ, ಪ್ರೀತಿಗಳ ಜೊತೆಗೆ ಗೌರವವೊಂದು ಸೇರಿಕೊಂಡಿತು.

ಅಷ್ಟರಲ್ಲಿ ಹೊರಗಿನಿಂದ ಸಿಂಧೂ ಅಳುತ್ತ ಬಂದಳು. ಅವಳ ಹಿಂದೆ ಓರಿಗೆಯ ನಾಲ್ಕೈದು ಹುಡಿಗೆಯರಿದ್ದರು. ಕೈಯ್ಯಲ್ಲಿಯ ಗೊಂಬೆಯನ್ನು ಗಟ್ಟಿಯಾಗಿ ಅವಚಿ ಹಿಡಿದು, ಅಕ್ಕನ ಹತ್ತಿರ ಬಂದು ನಿಂತು "ನನ್ನಗೊಂಬಿ ಕಸಗೋತಾಳ ನೋಡು ಈ ವೀಣಾ..." ಎಂದು ಅಳುತ್ತ ವೀಣಳೆಡೆಗೆ ಕೈಚಾಚಿ ತೋರಿಸಿ ಹೇಳಿದಳು.

ವೀಣಾ ಹೆದರಿ ಹೆದರಿ, ಉಗುಳು ನುಂಗುತ್ತ "ಮತ್ತ ಆ ಗೊಂಬಿ, ಖರೇವಂದ್ರೂ ನಂದರಿ. ನಿನ್ನೆ ಆಡಲಿಕ್ಕೆ ಕೊಟ್ಟಿದ್ದೆ.... ಮತ್ತ ಇವತ್ತ ಅದು ತನ್ನ ಗೊಂಬಿ ಅಂತ ಸುಳ್ಳೇ ಅಂತಾಳ್ರೀ...." ಎಂದು ಹೇಳಿದಳು. ಸಾಕ್ಷಿ ಕೊಡುವದನ್ನು ನೆನಪು ಮಾಡಿಕೊಂಡು "ಬೇಕಾದರ ಇವರ್ನ ಎಲ್ಲಾರ್ನೂ ಕೇಳ್ರಿ..." ಎಂದು ತನ್ನ ಹೇಳಿಕೆಯನ್ನು ಮುಗಿಸಿದಳು.

ಕೊನೆಗೆ ವೀಣಾಳ ಗೊಂಬೆ ಅವಳಿಗೇ ದೊರೆಯಿತು.

ಸಿಂಧು ಅಳುವದನ್ನು ಮಾತ್ರ ಬಿಡಲಿಲ್ಲ.

"ಅಕ್ಕಾ-ಗುಕ್ಕಾ.."ಎಂದು ಸಿಟ್ಟಿನಿಂದ ಸುನೀತಳ ಬೆನ್ನಿಗೆ ನಾಲ್ಕೈದು ಏಟು ಕೊಟ್ಟು ಕಕ್ಕಿಯ ತೊಡೆಯ ಮೇಲೆ ಅಳುತ್ತ ಮಲಗಿದಳು.

ನಡುನಡುವೆ ಯಾರು ಕೇಳಿರದಿದ್ದರೂ "ಅದು...ನನ್ನ...ಗೊಂಬಿ..." ಎಂದು ಬಿಕ್ಕುತ್ತ ಅನ್ನುವದನ್ನು ಬಿಡಲಿಲ್ಲ.

"ನಿನಗೊಂದು ಬ್ಯಾರೆ ಛಲೋ ಗೊಂಬಿ ತರಿಸಿ ಕೊಡತೀನಿ." ಎಂದು ಕಕ್ಕಿಯ ವಾಗ್ದಾನ ಪಡೆದೇ ಸುಮ್ಮನಾದಳು.

ನೆರೆಮನೆಯ ಹೆಣ್ಣುಮಕ್ಕಳು ಬಂದುದರಿಂದ ನಾನಿ "ಹೋಗಿ ಬರತೀನಿ." ಎಂದು ಹೇಳಿ ತಮ್ಮ ಮನೆಯ ಕಡೆಗೆ ನಡೆದ.

ಬರುವಾಗ ಅವನ ತಲೆಯಲ್ಲಿ ಪದ್ದಿಯ-ಅಲ್ಲ-ಪದ್ಮಾವತಿಯ ಪ್ರಸಂಗವೇ ಸುಳಿದಾಡುತ್ತಿತ್ತು. ಆ ಹುಡುಗ ಹೇಗೆ ಪ್ರತಿಕ್ರಿಯೆ ತೋರಿರ ಬಹುದು? ಮುಂದೆ ಯಾವ ಸಮಸ್ಯೆ ಹುಟ್ಟಿರಬಹುದು? ಹೀಗೇ ಆತನ ವಿಚಾರಗಳ ಗಣಿತ ನಡೆದಿತ್ತು.

# ೭ : ನಾನಿಯ ವಿಮರ್ಶೆ

೮-೯-೧೯......

ಕಾದಂಬರಿ ಅರ್ಧ ಮುಗಿದಿದೆ. ಕರುಣಾ ಹಾಗೂ ಸುಧಾಕರ ಇವರಿಬ್ಬರ ಜೀವನದ ಹಿನ್ನೆಲೆಯ ಚಿತ್ರದಲ್ಲಿ ಕಾದಂಬರಿಯ ಗತಿಯೂ ಮುಂದೆ ಸಾಗಿದೆ. ಒಮ್ಮೊಮ್ಮೆ ಹಿನ್ನೆಲೆಯ ಬಣ್ಣ ಅತಿಯಾಯಿತೇನೋ ಎನಿಸುತ್ತಿದೆಯಾದರೂ ಅದು ಅನಿವಾರ್ಯವಾಗಿದೆ. ಅವರ ಅಂತರಂಗದ ಅರ್ಥಮಾಡಿಕೊಳ್ಳಲು, ಅವರು ಬದುಕಿ ಬಂದ ಪರಿಸರವನ್ನೂ ಅರ್ಥ ಮಾಡಿಕೊಳ್ಳಬೇಕು. ಕರುಣಾ ಹಾಗೂ ಸುಧಾಕರ ಇವರ ಪಾತ್ರಸೃಷ್ಟಿ ನನ್ನ ಮಟ್ಟಿಗೆ ತೃಪ್ತಿಕರವಾಗಿಯೇ ಬಂದಿದೆ. ಕನಸಿನ ಪ್ರಪಂಚದಲ್ಲಿಯೇ ತೇಲುವ ಕರುಣಾ, ಕನಸು ಹಾಗೂ ವಾಸ್ತವಗಳ ವಿರೋಧದಿಂದ ನಿರಾಸೆಗೊಂಡ ಸುಧಾಕರ ಇವರಿಬ್ಬರೂ ಕಾದಂಬರಿಗೆ ಮೂಲದ್ರವ್ಯವನ್ನು ಒದಗಿಸುತ್ತಾರೆ. ಶುದ್ಧವಾದ ಪ್ರೀತಿಗೆ ಸಾವಿರ ವಿಘ್ನಗಳು ಕಾದು ಕುಳಿತಿರುತ್ತವೆ. ಎರಡು ಮನೆತನಗಳ ತೀವ್ರವಾದ ವಿರೋಧ ರೋಮಿಯೊ-ಜ್ಯೂಲಿಯೆಟ್ಟರ ಸುಕುಮಾರಪ್ರಣಯವನ್ನು ಹಾಳುಗೆಡವಿತು. ಆದರೆ ಇಲ್ಲಿ ಸಮಾಜದ ಅವ್ಯಕ್ತ ನಿಯಮಗಳು ಕರುಣಾಳ ಪ್ರೀತಿಗೆ ತಡೆಯನ್ನುಂಟು ಮಾಡುತ್ತವೆ. ಕರುಣಾ ನೇರವಾಗಿ ತನ್ನ ಮನದೊಲವನ್ನು ಸುಧಾಕರನಿಗೆ ಉಸುರಲು ಸಾಧ್ಯವಾಗುತ್ತಿದ್ದರೆ! ಆದರೆ ಹಿರಿಯರಿಗೆ, ನೆರೆಹೊರೆಯವರಿಗೆ, ಕಾಲೇಜ ವಿದ್ಯಾರ್ಥಿಗಳಿಗೆ, ಸಮಾಜದ ಅರ್ಥವಿಲ್ಲದ ನೀತಿಗೆ ಹೆದರಿ ಅವಳು ಮೂಕಸಂಕಟವನ್ನು ಅನುಭವಿಸುತ್ತಾಳೆ.

ಆದರೆ ನನ್ನ ಬರವಣಿಗೆಯಲ್ಲಿ ಏನೋ ದೋಷಗಳಿವೆಯೆಂದು ಇಂದು ಮತ್ತೊಮ್ಮೆ ಓದಿದ ಮೇಲೆ ನನಗನಿಸಿತು. ಕಾದಂಬರಿ ಜೀವನದ ಯಥಾರ್ಥ ಚಿತ್ರವಾಗಿರಬೇಕೆಂಬುದೇ ನನ್ನ ಅಭಿಪ್ರಾಯ. ಆದರೆ ನನ್ನದನ್ನು ಓದಿದಾಗ ಎಲ್ಲಿಂದಲೋ ಅವಾಸ್ತವತೆ ಮೂಡಿದೆಯೆಂದು ತೋರುತ್ತದೆ. ನೋಡಿದರೆ ಯಥಾರ್ಥವಾಗಿ ಜರುಗಿದ ಸಂಗತಿಯೇ ಇದಕ್ಕೆ ಮೂಲಕಥೆಯಾಗಿದೆ. ಅದನ್ನು ಆದಷ್ಟು ಪ್ರಾಮಾಣಿಕವಾಗಿ ಚಿತ್ರಿಸಲು ನಾನು ಯತ್ನಿಸಿದ್ದೇನೆ. ಹಾಗಾದರೆ ಈ ಅಸ್ವಾಭಾವಿಕತೆ ಎಲ್ಲಿಂದ ಬಂತು? ನನಗೆ ಅನುಭವ ಸಾಲದೆ? ಹಾಗಾದರೆ ಪ್ರತಿಯೊಬ್ಬ ಲೇಖಕ ತನ್ನ ಕೃತಿಯಲ್ಲಿ ಕೇವಲ ತನ್ನ ಅನುಭವವನ್ನಷ್ಟೇ ರೂಪಿಸುತ್ತಾನೆಯೆ? ಹರೀಶನ

ಪಾತ್ರ ಅವಶ್ಯವಾಗಿದೆಯೇ ? ಮಾಧವ ಹೀಗೇಕೆ ಹಿರಿಯರಂತೆ ಅಸಹಜವಾಗಿ ವರ್ತಿಸುತ್ತಾನೆ ? ಅವನಿಗೂ ನೋವು ನಲಿವುಗಳಿಲ್ಲವೆ ? ಗಣಪತರಾಯರಲ್ಲಿ ಆಲಸ್ಯವೊಂದನ್ನು ಬಿಟ್ಟರೆ ಬೇರೆ ಗುಣಗಳೇ ಇಲ್ಲವೇ ? ಅರುಣಾ ಮನೆಗೆಲಸಗಳಲ್ಲಿ ಒಂದು ದಿನವೂ ತಂಗಿಯ ಮೇಲೆ ಸಿಟ್ಟು ಮಾಡಲಿಲ್ಲವೆ ? ಎಲ್ಲಿ ತಪ್ಪುತ್ತಿದ್ದೇನೆ ನಾನು ?

ನಿಜವಾಗಿಯೂ ಪಾತ್ರಸೃಷ್ಟಿ ಒಂದು ತೊಡಕು. ಬರೆಯುತ್ತ ಹೋದಂತೆ ಇನ್ನೂ ಹೆಚ್ಚು ಕಠಿಣವಾಗುತ್ತಲೇ ನಡೆದಿದೆ. ಒಂದು ಪಾತ್ರ ಪೂರ್ಣವಾಗಿ ಮೈತುಂಬಿಕೊಂಡು, ಸಜೀವವಾಗುವಂತೆ ಮಾಡಲು ಏನು ಮಾಡಬೇಕು ? ಕರುಣಾಳ ಪಾತ್ರವನ್ನೇ ತೆಗೆದುಕೊಳ್ಳೋಣ. ಅವಳ ಅಂತರಂಗ ಹಾಗೂ ಬಹಿರಂಗದ ಜೀವನಗಳೆರಡನ್ನೂ ಸಾಧ್ಯವಾದಷ್ಟು ವರ್ಣಿಸಲು ನಾನು ಪ್ರಯತ್ನಿಸಿದ್ದೇನೆ. ಅವಳು ಸ್ವಭಾವತಃ ಭಾವನಾಜೀವಿ; ಆದರೆ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ಇನ್ನೊಬ್ಬರೆದುರು ಆಡದ ಮುಗ್ಧೆ. ಸುಧಾಕರನ ಒಂದು ಕಣ್ನೋಟದಲ್ಲಿ ಜನ್ಮಾಂತರದ ಸ್ನೇಹದ ಸಂಕೇತವನ್ನು ಗುರುತಿಸಿದ್ದಾಳೆ. ಆದರೆ ಅವನೆದುರು ಅದನ್ನು ನೇರವಾಗಿ ಹೇಳಲು ಅವಳಿಂದ ಸಾಧ್ಯವಿಲ್ಲ. ಅವಳ ಹೃದಯದಲ್ಲಿ ಮೂಡಿದ ಭಾವನೆ ಪ್ರಬಲವಾಗಿದೆ. ಆದರೆ.... ಆದರೆ.... ಇಷ್ಟೆಲ್ಲ ಹೇಳಿದರೂ ಅವಳ ಪಾತ್ರರಚನೆಯಲ್ಲಿ ಸಜೀವತೆ ಇನ್ನೂ ಮೂಡಿಲ್ಲ. ಯಾಕೆ? ನನಗೊಂದು ಕತೆ ನೆನಪಾಗುತ್ತದೆ. ಸಣ್ಣವನಿದ್ದಾಗ ಕೇಳಿದ್ದು. ಅದು ಒಂದು ದಂತಕತೆ. ಏಳು ಮಲ್ಲಿಗೆಯ ತೂಕದ ರಾಜಕುಮಾರಿಯೋರ್ವಳು ಒಬ್ಬ ರಾಕ್ಷಸನ ಕೈಯಲ್ಲಿ ಸಿಕ್ಕಿರುತ್ತಾಳೆ. ಅವಳನ್ನು ಪ್ರೀತಿಸಿದ ಒಬ್ಬ ರಾಜಕುಮಾರ ಆ ರಾಕ್ಷಸನನ್ನು ಸೋಲಿಸಲು ಹೋಗಿ ಹತಾಶನಾಗುತ್ತಾನೆ. ಒಬ್ಬ ಮುನಿ ಅವನಿಗೆ, ಆ ರಾಕ್ಷಸನ ಜೀವ ಸಪ್ತಸಮುದ್ರಗಳಾಚೆಯ ಒಂದು ಗಿಳಿಯ ಕೊರಳಲ್ಲಿಯ ಮುತ್ತಿನ ಸರದಲ್ಲಿದೆಯೆಂದು ಹೇಳುತ್ತಾನೆ. ಈ ಪಾತ್ರಗಳ ಜೀವವನ್ನೂ ಹೀಗೆಯೇ ಹುಡುಕಬೇಕಾಗುತ್ತದೇನೋ ! ವಿಚಾರ ಮಾಡಿದಷ್ಟೂ ಸೋಲಿನ ಭಾವನೆಯೇ ಮತ್ತೆ ಮತ್ತೆ ಮುತ್ತಿಕೊಳ್ಳುತ್ತದೆ.

ಸರದೇಸಾಯಿಯ ಪತ್ರ ಇನ್ನೂ ಬರಲಿಲ್ಲ. ಅದರಿಂದ ಸ್ಫೂರ್ತಿ ದೊರೆಯಬಹುದಾಗಿತ್ತು. ಮುಂದುವರಿಸಬೇಕೆಂದರೆ ಅಧೈರ್ಯದಿಂದ ಇಟ್ಟ ಹೆಜ್ಜೆ ತಡವರಿಸುತ್ತಿದೆ. ಬಿಟ್ಟುಬಿಡಬೇಕೆಂದರೆ ಬರೆಯುವ ಮೋಹ

ಕಾಡುತ್ತಿದೆ. ಎಷ್ಟು ಎಚ್ಚರಿಕೆಯಿಂದ ಶಬ್ದಶಬ್ದವನ್ನೂ ಪರೀಕ್ಷಿಸಿ ಉಪಯೋಗಿಸಿದ್ದೇನೆ! ಚಿತ್ರಕಾರನ ಕುಶಲತೆಯಿಂದ ಬಣ್ಣಬಣ್ಣದ ವರ್ಣನೆಗಳನ್ನೆಲ್ಲ ತುಂಬಿದ್ದೇನೆ! ಅದೆಲ್ಲ ವ್ಯರ್ಥವಾಗಬಾರದು. ಆಗಲಿ. ಕಾದಂಬರಿಯನ್ನು ಮುಂದುವರಿಸಿಯೇಬಿಡುತ್ತೇನೆ. ಸರದೇಸಾಯಿಯ ಪತ್ರ ಬಂದ ಮೇಲೆ ಉಚಿತವಾದ ಬದಲಾವಣೆ ಮಾಡಬಹುದು.

---

## ಪ್ರಕರಣ :-೬

ನಾಲ್ಕಾರು ದಿನಗಳು ಕಳೆದಿರಬಹುದು. ಕರುಣಳ ವ್ಯಸ್ತಮನದ ರೀತಿ ಅಕ್ಕನಿಗೆ ಅರ್ಥವಾಗಲೆ ಇಲ್ಲ. ಹೆಚ್ಚು ಮಾತಿಲ್ಲ. ನಗೆಯಲ್ಲಿ ಜೀವಕಳೆಯಿಲ್ಲ. ಉದಾಸೀನ ಮುಖ. ಮಾತನಾಡುತ್ತಿದ್ದರೂ ಅದರಲ್ಲಿ ಮನಸ್ಸಿರುತ್ತಿರಲಿಲ್ಲ ವೆಂಬುದು ಅರುಣಳಿಗೆ ತಿಳಿಯಲು ಹೆಚ್ಚು ವೇಳೆ ಹಿಡಿಯಲಿಲ್ಲ.

ಒಂದು ದಿನ ಕಾಲೇಜಿನಿಂದ ಬೇಗನೆ ಮನೆಗೆ ಬಂದಳು. "ಕಾಲೇಜು ಮುಗಿಯಿತೇ?" ಎಂದು ಅಕ್ಕ ಕೇಳಿದರೆ "ಇಂದು ಯಾರದೋ ಭಾಷಣ ಅಂತೆ." ಎಂದು ಹೇಳಿ ಜಾರಿಕೊಂಡಳು. ಮತ್ತೊಂದು ದಿನ ಕಾಲೇಜಿಗೆ ಹೊರಟವಳು ತಿರುಗಿ ಬಂದು, 'ತಲೆಶೂಲೆ'ಯೆಂದು ಮಲಗಿಬಿಟ್ಟಳು. ರಾತ್ರಿ ಓದುವದೂ ಕಡಿಮೆಯಾಯಿತು. ದೈನಂದಿನ ಜೀವನದಲ್ಲಿಯ ಮೊದಲಿನ ನಿಯಮಿತತನ, ಅಚ್ಚುಕಟ್ಟುತನ ನಿದಾನವಾಗಿ ಮಾಯವಾಗಹತ್ತಿದವು.

ಇದನ್ನೆಲ್ಲ ನೋಡಿ ನೋಡಿ ನೊಂದ ಅರುಣಾ ಒಂದು ದಿನ ಮಧ್ಯಾಹ್ನ ಕರುಣಳನ್ನು ಕರೆದಳು. ಅವಳು ಬೇಗನೆ ಬರಲಿಲ್ಲ. ತಾನೇ ಅವಳ ಕೋಣೆಗ ಬಂದಳು.

"ಇತ್ತೀಚೆಗೆ ನೀನು ಹೀಗೇಕಾಗಿದ್ದೀ ?" ಎಂದು ನೊಂದ ಧ್ವನಿಯಲ್ಲಿ ಕೇಳಿದಳು.

"ನನಗೇನಾಗಿದೆ ? ಇದ್ದಂತೆಯೇ ಇದ್ದೇನಲ್ಲ."

"ಹಾಗಾದರೆ ಈ ಅನಾಸಕ್ತಿ, ಓದಿನಲ್ಲಿ ಅಲಕ್ಷ್ಯ, ಅವೇಳೆಯ ಊಟ ನಿನ್ನ ಈ ವಿಲಕ್ಷಣ ಮೌನ, ಇವೆಲ್ಲ ಏನು ಹೇಳುತ್ತವೆ ?" ಧ್ವನಿಯಲ್ಲಿ ಸಿಟ್ಟು ಇದ್ದಿ ತಾದರೂ ಎದೆಯ ತಳಮಳ ತಾಳಲಾರದೆ ಹೊರಬಂದಂತಿತ್ತು ಆ ಮಾತು.

"ನಿನಗೆ ಹಾಗೆ ತೋರುತ್ತದೆ ಅಷ್ಟೆ." ತನ್ನ ಬಾಯಿಂದ ಈ ಮಾತು ಬರುವದೆಂದು ಕರುಣಾ ನಿರೀಕ್ಷಿಸಿರಲಿಲ್ಲ.

ಅರುಣಳ ಕಂಣಲ್ಲಿ ನೀರೂರಿತು. "ನನ್ನಿಂದ ನೀನೇನನ್ನೊ ಬಚ್ಚಿಡು ತ್ತಿರುವಿ ಕರುಣಾ. ಆಣೆಯಾಗಿದೆ ಹೇಳದಿದ್ದರೆ...." ನಿಗ್ರಹಿಸಲಾಗದ ವ್ಯಥೆಯಲ್ಲಿ ಕೇಳಿದಳು ಅಕ್ಕ.

"ನಿನ್ನಿಂದ ಮುಚ್ಚಿಡುವಂತಹದೇನನ್ನೂ ನಾನು ಮಾಡಿಲ್ಲ ಅಕ್ಕಾ! ನಿನ

ಗೇಕೆ ಸಂಶೇಹವೋ ತಿಳಿಯದು !"

ಕರುಣಳ ಮಾತಿನ ರೀತಿಯೇ ಬೇರೆಯಾಗಿತ್ತು. ತಾನು ಯಾವ ದೃಷ್ಟಿಯಲ್ಲಿ ಕೇಳುತ್ತಿದ್ದೇನೆ, ಇವಳಾವ ರೀತಿಯಲ್ಲಿ ಉತ್ತರ ಕೊಡುತ್ತಿದ್ದಾಳೆಂಬುದನ್ನು ನೋಡಿ ಅರುಣಾ ಅವಾಕ್ಕಾದಳು. ಎಲ್ಲಿಯೋ ತಪ್ಪಿದೆಯೆಂಬ ಭಯದಿಂದ ನಡುಗಿದಳು.

"ನಾನು ಹಾಗೆ ಕೇಳಲಿಲ್ಲ ಕರುಣಾ. ನಿನ್ನಲ್ಲಿ ನನಗೆ ಸಂಶೇಹವೇ ? ಮೊದಲಿನಂತೆ ನೀನು ಗೆಲುವಾಗಿಲ್ಲದ್ದನ್ನು ಕಂಡು ಮೈಯಲ್ಲಿ ಸರಿಯಾಗಿಲ್ಲವೋ ಏನೋ ಎಂದುಕೊಂಡು ಕೇಳಿದೆ ಅಷ್ಟೆ. ಮತ್ತೇನಿಲ್ಲ."

"ಹುಂ, ಹೌದು, ಸ್ವಲ್ಪ ಹುಷಾರಿಲ್ಲ. ಅದಕ್ಕೇ ಅಂದು ಕಾಲೇಜಿಗೆ ಹೋಗಲಿಲ್ಲ. ಯಾಕೋ ಏನೋ ಬೇಸರಿಕೆ. ಓದಲೂ ಮನಸ್ಸಿಲ್ಲದಾಗಿದೆ." ಕರುಣಳ ಈ ಮಾತು ಕೇಳಿದಾಗ ಅರುಣಳಿಗೆ ಅಂತಹದೇನು ಭಯಪಡುವಂತಿಲ್ಲ ವೆಂದೆನಿಸಿ, ತುಸು ನೆಮ್ಮದಿಯಾಯ್ತು. ಅವಳ ಹತ್ತರ ಕುಳಿತುಕೊಂಡು "ನನ್ನನ್ನು ನೋಡು ಕರುಣಾ ! ನನಗೆ ನೀನೊಬ್ಬಳೆ ಕರುಳಬಳ್ಳಿ ! ನಿನ್ನ ಸುಖ, ಸಂತೋಷಗಳಲ್ಲೇ ನನಗೆ ನೆಮ್ಮದಿಯಿದೆ. ನನ್ನನ್ನು ಉಪೇಕ್ಷಿಸಿ ತಪ್ಪು ತಿಳಿಯಬೇಡ. ಇದು ನೋಡು, ನೀನು ನೊಂದರೆ, ದುಃಖಪಟ್ಟರೆ, ಉಣದಿದ್ದರೆ, ನನ್ನ ಮನಸ್ಸು ಹೇಗೆ ತಳಮಳಿಸುವದೆಂಬುದನ್ನು ನೋಡು. ನನ್ನ ಮೇಲೆ ಸಿಟ್ಟಾಗು. ಆದರೆ ನನ್ನಿಂದ ದೂರವಾಗಬೇಡ ಕರುಣಾ ! ನನ್ನ ಬದುಕಿನ ಬದುಕಾಗಿ ನಿನ್ನನ್ನು ಎದೆಯಲ್ಲಿಟ್ಟುಕೊಂಡು ಬೆಳೆಸಿದ್ದೇನೆ. ನಾನು ಸೋದರಮಾವನ ಮನೆಯಲ್ಲಿ ಕಸಕ್ಕಿಂತ ಕಡೆಯಾಗಿ ಬೆಳೆದೆ. ನಿನ್ನನ್ನು ಹಾಗೆ ಬೆಳೆಯುಗೊಡಲಿಲ್ಲ. ನಿನ್ನನ್ನು ಕಂಡು ಅದನ್ನೆಲ್ಲ ನುಂಗುತ್ತಿದ್ದೆ...."

ಅರುಣಾ ಅತ್ತುಬಿಟ್ಟಳು. ತಡೆದು ನಿಂತ ಮೋಡಕ್ಕೆ ಶೀತಲ ಗಾಳಿ ಸೋಂಕಿದಂತಾಗಿತ್ತು ಅಂದು. "ಅಕ್ಕಾ, ನಿನ್ನನ್ನು ನೋಯಿಸಬೇಕೆಂದು ನಾನು ಹಾಗೆ ನಡೆದುಕೊಂಡಿಲ್ಲ. ನನಗೇ ತಿಳಿಯದಂತಾಗಿದ್ದೆ ನಾನು. ನಿನ್ನಿಂದ ಯಾವುದನ್ನೂ ಮುಚ್ಚಿಟ್ಟಿಲ್ಲ." ಎಂದು ಹೇಳುವಾಗ ಕರುಣಳ ಮನದಾಳದ ನೋವು ದುಃಖಗಳೆಲ್ಲ ಕಿತ್ತಿ ಹೊರಬಂದಿದ್ದವು. ಹರಿದ ಕಂಬನಿಯಲ್ಲಿ ಎದೆಯ ಭಾರವೆಲ್ಲ ತೇಲಿ ಹೋಯ್ತು. ಮತ್ತೆ ಹಗುರಾದವು ಮನ. ತಂಗಿಯನ್ನು ಎದೆಗಪ್ಪಿಕೊಂಡು ಅದೆಷ್ಟೋ ವೇಳೆ ಕುಳಿತಿದ್ದಳು ಅರುಣಾ. ಅಕ್ಕನ ತೋಳುಗಳಲ್ಲಿ ಹಸುಗೂಸಿನಂತೆ

ಒರಗಿದ್ದಳು ಕರುಣಾ.

ಅರಿಯದ ವ್ಯಥೆ ಮನವನ್ನು ಕಾಡಿ ಕಾಡಿ ಇಬ್ಬರನ್ನೂ ಗಾಸಿಗೊಳಿಸಿತ್ತು; ಅಳಿಸಿತ್ತು; ಅಳಿಸಿ ಮನದ ದುಗುಡವನ್ನು ಕಳೆದಿತ್ತು. "ಹಾಗೇಕೆ ಮಾತನಾಡಿದೆ? ಹಾಗೇಕೆ ನಡೆದುಕೊಂಡೆ?" ಎಂಬುದಕ್ಕೆ ಕರುಣಳಿಗೆ ಸಮಾಧಾನದ ಉತ್ತರ ತೋಚಲೇ ಇಲ್ಲ ಮರುದಿನ ಆಲೋಚಿಸುತ್ತಿರುವಾಗ.

* * *

ತನ್ನ ಮನವನ್ನು ಹೊಕ್ಕು ಅಲ್ಲಿಯ ಪ್ರತಿಯೊಂದು ಭಾವನೆ ವಿಚಾರಗಳನ್ನು ಯಾರೋ ಕಳ್ಳರು ನೋಡುತ್ತಿದ್ದಾರೆಂಬ ಭಯ ಕರುಣಳಿಗೆ. ಒಂದೆರಡು ದಿನ ಕಳೆಯುವವರಲ್ಲಿ ಅವಳ ಮನಸ್ಸು ಸ್ತಿಮಿತಕ್ಕೆ ಬಂದಿತು. ಮೊದಲಿನಂತೆ ಓಡಾಡತೊಡಗಿದಳು. ಅಕ್ಕನಿಗೆ ಯಾವ ನೋವಾಗದಂತೆ ತನ್ನ ಒಂದೇ ಒಂದು ಕೊರಗು, ಚಿಂತೆ, ಭಯವನ್ನು ಅದುಮಿಟ್ಟುಕೊಂಡು ಗೆಲುವಾಗಿಯೇ ಇದ್ದಳು.

ಒಂದು ದಿನ ಬೆಳಗಿನ ನಾಲ್ಕು ಗಂಟೆಗೆ ಎದ್ದು ಕುಳಿತಳು ಕರುಣಾ. ರಾತ್ರಿಯನ್ನೆಲ್ಲ ಉದ್ದೀಪಿತ ಹೃದಯದವಳಾಗಿ ಕಳೆದಿದ್ದಳು. ನಿದ್ದೆ ಎಚ್ಚರಗಳ ಮಧ್ಯಂತರದ ಹಿತವಾದ ಉಯ್ಯಾಲೆಯಲ್ಲಿ ಓಲಾಡಿದ್ದಳು. ಮೆಲ್ಲಗೆ ಬೀಡುವ ತಂಗಾಳಿ ಮನವನ್ನು ಚೇತರಿಸಿತು. ಎದ್ದು ನಿಂತಳು. ಕಿಟಕಿಯಿಂದ ನೀಲ ನಭದತ್ತ ನೋಡುತ್ತ ಅದೆಷ್ಟೋ ಕಾಲ ನಿಂತಳು. ಮಿನುಗುವ ತಾರೆಗಳಾಚೆಯ ಅಗಮ್ಯಲೋಕದ ಸೊಬಗನ್ನು ಮನದಲ್ಲಿ ತುಂಬಿಕೊಳ್ಳುವಂತೆ ಕಂಡಳು.

ಹೊಳೆವ ನಕ್ಷತ್ರಗಳೊಡನೆ ಮಾತನಾಡಿದಳು. ನೀಳವಾದ ಉಸಿರೊಂದನ್ನು ಬಿಟ್ಟು ಮಂಚದೆಡೆಗೆ ಬಂದಳು. ಎದುರಿಗಿನ ಇಕ್ಕಿದ ಕಿಟಕಿಯಲ್ಲಿ ಗವಸಣಿಕೆಯಿಲ್ಲದ ತಂಬೂರಿಯಿತ್ತು. ಬಾಗಿಲ ಸಂದಿನಿಂದ ನುಸುಳಿ ಬರುವ ಗಾಳಿ ಅದರ ತಂತಿಯ ಮೇಲೆ ಉಲಿದು ಮೀಂಟಿದಂತೆ ಮಾಡುತ್ತಿತ್ತು. ತಂಬೂರಿ ಅದಕ್ಕೆ ಅತಿ ಸೂಕ್ಷ್ಮವಾಗಿ ಶ್ರುತಿ ಕೊಡುತ್ತಿತ್ತು. ಅದು ಕೋಣೆಯನ್ನೂ ತುಂಬಿ ಅವಳ ಮನವನ್ನೂ ತುಂಬಿತು.

ವೀಣೆಯಂತೆ ಸೂಕ್ಷ್ಮ, ಮೃದು ಅವಳ ಮನಸ್ಸು. ಮೆಲುಗಾಳಿಯ ಸ್ಪರ್ಶಕ್ಕೆ ವೀಣೆ ನುಡಿದಂತೆ ಅತಿ ಸೂಕ್ಷ್ಮಭಾವನೆಯ ಅಲೆಯೊಂದರಿಂದ ಕರುಣಳ ಎದೆ ಕಂಪಿಸಿತು; ನುಡಿಯಿತು. ಆ ಪ್ರಶಾಂತ ಮೌನದ ಇರುಳಿಗೊಂದು

ಸ್ವರ್ಗೀಯ ಸೊಬಗು ಬಂದಿತ್ತು. ಅವಳ ಅಂತರಂಗದ ವೀಣೆಯ ಧ್ವನಿಯಿಂದ. ನಿಮೀಲಿತನೇತ್ರೆಯಾಗಿ ಕಿಟಕಿಯಲ್ಲಿಯ ತನ್ನ ತಂಬೂರಿಯನ್ನು ಕೈಗೆತ್ತಿಕೊಂಡಳು. ಒಂದು ಬಾರಿ ಅದರ ಮೇಲೆ ತನ್ನ ಬೆರಳಾಡಿಸಿದಳು ಮಾತ್ರ. ಅದು ಝೇಂಕರಿಸಿತು. ಒಳದನಿ ಜೋಗಿಯಾ ರಾಗವಾಗಿ ನಾದ ಪಡೆಯಿತು.

ಅಗಲಿದ ಪ್ರಿಯಕರನ ಬರವನ್ನು ಅರಸುತ್ತ ಅವಗುಂಠಿತಳಾಗಿ ಹುಲ್ಲೆ ಮರಿಯ ಜೊತೆಗೆ ಮೆಲ್ಲಡಿಯಿಡುತ್ತ ಸಖಿಯೆದುರು ವಿರಹವ್ಯಥೆಯನ್ನು ಹಾಡಿಕೊಳ್ಳುವ ಮ್ಲಾನವದನದ ವಿರಹಿಯ ಮನದ ಭಾವಗಳನ್ನು ಒಂದೊಂದಾಗಿ ಎತ್ತಿ ತೋರುವ ಆ ಬೆಳಗಿನ ರಾಗದ ಆಲಾಪನೆ ಅವಳಂತರಂಗದಲ್ಲಿ ನಡೆದೇ ಇತ್ತು. ಕಂಗಳನ್ನು ಮುಚ್ಚಿ ತನುವೆಲ್ಲ ಸ್ವರಸಾಗರದಲ್ಲಿ ಸ್ತಂಭವಾಗಿ ನಿಂತಂತೆ ಕುಳಿತಿದ್ದಳು.

"ನೀವು ನನ್ನೊಡನೆ ಮಾತನಾಡಲಿಲ್ಲವೇಕೆ?"

"........... ........"

"ನಾನೆಂದರೆ ನಿಮಗೆ ಭಯವೇ? ಸಂಕೋಚವಾಗಿರಬಹದು, ಅಲ್ಲವೇ? 'ಎಂತಹ ಲಜ್ಜೆಗೆಟ್ಟ ಹುಡಿಗೆ!' ಎಂದುಕೊಳ್ಳುವಿರಾ? ನಾನು ಬಯಸಿದುದು ನಿಮ್ಮೊಲವನ್ನು. ಯಾರೆಸುರು ನಿವೇದಿಸಬಹುದಿತ್ತು ನಾನು? ಅದೆಷ್ಟು ಜನ್ಮದ ಸುಕೃತವೋ ನನ್ನದು! ನನ್ನ ಕಾಗದ ತಲುಪಿದಾಗ ನಿಮಗೇನೆನಿಸಿತು ಹೇಳಲಿಲ್ಲವಲ್ಲ? ಕರುಣಾ ಬರೆದಿರಬೇಕೆಂದು ನಿಮ್ಮ ಹೃದಯ ನುಡಿದಿರಬೇಕಲ್ಲವೇ?"

ಕರುಣಳ ಮುಖದ ಮೇಲೆ ಸಾಮರಸ್ಯದ ಹರುಷಭಾವ ಅಲೆಅಲೆಯಾಗಿ ಚಿಮ್ಮುತ್ತಿತ್ತು. ಕಟೆದ ಸುಂದರ ವಿಗ್ರಹದಂತೆ ಅಚಲಳಾಗಿ ಕುಳಿತಿದ್ದಳು. ಕೆಲ ಕ್ಷಣಗಳು ಜಾರಿದ ನಂತರ ಮುಖ ಬೇರೆ ಭಾವಗಳಿಗೆ ಎಡೆಗೊಟ್ಟಿತು. ಆಗ ಹುಸಿ ಮುನಿಸು ಮೂಡಿತು ಅದರಲ್ಲಿ.

"ಅದೆಷ್ಟು ದಾರಿ ಕಾಯಬೇಕು ನಿಮಗಾಗಿ? ಹೀಗೆ ಒಲಿದು ಬಂದವಳನ್ನು ಪೀಡಿಸುವದರಲ್ಲಿ ಯಾವ ಸುಖವಿದೆಯೋ ನಿಮಗೆ! ಹೀಗೆ ಮಾಡಿದರೆ ನಾನು ನಿಮ್ಮ ಜೊತೆ ಮಾತನಾಡುವದೇ ಇಲ್ಲ ಹೋಗಿರಿ! ನಿಮ್ಮನ್ನು ನೋಡುವದೂ ಇಲ್ಲ!"

ಒಂದು ಕ್ಷಣ ದೈನ್ಯ, ಕಾತರ, ವ್ಯಥೆಗಳಿಂದ ಅವಳ ತುಟಿಗಳು ಕಂಪಿ

ಸುತ್ತಿದ್ದವು.

"ಈ ಬಾರಿ ನನ್ನನ್ನು ಪೀಡಿಸಿ ಕಂಬನಿ ಸುರಿಸುವಂತೆ ಮಾಡಬೇಡಿ...."

ಹಕ್ಕಿಗಳ ಕಲರವ ಕೇಳಬರಹತ್ತಿತು. ಬೆಳಗಿನ ಬೆಳಕಿಗೆ ಅರಳುವ ಹೂವಿನಂತೆ ಕಣ್ತೆರೆದಳು. ಈ ವರೆಗೂ ತಂಬೂರಿಯ ಮೇಲೆ ಆಡುತ್ತಿದ್ದ ಬೆರಳುಗಳು ನಿಂತವು. ದೀಪ ಹಚ್ಚಿದಳು. ನೀಲವರ್ಣದ ಕಾಗದ ತೆಗೆದುಕೊಂಡು ಬರೆಯಲು ಕುಳಿತಳು. ಆದರೆ ಕೈ ನಿಂತಲ್ಲಿಯೇ ನಿಂತಿತು. ಗಲ್ಲದ ಮೇಲೆ ಕೈಯಿಟ್ಟು ಕೊಂಡು ಯೋಚಿಸಿದಳು. ಒಂದೆರಡು ಸಾಲು ಬರೆಯಬೇಕಾದರೆ ಹದಿನೈದು ಇಪ್ಪತ್ತು ನಿಮಿಷಗಳು ಉರುಳಿದವು. ಬರೆದುದನ್ನು ಒಮ್ಮೆ ಓದಿ ನೋಡಿದಳು. ಆಗ ತುಟಿಯಂಚಿನಲ್ಲಿ ಒಂದು ಮುಗ್ಧಭಾವ ನಲಿಯಿತು.

ಇನ್ನೂ ಮೂಡಣ ದಿಕ್ಕು ನಸುಗಪ್ಪಾಗಿತ್ತು. ಹಾಸಿಗೆಯಲ್ಲೇ ಹುದುಗಿಕೊಂಡು ಮುಸುಗೆಳೆದಳು.

* * *

ಮತ್ತೆ ಭಾನುವಾರ ಬಂದಿತು. ಕರುಣಳ ಹೃದಯದಲ್ಲಿ ಯಾವ ಅಲ್ಲೋಲ ಕಲ್ಲೋಲವೂ ಇರಲಿಲ್ಲ. ಆ ಭಾನುವಾರದ ವರೆಗೆ ಅವಳು ಕಳೆದ ನಾಲ್ಕೈದು ದಿನಗಳು ಅವಳನ್ನು ಗಂಧರ್ವರ ಸೀಮೆಯವರೆಗೆ ಕರೆದೊಯ್ದು ತಂದಿದ್ದವು. ಮನೆಯ ಕೆಲಸಗಳಲ್ಲಿ ಅದೆಷ್ಟು ಚಟುವಟಿಕೆ ತೋರುತ್ತಿದ್ದಳು! ಬೆಳಗಿನ ಚಹವನ್ನು ತಯಾರಿಸಿ ಅಕ್ಕನನ್ನು ಎಬ್ಬಿಸಿದಳು. ಇನ್ನೂ ಮಲಗಿದ್ದ ಗಣಪತರಾಯರನ್ನೆಚ್ಚರಿಸಿದಳು. ಅವಳ ಸಣ್ಣ ದನಿಗೆ ಏಳುವ ಆಸಾಮಿಯೇ ಅದು? ಅರುಣಾ ಒಳಗೆ ಬಂದು ಮುಸುಕೆಳೆದು ಎಬ್ಬಿಸಬೇಕಾಯಿತು.

"ಯಾಕೆ ಕಾಡುತ್ತೀ ಮಹಾರಾಯಳೇ!" ಎನ್ನುತ್ತ ಕಣ್ಣುಜ್ಜಿಕೊಂಡರು.

"ಇವತ್ತು ಕರುಣಾ ಚಹ ಮಾಡಿದ್ದಾಳೆ ಏಳಿರಿ."

"ಓಹೋಹೋ! ಕರುಣಾಬಾಯೀ!! ಇದೇನು ಕೇಳುತ್ತಿದ್ದೇನೆ ನಾನು! ಆಂ?"

"ಅವಳೀಗ ತುಂಬ ಬದಲಾಯಿಸಿದ್ದಾಳೆ! ಮೊದಲಿನ ಹಾಗಿಲ್ಲ. ಯಾಕೆ, ನಿಮಗೆ ಸೋಲಾಯಿತೇನೋ ಪಾಪ! ಇನ್ನು ಈ ಮನೆಯಲ್ಲಿ ಆಲಸಿಗಳು, ಮೈಗಳ್ಳರೆಂದರೆ ನೀವೊಬ್ಬರೆ ಉಳಿದಿರಿ!" ಎಂದು ಚೇಷ್ಟೆ ಮಾಡಿದಳು ಅರುಣಾ.

ಗಣಪತರಾಯರು ಮೈಮುರಿದುಕೊಂಡು ಮೇಲಕ್ಕೆದ್ದು ಮುನ್ನಡೆಯುತ್ತ

"ಸಂತೋಷ; ಆಗಲಿ; ನನ್ನಂತಹ ಆಲಸಿಯಾದ ಗಂಡ ಅವಳ ದೈವದಲ್ಲಿದ್ದರೆ ಅವನ ಉಪಚಾರ ಆರೈಕೆ ಮಾಡಬೇಕಲ್ಲ. ಈಗಿನಿಂದಲೇ ರೂಢಿಯಾಗಲಿ."

"ಆಹಾಹಾ! ತಮ್ಮ ಸ್ವಭಾವದ ಸಮರ್ಥನೆ ಬೇರೆ!" ಎಂದು ತುಂಟ ದನಿಯಲ್ಲಿ ವ್ಯಂಗ್ಯವಾಡಿದಳು ಅರುಣಾ.

ಆ ಬೆಳಗೆಂದರೆ ಅದೊಂದು ಅಪೂರ್ವ ಬೆಳಗಿನಂತಾಗಿತ್ತು ಕರುಣಳಿಗೆ. ಪಾತ್ರೆ ತೊಳೆಯುವದರಲ್ಲಿ, ಬಟ್ಟೆ ಒಗೆಯುವದರಲ್ಲಿ, ಅಡುಗೆಮನೆಯ ಮೇಲ್ಗೆಲಸದಲ್ಲಿ ಅಕ್ಕನಿಗೆ ನೆರವಾದಳು. ನುರಿತ ಕೈಗಳಲ್ಲದುದರಿಂದ ಕೆಲಸ ನಿದಾನವಾಗಿ ಸಾಗುತ್ತಿತ್ತು. ಒಮ್ಮೊಮ್ಮೆ ಕೈ ನಿಂತೇಬಿಡುತ್ತಿತ್ತು. ಒಂದೇ ದಿನ ಹೀಗೆ ಓಡಾಡಿ, ದುಡಿದು, ದಣಿದುಕೊಂಡಳು. ಅಕ್ಕ ಎಷ್ಟು ಹೇಳಿದರೂ ಬಿಡಲಿಲ್ಲ.

ಚಳಿಗಾಲದಲ್ಲಿ ಪೂರ ಬಂದ ಪ್ರವಾಹದಂತಿತ್ತು ಅವಳ ಮನದ ಉಕ್ಕು.

ಅಂದು ಮಧ್ಯಾಹ್ನ ಊಟಮಾಡಿ ಕರುಣಾ ಮಲಗಿಕೊಂಡಳು. ನಿದ್ದೆ ಬರಲಿಲ್ಲ. ಒಂದೆರಡು ಸಲ ಪುಸ್ತಕ ತೆರೆಯಲೆತ್ನಿಸಿ ವಿಫಲಳಾದಳು. ಕೋಣೆಯ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ನೂರಾರು ಬಾರಿ ಓಡಾಡಿದಳು. ಮನವೆಲ್ಲ ಸಾಯಂಕಾಲದ ಬರುವ ರಮ್ಯ ಸನ್ನಿವೇಶಚಿತ್ರಣದಲ್ಲಿ ರಮಮಾಣವಾಗಿತ್ತು.

ಅಂತು ಒಂದೆರಡು ತಾಸುಗಳನ್ನು ದೀರ್ಘಪ್ರಯಾಸದಿಂದ ಕಳೆದಳು. ಶೃಂಗಾರಪ್ರಸಾಧನಗಳ ಮಧ್ಯೆ ಮೈಮರೆತು ಮತ್ತೊಂದು ಗಂಟೆ ಕಳೆದಳು. ಕನ್ನಡಿಯೆದುರು ಕುಳಿತಂತೆ ಅದೆಷ್ಟೋ ನಿಮಿಷಗಳು ಜಾರಿದವು. ತನ್ನಲ್ಲಿ ತಾನು ಅದೇನೋ ಮಾತನಾಡಿಕೊಂಡಳು. ತನ್ನ ಚೆಲ್ವಿಕೆಯ ಬಿಂಬವೆಂದರೆ ಅಷ್ಟು ಪ್ರೀತಿ, ಮೋಹ, ಅವಳಿಗೆ.

ಮೈಮರೆತ ಕರುಣಳಿಗೆ ಮಾಲತಿ ಒಳಗೆ ಬಂದುದರ ಪ್ರಜ್ಞೆಯೇ ಇರಲಿಲ್ಲ. ಹಿಂದಿನಿಂದ ಬಂದು ಕರುಣಳ ಭುಜದ ಮೇಲೆ ಕೈಯಿರಿಸಿದಾಗ ಕತ್ತು ತಿರುಗಿಸಿ ನೋಡಿದಳು.

"ಮಾಲತಿ! ಯಾವಾಗ ಬಂದೆ?"

"ನನಗೂ ಜ್ಞಾಪಕವಿಲ್ಲ."

"ಕೂಗಬಾರದೇನು?"

"ರಸಭಂಗವಾದೀತೆನೋ ಎಂದು ಸುಮ್ಮನಿದ್ದೆ."

"ನಿನ್ನದೊಂದು ಮಾತೇ !"

"ನಿನ್ನನ್ನು ನೋಡಿ ಬೇರೆಯವರು ಮೈಮರೆಯಬೇಕು. ಅವೆಲ್ಲ ಬಿಟ್ಟು ನೀನೇ...." ಎಂದು ಮುಂದಿನ ಅರ್ಥವನ್ನು ಸೂಚ್ಯವಾಗಿ ಸೂಚಿಸಿದಳು.

"ಎಲ್ಲಿಗೆ ಹೊರಟಿ ಮಾಲತಿ ?"

"ನಾನೇ ನಿನ್ನನ್ನು ಕೇಳಬೇಕೆಂದಿದ್ದೆ, ಈ ಅಲಂಕಾರ ಯಾವ ವಿಶೇಷ ಸಂದರ್ಭಕ್ಕಾಗಿ ಎಂದು."

"ನಮ್ಮ ವರ್ಗದ ಸ್ನೇಹಿತೆಯೊಬ್ಬಳ ಮನೆಗೆ ಹೋಗುವದಿದೆ." ಎಂದು ಒಮ್ಮೆಲೆ ಮಾತಿನ ದಿಶೆಯನ್ನು ಬದಲಿಸುತ್ತ "ಮಾಲತಿ, ನಾಳೆ ಎಲ್ಲಿಯಾದರೂ ದೂರ, ಬಹುದೂರ ತಿರುಗಾಡುತ್ತ ಹೋಗೋಣ, ಬರುತ್ತೀಯಾ ?" ಎಂದು ಕೇಳಿದಳು.

"ತಿರುಗಾಡಲು ಹೋಗಬಹುದು. ಆದರೆ ದೂರ, ಬಹುದೂರವೇಕೆ ?"

"ಈ ಊರು, ಜನ, ಕಾಲೇಜು, ಪೇಟಿ, ಇವೆಲ್ಲ ಗೊಂದಲಗಳಿಂದ ದೂರ ಇರಬೇಕೆಂದೆನಿಸಹತ್ತಿದೆ ಇತ್ತೀಚೆಗೆ."

"ಎಷ್ಟು ದಿನ ದೂರವಿರಲು ಸಾಧ್ಯ ಕರುಣಾ ? ಮತ್ತೆ ಈ ಗೊಂದಲದಲ್ಲಿ ಸಿಲುಕದೆ ಬದುಕುವದು ಹೇಗೆ ?"

"ಬದುಕಿನ ಪ್ರಶ್ನೆಯಲ್ಲ ಇದು. ಒಂದು ದಿನದ ಮಟ್ಟಿಗಾದರೂ ಪ್ರಶಾಂತ ಸ್ಥಳದಲ್ಲಿ ಕಳೆದರೆ ಮನಸ್ಸಿಗೆ ಅಷ್ಟೇ ಸಮಾಧಾನ...."

"ಈ ದಿನವಂತೂ ಕಳೆಯಲಿ, ಮುಂದೆ ನೋಡೋಣವಂತೆ." ಎಂದು ಹೊರಡುವ ಸಿದ್ಧತೆಯಲ್ಲಿದ್ದ ಕರುಣಳೊಡನೆ ಹೆಚ್ಚು ಹರಟೆ ಕೊಚ್ಚುವಂತಿರಲಿಲ್ಲವಾದ್ದರಿಂದ "ನಾನು ಬರುತ್ತೇನೆ ಕರುಣಾ...." ಎಂದು ಮಾಲತಿ ಹೊರಟಳು.

ಅವಳು ಹೋಗಿ ಹತ್ತಾರು ನಿಮಿಷಗಳು ಕಳೆದಿರಬಹುದು. ಕರುಣಾ ಹೊರಹೊರಡದೆ ಕಿಟಕಿಯ ಬಳಿ ನಿಂತು ಹೊರಕ್ಕೆ ನೋಡಿದಳು. ಸಾಯಂಕಾಲ ಸಮೀಪಿಸುತ್ತಿತ್ತು. ಎದುರಿನ ಬೀದಿ ಓಡಾಡುವ ಜನರಿಂದ ತುಂಬಿ ತುಳುಕಿತ್ತು. ಕರುಣಾ ಅತ್ತ ನೋಡುತ್ತಿದ್ದರೂ ಅವಳ ಮನದೆದುರು ಬರಲಿರುವ ಆ ರಸ ನಿಮಿಷದ ಚಿತ್ರ ನಿಂತಿತ್ತು.

"ಇಂದು ಅವರೇ ಮೊದಲು ಮಾತನಾಡಿಸುವವರೆಗೆ ನಾನು ಸುಮ್ಮನಿದ್ದು ಬಿಡುತ್ತೇನೆ." ಎಂದು ತನ್ನೊಳಗೇ ಅಂದುಕೊಂಡು ಕರುಣಾ ಮನೆಯಿಂದ

ಹೊರಬಂದಳು. ಅಕಾರಣವಾಗಿ ಭಾವದ ಸೆಳೆತಕ್ಕೆ ಸಿಕ್ಕ ಅವಳ ಮನ ತವಕ ಗೊಂಡು ದೂರ ದೂರ ಎಲ್ಲಿಗೋ ಧಾವಿಸಿ ನಡೆದಿತ್ತು. ಹತ್ತಾರು ಬಗೆಯ ಪ್ರಶ್ನೆ ಗಳು ಕೈಮಾಡಿ ಕರೆದು ಅವಳನ್ನು ಕಂಗೆಡಿಸಿದವು. ಅವುಗಳಿಗೆಲ್ಲ ಸಮಾಧಾನದ ಉತ್ತರಗಳನ್ನು ಹೇಳಿದಳು. ಹೀಗೆ ಭವಿಷ್ಯಕಲ್ಪನೆಗಳಲ್ಲಿ ಮೈಮರೆತ ಅವಳಿಗೆ ದಾರಿ ಸವೆದುದು ತಿಳಿಯಲೇ ಇಲ್ಲ. ತನ್ನ ಸಂಕೇತಸ್ಥಳವನ್ನು ದಾಟಿ ತುಸು ದೂರ ನಡೆದ ಮೇಲೇ ಅವಳಿಗೆ ತನ್ನ ಮರವಿನ ಅರಿವು ಬಂತು. "ಎಂತಹ ಅರಿವು ಗೇಡಿ ನಾನು! ಅವರು ಬಂದು ಎಷ್ಟು ಹೊತ್ತಾಗಿದೆಯೋ ಏನೋ!" ಎನ್ನುತ್ತ ಹಿಂತಿರುಗಿದಳು.

* * *

ಕರುಣಾ ಮನೆಗೆ ಬಂದಳು. ಪಡಸಾಲೆಯಲ್ಲಿ ಅಕ್ಕ ಯಾವುದೊ ಪತ್ರಿಕೆ ಯನ್ನು ಓದುತ್ತ ಕುಳಿತಿದ್ದಳು. ಕರುಣಾ ಬಂದುದನ್ನು ನೋಡಿ "ಎಷ್ಟು ಬೇಗ ಬಂದೆ ಕರುಣಾ ?" ಎಂದು ಕೇಳಿದಳು.

ಬೇರೆ ಯಾವ ಮಹಾಗ್ರಂಥದಲ್ಲಿಯ ಬಿಗಿಯಾದ ಪ್ರಶ್ನೆಯನ್ನು ಕೇಳಿದ್ದರೂ ಸುಲಭವಾಗಿ ಉತ್ತರಿಸಬಹುದಾಗಿತ್ತು. ಆದರೆ ಈ ಪ್ರಶ್ನೆ ಮಾತ್ರ ಕರುಣಾಳ ಕಳವಳವನ್ನು ಹೆಚ್ಚಿಸಿತು. ಎಷ್ಟೇ ಸಣ್ಣ ಮಾತಿಗಾಗಿ ಸುಳ್ಳು ಹೇಳಿದರೂ ಒಳ್ಳೆಯ ಸಂಸ್ಕಾರವಿದ್ದ ಮನ ಒಳಗೊಳಗೇ ಗಾಸಿಯಾಗುವದು. ಮನ ದುರ್ಬಲ ವಾದಾಗ ಇಲ್ಲದ ಸಂದೇಹಗಳು ಬೆದರಿಸುತ್ತವೆ. ಹೆಚ್ಚು ಮಾತನಾಡಿದರೆ ಒಡ ಲಲ್ಲಿದ್ದುದೆಲ್ಲ ನುಸುಳಿ ಹೊರ ಬಂದೀತೆಂಬ ಭಯ.

"ಕತ್ತಲಾಗುತ್ತದೆಂದು ನಾನು ಬೇಗನೆ ತಿರುಗಿ ಬಂದೆ." ಎಂದು ಪ್ರಯತ್ನ ಪೂರ್ವಕವಾಗಿ ತನ್ನ ಮುಖವನ್ನು ಅಕ್ಕನಿಂದ ಮರೆಮಾಡಿದಳು.

ಅಂದು ರಾತ್ರಿ ಊಟಮಾಡಿ ಮಲಗುವವರೆಗೂ ಕರುಣಳ ಮಾತು, ಕೆಲಸಗಳಲ್ಲಿ ಬಹಳ ಯತ್ನಪೂರ್ವಕವಾಗಿ ತಂದುಕೊಂಡ ಆಸಕ್ತಿಯಿತ್ತು. ಎಂದಿ ನಂತೆಯೇ ಗೆಲುವಾಗಿ, ಸ್ವಾಭಾವಿಕವಾಗಿ ಮಾತುಕತೆಗಳಲ್ಲಿ ಕಾಣಿಸಿಕೊಳ್ಳಲು ಅವಳು ಪ್ರಯತ್ನಿಸಿದಳು. ಆದರೂ ಒಳಗೊಳಗೆ ಕಾಣದ ಶಕ್ತಿಯೊಂದು ಅವ ಳನ್ನು ಹೀರುತ್ತಿತ್ತು.

ಮರುದಿನ ಅವಳು ಹಾಸಿಗೆ ಬಿಟ್ಟು ಎದ್ದಾಗ ಒಂಬತ್ತು ಗಂಟೆಯಾಗಿತ್ತು. ರಾತ್ರಿ ಬಹಳ ಹೊತ್ತು ಓದುತ್ತ ಕುಳಿತಿರಬಹುದೆಂದು ಅಕ್ಕ ಅವಳನ್ನು ಬೇಗನೆ

ಎಬ್ಬಿಸಿರಲಿಲ್ಲ.

ಇನ್ನೂ ತೂಕಡಿಸುತ್ತಲೇ ಮುಖ ತೊಳೆದುಕೊಂಡು ಅಡುಗೆಮನೆಗೆ ಬಂದಳು.

"ಯಾಕೆ ಕರುಣಾ, ರಾತ್ರಿ ಬಹಳ ಹೊತ್ತು ಓದುತ್ತಿದ್ದಿಯೇನು?" ಸಹಜವಾಗಿ ಕೇಳಿದಳು ಅರುಣಾ.

"ಇಲ್ಲ. ಏಕೋ ಬಹಳ ಆಯಾಸವಾಗಿತ್ತು. ಬೇಗನೆ ಎಚ್ಚರಾಗಲಿಲ್ಲ."

ಥರ್ಮಾಸಿನಲ್ಲಿ ಹಾಕಿಟ್ಟ ಚಹವನ್ನು ಕಪ್ಪಿಗೆ ಸುರುವಿ ತಂಗಿಯ ಕೈಗೆ ಇತ್ತಳು. ನೇರವಾಗಿ ಅಕ್ಕನ ದೃಷ್ಟಿಯನ್ನು ಎದುರಿಸಲಾರೆನೆಂಬ ವಿಚಿತ್ರ ಭಯ ಕರುಣಳಿಗೆ. ಯಾವುದೋ ಪ್ರೇರಣೆ ತನ್ನನ್ನು ತಪ್ಪುದಾರಿಗೆಳೆಯುತ್ತಿದೆಯೆಂದು ಅವಳಿಗೆ ಒಂದೊಂದು ಸಲ ಅನಿಸುತ್ತಿತ್ತು. ಅದು ತನ್ನನ್ನು ಸ್ವಾಭಾವಿಕವಾದ ಜೀವನದಿಂದ ಪರಾವೃತಗೊಳಿಸಿ, ಮನದ ಸ್ವಾಸ್ಥ್ಯವನ್ನು ಕಲಕಿ ಭಯಾನಕವಾದ ಕಂದಕಕ್ಕೆ ಸೆಳೆಯುತ್ತಿದೆಯೆಂಬುದು ಮಾತ್ರ ತಿಳಿಯುತ್ತಿರಲಿಲ್ಲ.

ಇತ್ತೀಚೆಗೆ ಅವಳ ಮನಸ್ಸು ಒಂದೇ ವಿಷಯದಲ್ಲಿ ಸೆರೆಸಿಕ್ಕಿತ್ತು. ಯಾವ ವಿಚಾರ ಬಂದರೂ ಅದರ ವಿಷಯವಾಗಿಯೇ. ಕುಳಿತರೆ, ನಿಂತರೆ, ಮತ್ತೆ ಅದೇ ಕನಸು. ಅದೇ ಹಂಬಲ. ಆ ಹಂಬಲದ ಬೆನ್ನು ಹತ್ತಿ ಅದನ್ನು ಈಡೇರಿಸಿಕೊಳ್ಳುವ ಹವ್ಯಾಸದಲ್ಲಿ ಅವಳ ಅಂತರಂಗದ ಚೈತನ್ಯವೆಲ್ಲ ವ್ಯಯವಾಗುತ್ತಿತ್ತು. ಸದಾ ಸುಧಾಕರನ ನೆನಹಿನ ಭ್ರಮೆಯಲ್ಲಿಯೇ ಮುಳುಗಿದ ಕರುಣಳಲ್ಲಿ ನಡೆಯುತ್ತಿರುವ ಸೂಕ್ಷ್ಮ ಬದಲಾವಣೆಗಳು ಯಾರಿಗೂ ಅರ್ಥವಾಗಲಿಲ್ಲ.

ಆಕೆ ತಡಮಾಡಿ ಏಳುವದಕ್ಕೆ 'ಹೀಗೇ ಆಲಸ್ಯ, ಬೇಸರ' ಎಂದುಕೊಳ್ಳುತ್ತಿದ್ದರು. ಒಂದೊಂದು ಬಾರಿ ಕಾಲೇಜಿಗೆ ಹೋಗದಿದ್ದರೆ, 'ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಳೆ' ಎಂಬ ಸಮಾಧಾನ ಹಚ್ಚಿಕೊಳ್ಳುತ್ತಿದ್ದರು. ಏಕಾಕಿಯಾಗಿ ಅವಳು ತನ್ನ ಕೋಣೆಯಲ್ಲಿ ಬಹಳ ಹೊತ್ತು ಕುಳಿತುಕೊಳ್ಳುತ್ತಿದ್ದರೆ, ಅದಕ್ಕೂ ಅವರಿಗೆ ವಿಶೇಷ ಕಾರಣ ಹೊಳೆಯದೆ 'ಅವಳ ಸ್ವಭಾವ ಮೊದಲಿನಿಂದಲೂ ಹಾಗೆಯೇ' ಎಂದು ಅಂದುಕೊಳ್ಳುತ್ತಿದ್ದರು. ಇವೆಲ್ಲವುಗಳ ಹಿಂದೆ ಅಡಗಿದ ಒಂದು ಬಗೆಯ ಔದಾಸ್ಯ, ನಿರುತ್ಸಾಹ, ಅಸಮಾಧಾನಗಳು ತೋರಿಕೆಗೆ ಸಾಮಾನ್ಯವಾಗಿ ಕಂಡರೂ ಮೂಲಕಾರಣ ಬೇರೆಯಾಗಿತ್ತು.

ಮನದಾಳದಲ್ಲಿ ಸುಪ್ತವಾಗಿದ್ದುಕೊಂಡ ಅವಳ ಅತೃಪ್ತ ಬಯಕೆ, ಆಸೆ,

ಹಂಬಲಗಳು ತಿಳಿಯದಂತೆ ಅವಳನ್ನು ದುರ್ಬಲಗೊಳಿಸುತ್ತ ನಡೆದಿದ್ದವು. ಪ್ರತಿಭಟಿಸುವ ವಿರೋಧಿ ಭಾವನೆಗಳನ್ನು ಅದುಮಿ, ನಿಗ್ರಹಿಸುವ ಬಲ ಅವಳ ಆತ್ಮಶಕ್ತಿಗೆ ಒಂದೊಂದು ಬಾರಿ ಅಸಾಧ್ಯವಾಗುತ್ತಿತ್ತು. ಒಂದೇ ಸವನೆ ನಡೆಯುತ್ತಿರುವ ಹೋರಾಟದಲ್ಲಿ ಅವಳು ದಿನದಿನಕ್ಕೆ ದುರ್ಬಲಳಾಗಹತ್ತಿದಳು. ಅವಳ ನಡೆಯಲ್ಲಿ ನಿರ್ಧಾರ, ಸ್ಪಷ್ಟತೆ, ಕರಗಲಾರಂಭಿಸಿದವು. ಯಾವುದೋ ಪ್ರವಾಹದ ಸೆಳವಿಗೆ ಸಿಕ್ಕು ಅಸಹಾಯಳಾಗಿ ಹೊರಟಿದ್ದಳು.

* * *

ಆ ದಿನ ಗಣಪತರಾಯರಿಗೆ ಆಫೀಸಿನಲ್ಲಿ 'Night duty' ಇದ್ದುದರಿಂದ ಮಧ್ಯಾಹ್ನ ಊಟಮಾಡಿ ಮಲಗಿಬಿಟ್ಟಿದ್ದರು ನಡುಮನೆಯಲ್ಲಿ. ಹೊತ್ತು ಆಗಲೆ ಮಧ್ಯಾಹ್ನ ನಾಲ್ಕು ಗಂಟೆಗೆ ಸಮೀಪಿಸಿತ್ತು.

ಅಡುಗೆಮನೆಯಲ್ಲಿ ವಿಶ್ರಾಂತಿಗೆಂದು ಒರಗಿದ್ದ ಅರುಣಾ ಆಯಾಸದಿಂದ ನಿದ್ದೆ ಹೋಗಿದ್ದಳು. ಮನೆ ಮೌನವಾಗಿತ್ತು. ಬೇಸಗೆ ಕಾಲಿರಿಸುತ್ತಿದೆಯೆಂಬುದನ್ನು ಸೂಚಿಸುವಂತೆ ಹೊರಗೆ ಬಿಸಿಲು ತುಸು ಉಗ್ರವಾಗಿಯೇ ಇತ್ತು.

ಕೊಸರಿಕೊಂಡು ಓಡುತ್ತಿದ್ದ ಮನವನ್ನು ಮತ್ತೆ ಎಳೆದು ತಂದು ಪುಸ್ತಕದಲ್ಲಿ ತೊಡಗಿಸಲೆತ್ನಿಸುತ್ತ ಕುಳಿತಿದ್ದಳು ಕರುಣಾ. ಈ ಜಗ್ಗಾಟದಲ್ಲಿ ಓದು ಸಾಗುವದು ಅಸಾಧ್ಯವಾಯ್ತು. ಹತಾಶಳಾದಷ್ಟು ಸಿಟ್ಟು ಹೆಚ್ಚಾಗುತ್ತಿತ್ತು. ಕೊನೆಗೊಂದು ಸಲ ಜುಗುಪ್ಸೆಯಿಂದ ತಲೆ ಕೊಡವಿ ಒರಗಿಬಿಟ್ಟಳು.

ಹೊರಗೆ ಯಾರೋ "ರಾವಸಾಬ್" ಎಂದು ಕೂಗಿದರು.

ಕರುಣಾ ಎದ್ದು ಬಾಗಿಲು ತೆರೆದಳು. ಗಣಪತರಾಯರ ಆಫೀಸಿನ ಆಳು ಆತ.

"ಸಾಹೇಬರಿದ್ದಾರೇನು ಬಾಯೀಸ ?"

"ನಿಂತಿರು. ಹೇಳುತ್ತೇನೆ" ಎಂದು ಒಳಗೆ ಬಂದು ಕರುಣಾ "ಮಾಮಾ, ಮಾಮಾ !" ಎಂದು ಗಣಪತರಾಯರನ್ನೆಚ್ಚರಿಸಿದಳು.

"ಅಂ !" ಎಂದು ಗಣಪತರಾಯರು ಎದ್ದು ಕುಳಿತರು.

"ನಿಮ್ಮ ಆಫೀಸಿನ ಆಳು ಬಂದಿದ್ದಾನೆ. ಏನೋ ಕೆಲಸವಿದೆಯಂತೆ."

"ಯಾರು ? ಅಣ್ಣೂ ಏನು ? "ಎಂದು ಹೊರಗಿದ್ದವನನ್ನುದ್ದೇಶಿಸಿ ಒಳಗಿನಿಂದಲೆ ಕೂಗಿದರು.

“ಹೌದು, ಸಾಹೇಬ” ಎನ್ನುತ್ತ ನಡುಮನೆಯ ಬಾಗಿಲ ವರೆಗೆ ಬಂದು ನಿಂತು ಗಣಪತರಾಯರ ಪ್ರಶ್ನೆಯ ದಾರಿಯನ್ನು ಕಾಯದೆ, “ಇವತ್ತ ಸಂಜೀನ್ಯಾಗ ಒಂದು ತಾಸು ಲಗೂನ ಬಾ ಅಂತ ಹೇಳ್ಯಾರ್ರಿ ದೊಡ್ಡ ಸಾಹೇಬರು. ಏನೋ ಅರ್ಜಂಟ ಬರೆಯೋದು ಐತಂತ್ರಿ” ಎಂದು ಅಣ್ಣಾ ಹೇಳಿದ.

“ಬರುತ್ತೇನೆ. ನೀನು ಹೋಗು.”ಎಂದು ಆತನನ್ನು ಕಳಿಸಿ ಹಾಗೆಯೇ ದಿಂಬಿಗೊರಗಿದರು. ಕಣ್ಣಲ್ಲಿ ನಿದ್ದೆ ಇನ್ನೂ ತೂಕಡಿಸುತ್ತಿತ್ತು. ಆಕಳಿಸುತ್ತಲೇ “ಅರುಣಾ!”ಎಂದು ಹೆಂಡತಿಯನ್ನು ಕರೆದರು. ಅರುಣಾ ಬಂದಳು. “ಇಂದು ಬೇಗನೆ ಹೋಗಬೇಕಾಗಿದೆ. ಚಹ ಮಾಡು.” ಎಂದು ಹೇಳಿ ಮುಖ ತೊಳೆಯಲು ಎದ್ದರು.

ಅವರು ಮುಖ ತೊಳೆದುಕೊಂಡು ಬರುವಷ್ಟರಲ್ಲಿ ಅರುಣಾ ಚಹ ತಯಾರಿಸಿದಳು. ಗಣಪತರಾಯರು ಬಂದ ನಂತರ ಅವರೆದುರಿಗಿಟ್ಟು ಬದಿಯಲ್ಲಿಯೇ ಕುಳಿತುಕೊಂಡು, “Night Duty ಇದೆಯಲ್ಲ. ಮತ್ತೇಕೆ ಬೇಗನೆ ಹೋಗುತ್ತೀರಿ?”ಎಂದು ಕೇಳಿದಳು.

“ಏನೋ ಅವಸರದ ಕೆಲಸವಂತೆ. ಹೇಳಿ ಕಳಿಸಿದ್ದಾರೆ.”ಎಂದು ಸಾವಕಾಶವಾಗಿ ಚಹ ಹೀರುತ್ತ ಹೆಂಡತಿಯೆಡೆಗೆ ನೋಡಿ “ಇವತ್ತು ಪ್ರದರ್ಶನಕ್ಕೆ ಹೋಗಬೇಕಾಗಿತ್ತಲ್ಲವೇ?”ಎಂದು ಕೇಳಿದರು.

“ಮೊದಲೆ ನಿಮಗೆ ಬೇಸರ. ಇಂದಂತೂ ಕೆಲಸದ ನೆವ ಬೇರೆ ಸಿಕ್ಕಿದೆ!”

“ನೀನು ಕರುಣಾ ಹೋಗಿ ಬನ್ನಿರಿ.” ಮತ್ತೆ ತುಸು ವಿಚಾರಿಸಿ “ಇಲ್ಲವಾದರೆ ನಾಳೆ ಹೋಗೋಣ”ಎಂದರು.

“ಆಯಿತು, ನಾಳಿನ ವರೆಗೂ ನಿಮಗೆ ನೆನಪುಳಿದರೆ ನನ್ನ ಪುಣ್ಯ!”

“ನೆನಪಿರದೆ ಏನು?”

“ಈಗೆಷ್ಟು ಕೆಲಸಗಳನ್ನು ನೆನಪಿಟ್ಟಿದ್ದೀರಿ ನೋಡಿರಿ! ಈಗ ಇಡ್ಲಿ ಪಾತ್ರೆ ತರಹೇಳಿ ಎಷ್ಟು ದಿನಗಳಾದವು?” ತುಸು ಅಸಮಾಧಾನದಿಂದ ಕೇಳಿದಳು.

“ಓ! ತಪ್ಪಾಯ್ತು, ನಾಳೆ ಮರೆಯದೆ ತಂದು ಕೊಡುತ್ತೇನೆ.” ಮರವಿನ ನೆನಪಾಗಿ ಸಮಾಧಾನಗೊಳಿಸುವ ಧ್ವನಿಯಲ್ಲಿ ಹೇಳಿ ಪರ್ಸ್‌ನ ಗಳಿಗೆ ಆಷ್ಟು

“ಮಾಮಾನಿಗೆ ಉತ್ತರ ಬರೆದಿರ್ಲ್ಲೇನು?

ಮೇಲಾಯ್ತು!” ತನ್ನೆದೆಯಲ್ಲಿ ಹುದುಗಿರಿಸಿಕೊಂಡುದನ್ನು

ಬೇಗನೆ ಅಕ್ಕನೆದುರು ಹೇಳದಿದ್ದರೆ ತಾನು ಬದುಕಿನುದ್ದಕ್ಕೂ ನವೆಯಬೇಕಾಗುತ್ತ ದೆಂಬುದನ್ನು ನೆನೆದಾಗ ಮಾತ್ರ ಅವಳಿಗೆ ಭಯವಾಯ್ತು.

....ಇನ್ನು ಹೃದ್ಯವಾದ ತನ್ನ ಮನೋಗತವನ್ನು ಹೇಳಬೇಕು.

....ಹೇಗೆ ?

ಈಗ ಮಾತ್ರ ಅವಳಿಗೆ ದಾರಿ ತೋರದಂತಾಯ್ತು

....ಹೇಳಿದರೆ ಅಕ್ಕ ಏನೆಂದುಕೊಂಡಾಳು ?

ಮುಂದೆ ಪರಿಣಾಮ ತಾನೆಣಿಸಿದಂತೆ ಸುಖದಾಯಕವಾಗಿ ಆಗಬಹು ದಾದರೂ ಮೊದಲು ಅಕ್ಕನೆದುರಿಗೆ ಹೇಗೆ ಹೇಳಬೇಕೆಂಬ ವಿಚಾರ ಕರುಣಳನ್ನು ಗಾಸಿಗೊಳಿಸಿತು.

ಮಾಲತಿ ಸುಮ್ಮನೆ ಕುಳಿತುಕೊಂಡು ಪತ್ರಿಕೆಯನ್ನು ನೋಡುತ್ತಿದ್ದಳು.

ಹೊರಬಾಗಿಲ ಸಪ್ಪಳವಾಯಿತು.

"ನೆನಪಿಟ್ಟುಕೊಂಡು ಉತ್ತರ ಬರೆಯಿರಿ." ಎಂದು ಗಂಡನಿಗೆ ಪತ್ತೆ ಎಚ್ಚರಿಕೆ ಕೊಟ್ಟು ಬಾಗಿಲನ್ನು ಮುಂದೆ ಮಾಡಿ ಅರುಣಾ ಒಳಗೆ ಬಂದಳು.

"ನೀವು ಇಲ್ಲಿ ಕುಳಿತುದನ್ನೇ ಮರೆತಿದ್ದೆ..." ಎನ್ನುತ್ತ ಕರುಣಳ ಕೋಣೆ ಯೊಳಗೇ ಬಂದಳು.

ಮಾಲತಿಗೆ ಈಗ ಉಸಿರಾಡಿಸಲು ಹಗುರಾಯ್ತು. "ಗಣಪತರಾಯರು ಹೋದರೇನು ?" ಎಂದು ಕೇಳಿ ಅವರು ಹೋದುದನ್ನು ದೃಢಪಡಿಸಿಕೊಂಡು, ಕರುಣಳತ್ತ ಕೊಂಕುನೋಟ ಬೀರುತ್ತ "ಈಗಿನಿಂದಲೇ ಗಂಭೀರಳಾಗಿಬಿಟ್ಟಿ ಯಲ್ಲ ಕರುಣಾ ?" ಎಂದು ಅರುಣಳ ಕಡೆಗೆ ನೋಡಿ "ಅರುಣಕ್ಕಾ, ಬೇಗನೆ ಹೋಳಿಗೆ ಬರುವಂತಿದೆಯಲ್ಲ ?" ಎಂದು ನಗುತ್ತ ಕೇಳಿದಳು.

"ಹೂಂ ! ಇನ್ನೂ ದೂರವಿದೆ. ಈಗ ವಿಚಾರ ನಡೆದಿದೆ ಅಷ್ಟೆ ಒಳ್ಳೆಯ ಮನೆತನದ ಸಂಬಂಧ ಕೂಡಿಬರುವದು ಸುಲಭದ ಮಾತೇ ?"

"ನಮ್ಮನ್ನು ಮರೆಯಬೇಡ ಕರುಣಾ !" ಎನ್ನುತ್ತ ಅವಳ ಕೈ ಹಿಡಿದು ಎಳೆದಳು.

"ಈಗಿನಿಂದಲೇ ಯಾಕೆ ಕನಸುಕಟ್ಟುವದು ಮಾಲತಿ?" ಎಂದು ಗಂಭೀರ ಳಾಗಿಯೇ ಹೇಳಿದಳು ಕರುಣಾ.

ಅನಾಯಾಸ ವಿಷಯ ಹೊರಟಿರುವಾಗಲೆ ತಂಗಿಯನ್ನು ವಿಚಾರಿಸಿಬಿಡ

ಬೇಕೆಂದೆನಿಸಿತು ಅರುಣಳಿಗೆ. ತಮ್ಮ ಮಾತು ಅವಳ ಕಿವಿಗೆ ಬಿದ್ದುದು ಒಂದು ರೀತಿಯಿಂದ ಒಳ್ಳೆಯದೆಂದುಕೊಂಡಳು. ಆದರೂ 'ಅವಳಾದರೂ ಆಲೋಚನೆ ಮಾಡಲಿ, ಇನ್ನೆರಡು ದಿನ ಬಿಟ್ಟು ಕೇಳಿದರಾಯ್ತು'ಂದು ಆಗ ಸುಮ್ಮನಾದಳು.

ಸ್ನೇಹಿತೆಯರ ಮೋಜಿನ ಹರಟೆ, ವಿನೋದಗಳಿಗೆ ತಾನಿರುವದು ಆತಂಕ ವಾದೀತೆಂದು ಕೆಲಸದ ನೆವ ಮಾಡಿ ಒಳಗೆ ಹೋದಳು.

"ಕೂಡಿರಿ ಅರುಣಕ್ಕಾ" ಎಂದು ಮಾಲತಿ ಆಗ್ರಹಪಡಿಸಿದಳು. ಕರುಣ ಳನ್ನು ಇನ್ನಷ್ಟು ಪೀಡಿಸಿ, ಚೇಷ್ಟೆಮಾಡಿ, ಮೋಜುಮಾಡಬೇಕೆಂದು ಮಾಲತಿಯ ತುಂಟ ಬಯಕೆ. ಅರುಣಾ ಇದ್ದರೆ ಹೆಚ್ಚು ಧೈರ್ಯ. ಇಲ್ಲದಿದ್ದರೆ ಕರುಣಾ ಸಿಟ್ಟಿ ನಿಂದ ಒಂದೇಟು ಬಿಗಿದರೆ....

"ನನಗೆ ಇನ್ನೂ ಕೆಲಸವಿದೆ. ಮತ್ತೆ ಬರುತ್ತೇನೆ. ಸಾಗಲಿ ನಿಮ್ಮ ಹರಟೆ." ಎಂದು ಹೇಳಿ ಒಳಗೆ ಹೋಗಿಬಿಟ್ಟಳು.

ಅರುಣಾ ಒಳಗೆ ಹೋದ ಮೇಲೆ ಬಾಗಿಲು ಮುಂದೆ ಮಾಡಿ ಕರುಣಳ ಬಳಿ ಬಂದು ಕುಳಿತು "ಇನ್ನೇನು ಕರುಣಾಬಾಯಿಯವರು ನೀವು !" ಎಂದು ಚುಚ್ಚಿ ದಳು. ಕರುಣಾ ಸುಮ್ಮನಿದ್ದಳು. "ಮಾತಾಡೇ ಕರುಣಾ! ಎಂದು ಬರುತ್ತಾ ರಂತೆ ನೋಡಲು ?" ಮತ್ತೆ ಕೇಳಿದಳು.

"ಅವರನ್ನೇ ಕೇಳು ಹೋಗು." ಎಂದು ಮುನಿಸಿನಿಂದ ಕರುಣಾ ಮುಖ ತಿರುವಿ ಕುಳಿತಳು.

"ಹೋಗಲಿ ಬಿಡು. ನಿನಗೆ ಇಷ್ಟು ಸಿಟ್ಟು ಬರುತ್ತಿದ್ದರೆ ನಾನೇಕೆ ಪೀಡಿ ಸಲಿ ?" ಎಂದರೂ ಕರುಣಾ ಮಾತಾಡಲೇ ಇಲ್ಲ. ಮಾಲತಿ ಅಲ್ಲಿಂದ "ನಾನು ಹೋಗುತ್ತೇನೆ ಕರುಣಾ"ಎಂದವಳೇ ಎದ್ದು ಬಿಟ್ಟಳು.

ಕರುಣಳ ತಿರುವಿದ ಮುಖ ಇತ್ತ ಹೊರಳಿದ್ದಿಲ್ಲ. ಮಾಲತಿ ಹೋಗ ಲಿಕ್ಕಿಲ್ಲೆಂದೇ ಆಕೆ ಬಗೆದಿದ್ದಳು. ಬಾಗಿಲು ತೆರೆದ ಸದ್ದಾದ ಮೇಲೆ ತಿರುಗಿ ನೋಡಿದಳು. ಬಾಗಿಲ ಬಳಿ ನಿಂತ ಮಾಲತಿ ಇವಳೆಡೆಗೇ ನೋಡುತ್ತಿದ್ದಳು. ಕರುಣಾ ಮುಖ ಹೊರಳಿಸಿದೊಡನೆ ಅದನ್ನು ನೋಡದವರಂತೆ, ಹೊರಗೆ ಹೋಗು ವವರಂತೆ ನಟಿಸಿದಳು. ಕೋಪದಿಂದ ಕರುಣಾ, "ಏ ಮಾಲೀ, ಬಾರೇ...." ಎಂದು ಗದ್ದರಿಸುತ್ತ ಎದ್ದು ಹೋಗಿ ಮಾಲತಿಯ ರಟ್ಟೆ ಹಿಡಿದೆಳೆದು ತಂದು ಕೂಡಿಸಿ "ಇನ್ನು ನೀನು ಕೋಪಿಸಿಕೋ. ನಾನು ಹೊರಡುತ್ತೇನೆ!"ಎಂದು

ಹೊರಟಂತೆ ಮಾಡಿ ನಿಂತಳು. ಇಬ್ಬರೂ ಒಬ್ಬರೊಬ್ಬರನ್ನು ನೋಡಿದರು. ನಗೆ ಬಂದಿತು. ನಕ್ಕರು.

"ಮಾಳಿಗೆಯ ಮೇಲೆ ಕೂಡೋಣ ನಡೆ, ಇಲ್ಲಿ ಬೇಡ"ಎಂದು ಒಮ್ಮೆಲೆ ಕರುಣಾ ಮಾಲತಿಯ ಕೈ ಹಿಡಿದು ಕರೆದೊಯ್ದಳು.

ಬೇಸಗೆಯ ಆಗಂತುಕ ಮೋಡಗಳು ಅಲ್ಲೊಂದು ಇಲ್ಲೊಂದು ಚೆದುರಿ ನಿಂತಿದ್ದವು. ಹುಣ್ಣಿಮೆ ಸಮೀಪಿಸಿತ್ತಾದರೂ ತಿಂಗಳಿನ ಬೆಳಕು ಮಸುಕಾಗಿಯೇ ಇತ್ತು. ಗಚ್ಚಿನ ಮಾಳಿಗೆಯಲ್ಲಿ ಕುಳಿತರು. ಹಿತವಾಗಿ ಗಾಳಿ ತೀಡುತ್ತಿತ್ತು. ಮಾಲತಿಗೆ ಹೊಂದಿಕೊಂಡೇ ಕರುಣಾ ಕುಳಿತಿದ್ದಳು. ಅವಳ ಕೈಬೆರಳುಗಳಲ್ಲಿ ತನ್ನ ಬೆರಳುಗಳನ್ನು ಹೆಣೆದಳು. ನಾಲಗೆಯ ತುದಿಯವರೆಗೆ ಬಂದು ಬಂದು ಹಿಂತಿರುಗುತ್ತಿತ್ತು ಯಾವುದೋ ಮಾತು.

"ಮಾಲತೀ !"ಎಂದು ಮೃದುವಾಗಿ ಉಸುರಿದಳು.

ಮುಂದೆ ಮಾತನಾಡಲಿಲ್ಲ. ನೀಳವಾದ ಉಸಿರನ್ನೆಳೆದಳು.

"ಯಾಕೆ ಕರುಣಾ ?"

ಮಾಲತಿಯ ಮಡಿಲಲ್ಲಿ ತಲೆಯಿಟ್ಟು ಬಾನಿನೆಡೆ ಮುಖಮಾಡಿ ಮಲಗುತ್ತ "ಏನೂ ಇಲ್ಲ; ಹೀಗೆಯೇ."ಎಂದು ಅರ್ಥವಾಗದಂತೆ ನುಡಿದಳು.

ಕರುಣಳ ಉದ್ವೇಗ, ತವಕ, ಕಾತರಗಳನ್ನು ಮಾಲತಿ ಗಮನಿಸದಿರಲಿಲ್ಲ. ಮದುವೆಯ ಮಾತುಕತೆ ಸ್ವಾಭಾವಿಕವಾಗಿ ಅವಳಲ್ಲಿ ಹೀಗೆ ಪರಿಣಾಮವನ್ನುಂಟು ಮಾಡಿರಬಹುದೆಂದು ಊಹಿಸಿದಳು.

"ನಿಮ್ಮ ಸೋದರಮಾವ ಎಂದು ಬರುತ್ತಾರಂತೆ ? "

"ಅದನ್ನೇನು ಬರೆದಿರಲಿಕ್ಕಿಲ್ಲ"

"ನಿನ್ನ ವಿಚಾರವೇನಿದೆ? ಅಕ್ಕ ನಿನ್ನನ್ನು ಕೇಳಬಹುದಲ್ಲ ? "

"ನಾನು ನೋಡುವದೇ ಇಲ್ಲ." ತಟ್ಟನೆ ನುಡಿದಳು ಕರುಣಾ.

"ಯಾರನ್ನು? "

"ಯಾರನ್ನೆಂದರೆ, ನನ್ನನ್ನು ನೋಡಲು ಬಂದವರನ್ನು. "

"ನೀನು ನೋಡುವ ಪ್ರಮೇಯವೇ ಇಲ್ಲ. ಅವರು ನಿನ್ನನ್ನು ನೋಡುತ್ತಾರೆ ಹುಚ್ಚೀ ! "ಎಂದು ಸಸ್ನೇಹದಿಂದ ಕೆನ್ನೆ ಚಿವುಟಿದಳು.

"ಆ ಸಂದರ್ಭವೇ ಬಾರದಂತಾದರೆ....? "

"ಹಾಗೆಂದರೇನೇ ? ಎಂದಾದರೂ ಅದು ಬರತಕ್ಕದ್ದೇ. ಅವರನ್ನಲ್ಲ ದಿದ್ದರೂ ಮತ್ತಾರನ್ನಾದರೂ ನೋಡಲೇಬೇಕಲ್ಲ !"

"ನಾನು ಯಾರನ್ನೂ ನೋಡುವದೇ ಇಲ್ಲ" ಎನ್ನುತ್ತ ಅವಳ ಮಡಿಲಲ್ಲಿ ಮುಖ ಹುದುಗಿಸಿದಳು.

ಮಾಲತಿಗೆ ನಗು ತಡೆಯದಾಗಿ "ಹಾಗಾದರೆ ನೀನು ಮದುವೆಯನ್ನೇ ಒಲ್ಲೆನೆನ್ನುತ್ತೀಯೇನು ?" ಎಂದು ಕೇಳಿದಳು.

"ನಿನ್ನದೊಂದು ತಲೆ! ಹಾಗೆಲ್ಲಿ ಹೇಳಿವೆ ?"

ಮರುನಿಮಿಷದಲ್ಲಿಯೇ ಸುಳಿದ ಸಹಜಕಲ್ಪನೆಯೊಂದು ಮಾಲತಿಗೆ ಅಚ್ಚರಿಯನ್ನುಂಟುಮಾಡಿತು. ಕರುಣಳ ಕೆನ್ನೆಯನ್ನು ಸವರುತ್ತ ಅವಳ ಮುಖದ ಕಡೆ ಬಾಗಿ "ಅಂದರೆ ಯಾರನ್ನಾದರೂ ಈಗಾಗಲೇ ಆರಿಸಿಕೊಂಡಿರುವಿ ಯೇನು?" ಎಂದು ಪಿಸುಮಾತಿನಲ್ಲಿ ಕೇಳಿದಳು.

ಕರುಣಳಿಗೆ ಉಕ್ಕಿ ಉಕ್ಕಿ ನಿಂತಿತ್ತು. ಆ ಮಧುರ ನೆನಹಿನ ಸುಖವನ್ನು ಒಬ್ಬಳೆ ಅನುಭವಿಸಲಾಗಲಿಲ್ಲ. ಮೆಲ್ಲನೆದ್ದು ಮಾಲತಿಯ ಕೊರಳನ್ನು ಬಳಸಿ ಅವಳೆದೆಗೊರಗಿದಳು. ಒರಗಿದಲ್ಲಿಂದಲೇ "ಮಾಲತೀ !" ಧೀರ ಸಾವಕಾಶವಾಗಿ ನುಡಿದಳು.

ತೋಳುಗಳಲ್ಲೊರಗಿದ ಕರುಣಳೆಯ ಭಾವವನ್ನರಿಯುವದು ಮಾಲತಿಗೆ ಕಠಿಣವಾಗಲಿಲ್ಲ. "ಯಾಕೆ ಕರುಣಾ ?" ಎಂದು ವಿಶ್ವಾಸದ ಮಾತಿನಲ್ಲಿ ಕೇಳಿದಳು.

"ಸಾನೊಂದು ಮಾತು ಹೇಳುತ್ತೇನೆ. ಯಾರೆದುರೂ ಹೇಳಬಾರದು."

ಮಾಲತಿಗೆ ವಿಸ್ಮಯವಾಯಿತು. ವಿನೋದಕ್ಕಾಗಿ ತಾನು ಕೇಳಿದ ಪ್ರಶ್ನೆ ತನ್ನಲ್ಲಿ ಮೂಡಿದ ಸಹಜಕಲ್ಪನೆಯೇ ಸತ್ಯವಾಗಿಯೂ ಸಂಭವಿಸಿರಬಹುದೆಂದು ಅವಳು ತಿಳಿದಿರಲಿಲ್ಲ. ಈಗಲೂ ಅದು ಸ್ಪಷ್ಟವಾಗಿ ಗೊತ್ತಾಗಿರದಿದ್ದರೂ ಕರುಣಾ ಹೇಳಬಹುದಾದ ಸಂಗತಿಯ ಕಲ್ಪನೆ ಅವಳಿಗೆ ಮಸುಮಸುಕಾಗಿ ಬರ ಹತ್ತಿತು. "ಏನೇ ಅದು ?" ಎಂದು ಆತುರದಿಂದ ಕೇಳಿದಳು.

"ನನ್ನಾಣೆಗೂ ಅಂ.... ಅದನ್ನು ಯಾರೆದುರೂ ಹೇಳುವದಿಲ್ಲೆಂದು ವಚನ ಕೊಡುತ್ತೀಯಾ ?"

"ಹೂಂ"

"ನನ್ನ ಮದುವೆ ನನ್ನ ಹೃದಯಪೀಠದಲ್ಲಿ ಆಗಲೆ ಆಗಿದೆ." ಭಾವದುಂಬಿ ಬಂದ ಕರುಣಳ ಈ ಒಳನುಡಿ ಅವಳನ್ನೆ ಮೈಮರೆಸಿತ್ತು. ಹೊರ ಉಸಿರಾಗಿ ಬಂದು ಹೃದಯದ ಉದ್ವೇಗವನ್ನು ಕಡಿಮೆ ಮಾಡಿತ್ತು.

"ಯಾರ ಜೊತೆ ?"

ಒಂದು ಕ್ಷಣ ಕರುಣಳ ಎದೆಯ ಬಡಿತ ಜೋರಾಯ್ತು. ಸಹಜಲಜ್ಜೆ ಆವರಿಸಿತು. ತನ್ನೆದೆಯ ಅಮೌಲ್ಯ ರಹಸ್ಯವನ್ನೇ ತೆರೆದಿಡುತ್ತಿರುವಂತೆ ಅವಳಿಗೆ ಎನಿಸಿತು. ಆ ಲಜ್ಜೆಯೊಡನೆ ಭಯ ಬೆರೆತು ನಿಂತಿತ್ತು. ದೈನ್ಯದಿಂದ "ಮಾಲತೀ' ಯಾರೆದರೂ ಹೇಳಬಾರದು ಮತ್ತೆ. ಅದು ನನ್ನ ಪ್ರೇಮಲೋಕದ ಪವಿತ್ರವಸ್ತು!" ಎಂದಾಗ ಅವಳ ಧ್ವನಿ ಕ್ಷೀಣವಾಗಿ ಕಂಪಿಸುತ್ತಿತ್ತು.

"ಕರುಣಾ, ನಿನ್ನ ಹೃದಯದ ಭಾವನೆ ನನಗೆ ತಿಳಿಯದಿರುವದೇ? ನಾನು ಯಾರೆದರೂ ಹೇಳುವದಿಲ್ಲ. ನಿನ್ನಾಣೆ. ಆಯ್ತೇ ? ನಿನ್ನ ಬದುಕು ಮಂಗಲಮಯ ವಾಗುವದನ್ನು ಕಂಡು ನಲಿಯುವವರಲ್ಲಿ ನಾನೂ ಒಬ್ಬಳೆಂಬುದನ್ನು ಮರೆಯ ದಿರು ಕರುಣಾ." ಅವಳ ಮಾತಿನಲ್ಲಿ ಅಭಯದಾನವಿತ್ತು.

ಕರುಣಳಿಗೆ ಆಗ ಅವಳೆದುರು ಹೇಳಲು ಧೈರ್ಯ ಬಂದಿತು. ಉತ್ಕಂಠಿತ ಧ್ವನಿಯಲ್ಲಿ "ಆ ದಿನ ನಮ್ಮ ಮನೆಗೆ ಬಂದಿದ್ದರಲ್ಲಾ, ನಮ್ಮ ಮಾಮಾನ ಸ್ನೇಹಿತರು...."

"ಅವರಲ್ಲಿ ಯಾರು ?"

ಪತಿಯ ಹೆಸರನ್ನುಚ್ಚರಿಸುವ ಮೊದಲಗಿತ್ತಿಯಂತೆ ಕರುಣಾ ಹೆಸರನ್ನು ಉಚ್ಚರಿಸಲು ನಾಚಿದಳು.

" 'ನೀವು ನಮ್ಮ ಕಾಲೇಜಿನಲ್ಲಿ ಇಲ್ಲವೇ ?' ಎಂದು ನನ್ನನ್ನು ಕೇಳಿದರಲ್ಲ, ಅವರೇನು ?" ಎಂದು ಮಾಲತಿ ನೆನಪು ಮಾಡಿಕೊಂಡಳು.

"ಊಹೂಂ. ಅವರಲ್ಲ. ಜೊತೆಯಲ್ಲಿ ಕುಳಿತಿದ್ದರಲ್ಲ ಇನ್ನೊಬ್ಬರು..."

ಸುಧಾಕರನ ಚಿತ್ರ ಅಸ್ಪಷ್ಟವಾಗಿ ಮಾಲತಿಯ ಕಲ್ಪನೆಯಲ್ಲಿ ಮೂಡಿತು.

"ಅವರ ಹೆಸರೇನು ?"

"ನೀನೊಬ್ಬಳು, ನಾಚಿಗೆಯಿಲ್ಲದವಳು...." ಎನ್ನುತ್ತ ಮಾಲತಿಯ ಕಿವಿಯಲ್ಲಿ ಮೆಲ್ಲಗೆ 'ಸುಧಾಕರ' ಎಂದು ಉಸುರಿದಳು.

ಆ ಒಂದು ಹೆಸರಿನಲ್ಲಿ ಅವಳಿಗೆ ವಿಶ್ವದ ಸಮಸ್ತ ಚೆಲುವು, ಸಂತೋಷ,

ಪ್ರೀತಿಗಳು ತುಂಬಿ ನಿಂತಂತಿತ್ತು. ಹೆಸರು ಕೇಳಿ ಮಾಲತಿಗೆ ಸೋಜಿಗವಾಯಿತು. ಈ ಮುಗ್ಧ ಹುಡಿಗೆ ಇಷ್ಟೆಲ್ಲ ಮುಂದುವರಿಯುವಂತೆ ಹೇಗಾಯ್ತು? ಎಂಬುದೇ ಅವಳಿಗೆ ಅಚ್ಚರಿ. ಇಲ್ಲಿಯವರೆಗೆ ಸುಳಿವು ಕೂಡ ಸಿಗದಂತೆ, ಯಾರಿಗೂ ತಿಳಿಯದಂತೆ ಹೇಗೆ ಬೆಳೆದು ಬಂದಿತು ಈ ಪ್ರೇಮದ ಕತೆ? ಎಂಬ ಕುತೂಹಲದ ಪ್ರಶ್ನೆ ಅವಳೆದುರು ನಿಂತಿತು.

"ಒಮ್ಮೆಲೆ ಧೈರ್ಯಮಾಡಿ ನೀನು ಹೇಗೆ ಕೇಳಿದೆ ಕರುಣಾ?"

"ಅದು ಅಂತರಂಗದ ಪ್ರೇರಣೆ ಮಾಲತೀ. ಅದೊಂದು ದೈವಿಕ ಸಂಕೇತ. ಮೊದಲು ಬಾರಿ ನಾನು ಅವರನ್ನು ಕಂಡಾಗಲೇ ನನ್ನ ಹೃದಯ ಅವರನು ಗುರುತಿಸಿತು. ಜನ್ಮಜನ್ಮದ ಸ್ನೇಹ ಪ್ರೇಮಗಳ ಬಂಧನದ ನೆನಹು ಮೂಡಿ ನಿಂತಂತಾಯ್ತು."

"ಇದೆಲ್ಲ ಕಾವ್ಯದಲ್ಲಿಯ ಕಲ್ಪನೆಯಾಯ್ತು. ನೀನವರನ್ನೆಲ್ಲಿ ಕಾಣುತ್ತಿದ್ದಿ?"

"Green's Hotel ಬಳಿ ಭೆಟ್ಟಿಯಾಗುತ್ತಿದ್ದೆವು. ಮುಂದೆ ಊರ ಆಚೆಗೆ ದೂರ ಹೋಗಿ ಮಾತನಾಡುತ್ತಿದ್ದೆವು."

"ಪ್ರಥಮ ದರ್ಶನದಲ್ಲಿ ಮಾತನಾಡಲು ಬಂದಿರಲಿಕ್ಕಿಲ್ಲ ನಿನಗೆ?"

"ಮೊದಮೊದಲು ಸಂಕೋಚವಾಗುತ್ತಿತ್ತು. ನನ್ನ ಆತ್ಮನಿವೇದನೆಯನ್ನು ಮಾಡಿದೆ. ಅವರ ಹೃದಯವೂ ಪ್ರತಿಸ್ಪಂದಿಸಿತು. ಒಂದು ದಿನ.... ನನ್ನ ಕೈಗಳನ್ನು ಹಿಡಿದು "ಕರುಣಾ...." ಎಂದು ಪ್ರೇಮಪೂರ್ವಕವಾಗಿ ಕರೆದರು. ಆಗ ನಾನು ಕರಗಿ ಅವರಂತರಂಗದಲ್ಲಿ ಮೀಯುತ್ತಿರುವಂತೆನಿಸಿತು ನನಗೆ...."

ಕರುಣಳಿಗೆ ಭಾವೋನ್ಮಾದವಾಗಿತ್ತು. ಬಲವಾಗಿ ಮಾಲತಿಯನ್ನಪ್ಪಿ ಕೊಂಡು ಕಣ್ಣೆವೆಗಳನ್ನು ತೆರೆಯದೆ ಮಾತನಾಡುತ್ತಿದ್ದಳು. ದೂರದ ಯಕ್ಷ ಲೋಕದಲ್ಲಿ ತೇಲುತ್ತಿದ್ದಳವಳು.

ಒಂದೆರಡು ನಿಮಿಷ ಕರುಣಾ ಮಾತನಾಡಲಿಲ್ಲ.

"ಕರುಣಾ, ಅವರ ಊರು ಮನೆ, ಮತ್ತಿತರ ವಿಷಯಗಳಲ್ಲಿ ಹೇಗೆ?"

"ಆ ವಿಷಯಗಳಲ್ಲೊಂದನ್ನೂ ನಾನು ವಿಚಾರಿಸಿಲ್ಲ. ಅದು ನನಗೆ ಬೇಡ. ನನ್ನೊಲುಮೆಯ ಮೂರ್ತಿಯಲ್ಲಿ ಸರ್ವಸ್ವವನ್ನು ಕಂಡುಕೊಂಡಿದ್ದೇನೆ ನಾನು. ಹೋದ ಆದಿತ್ಯವಾರ ಅವರೊಡನೆ ಸಾಯಂಕಾಲ ತಿರುಗಾಡಲು ಹೋಗಿದ್ದೆ. ಸ್ನೇಹಿತೆಯ ಮನೆಗೆ ಹೋಗುತ್ತೇನೆಂದು ನಿನಗೆ ಸುಳ್ಳು ಹೇಳಿದೆ ಮಾಲತೀ.

ಆಗ ಅಂದೇಕೋ ಅವರು ಖಿನ್ನರಾಗಿದ್ದರು. ಯಾವುದೋ ಗಂಭೀರ ಆಲೋಚನೆಯಲ್ಲಿ ಮುಳುಗಿದ್ದರು. ನನಗೇ ಸಂಕಟವಾಯ್ತು ಅವರ ಮುಖ ನೋಡಿ.... ನಮ್ಮ ಈ ಪ್ರೇಮ ನೈಜ ಜೀವನದಲ್ಲಿ ಫಲಿಸದಿದ್ದರೆ? ಎಂಬ ಅನುಮಾನ, ಭಯವಾಗಿತ್ತು ಅವರಿಗೆ. 'ಅಕ್ಕ, ಮಾಮಾ ಒಪ್ಪುತ್ತಾರೆಯೇ' ಎಂದು ನನ್ನನ್ನು ದೈನ್ಯದಿಂದ ಕೇಳಿದರು. ನನಗೂ ಒಂದು ಕ್ಷಣ ಅಂಜಿಕೆಯಾಯ್ತು. ನಿರಾಶೆಯಾಯ್ತು....ಅಕ್ಕ ಒಪ್ಪುತ್ತಾಳೆ, ಅಲ್ಲವೇನೇ ಮಾಲತೀ?" ಎಂದು ಕೇಳಿದಳು.

ಅವಳ ಮಾತಿನ ಗುಂಗಿನಲ್ಲಿ ಮೈಮರೆತಿದ್ದ ಮಾಲತಿ "ಅರುಣಕ್ಕ ಒಪ್ಪಿರುತ್ತಾರೇನೆಯೇ? ಎಂತಹ ಪುಕ್ಕಳು ನೀನು!" ಎಂದಳು.

"ಇಲ್ಲಿಯ ವರೆಗೆ ಅಕ್ಕನನ್ನು ವಂಚಿಸುತ್ತ ಬಂದುದಕ್ಕೆ ನನಗೆ ಮುಖ ಎತ್ತದಂತಾಗಿದೆ ಅವಳೆದುರು" ಎಂದು ಪರಿತಪಿಸಿದ ಧ್ವನಿಯಲ್ಲಿ ಹೇಳಿದಳು ಕರುಣಾ.

"ಇಲ್ಲದ ಕೊರಗು ಹಚ್ಚಿಕೊಳ್ಳಬೇಡ. ಇದರಲ್ಲಿ ಯಾವ ವಂಚನೆಯಿದೆ?"

"ಯಾರಿಗಾದರೂ ತಿಳಿದರೆ?"

"ಹೀಗೆಲ್ಲ ಅಕಾರಣಭಯದ ವಿಚಾರವೇಕೆ? ತಿಳಿದರೂ ಆಗುವದೇನು? ಇದರಲ್ಲಿ ದೋಷವೇನಿದೆ?"

"ನನಗೇಕೋ ಭಯವಾಗುತ್ತಿದೆ ಮಾಲತಿ. ಅಕ್ಕನಿಗೆ, ಮಾಮಾನಿಗೆ ಅಪಕೀರ್ತಿ ಬರುವಂತೆ ನಾನು...." ಎಂದು ಬಿಕ್ಕಿ ಅಳಹತ್ತಿದಳು.

"ಹುಚ್ಚೀ ಸುಮ್ಮನಾಗು. ಅಂತಹದೇನೂ ಆಗುವದಿಲ್ಲ. ಪರಸ್ಪರರು ಬಯಸಿ ಮದುವೆಯಾಗುವದರಲ್ಲಿ ಯಾರಿಗೂ ಅಪವಾದ ಬರಲಾರದು" ಎಂದು ಅವಳ ಬಾಯ ಮೇಲೆ ಕೈಯಿಟ್ಟು ಸಮಾಧಾನಗೊಳಿಸಿದಳು.

ಒಂದೆರಡು ನಿಮಿಷ ಕಳೆದನಂತರ "ನನಗೆ ಒಂದು ವಿಷಯಕ್ಕಾಗಿ ಸಮಾಧಾನ ಹೆಮ್ಮೆಯಿದೆ ಮಾಲತಿ. ನಾನಾಗಲಿ ಅವರಾಗಲಿ, ಸಂಯಮ ಮೀರಿ ನಡೆದುಕೊಂಡಿಲ್ಲ ಈ ವರೆಗೂ." ಎಂದಳು.

"ಅದುವೇ ಪ್ರೀತಿಯ ಉನ್ನತ ಪೀಠದ ಸೋಪಾನ ಕರುಣಾ!"

"ಮುಂದೆ ಹೇಗೆ ಮಾಲತೀ?"

ಅವಳ ಉದ್ದೇಶವನ್ನು ಗ್ರಹಿಸಿದ ಮಾಲತಿ "ಸಮಯ ಒದಗಿ ಬರಲಿ, ನಾನೇ ಅರುಣಕ್ಕನಿಗೆ ಹೇಳುತ್ತೇನೆ. ನೀನು ಚಿಂತೆಯಿಲ್ಲದೆ ಇದ್ದುಬಿಡು."

ಎಂದು ಅಭಯವಿತ್ತಳು. ಮಾಲತಿಯ ಈ ಮಾತಿನಿಂದ ಕರುಣಳಿಗೆ ನೆಮ್ಮದಿಯಾಯ್ತು. ತನ್ನ ಸಮಸ್ಯೆ ಬಿಟ್ಟಂತಾಯಿತು. ಅತ್ಯಂತ ಕೃತಜ್ಞತಾಭಾವದಿಂದ "ಮಾಲತೀ...." ಎಂದಳು.

## ಪ್ರಕರಣ : ೮

ಮತ್ತೆರಡು ದಿನಗಳು ಉರುಳಿದವು.

ಹಿಂದಿನ ಆ ಸಂಜೆಯಂದು ಇದ್ದ ಉತ್ಸಾಹ, ಸಮಾಧಾನ, ಹೃದಯದ ಸಂಭ್ರಮ ಕರುಣಳಿಗೆ ಉಳಿಯಲಿಲ್ಲ. ಬಿಸಿನೀರಿನಲ್ಲಿಟ್ಟ ಉಷ್ಣತಾಮಾಪಕವನ್ನು ಒಮ್ಮೆಲೆ ಹಿಮದ ಗಡ್ಡೆಯಲ್ಲಿಟ್ಟಾಗ ಸರ್ರನೆ ಕೆಳಗಿಳಿಯುವ ಪಾರಜದಂತೆ ಅವಳ ಮನಸ್ಥಿತಿಯಾಯಿತು.

ಕಳೆದ ಈ ಎರಡು ದಿನಗಳೆಂದರೆ ಕರುಣಳಿಗೆ ಎರಡು ವರುಷಗಳಂತೆ ಆದವು. ಮಾಲತಿಯೆದುರು ಹೇಳಿದುದು ತಪ್ಪಾಯ್ತೇ ಎಂಬ ಸಂದೇಹ, ಅನುಮಾನ; ಕಳೆಗುಂದಿದ ಮುಖದಲ್ಲಿ ತೀಕ್ಷ್ಣವಾಗಿ ಕೊರೆಯುವ ಚಿಂತೆ ಎದ್ದು ಕಾಣುತ್ತಿತ್ತು. ಉಡಿಗೆಯಲ್ಲಿ ಆಸಕ್ತಿ ಕಡಿಮೆಯಾಯಿತು. ಸಂಪೂರ್ಣ ನಿರಾಸಕ್ತಿಯಾಯಿತೆಂದರೂ ಸರಿ. ಊಟಮಾಡುವಾಗಲೂ ಅಷ್ಟೆ. ಒತ್ತಾಯಕ್ಕಾಗಿ ಉಂಡಂತೆ ಮಾಡಹತ್ತಿದಳು. ಮನೆ ಬಿಟ್ಟು ಹೊರಗೆ ಹೋಗುವದೇ ಅವಳಿಗೆ ಬೇಡವಾಯ್ತು.

ಮನೆಯಲ್ಲಿರುತ್ತಿದ್ದರೂ ಯಾರ ಜೊತೆಯಲ್ಲಿಯೂ ಹೆಚ್ಚು ಮಾತನಾಡುತ್ತಿರಲಿಲ್ಲ. ಸದಾ ತನ್ನ ಕೋಣೆಯಲ್ಲಿ ಬಿದ್ದುಕೊಂಡಿರುತ್ತಿದ್ದಳು. ಒಂದೊಂದು ಬಾರಿ ಆರೆಶೂನ್ಯದೃಷ್ಟಿಯಿಂದ ತನ್ನ ತಂಬೂರಿ, ಪುಸ್ತಕಗಳು, ಭಾವಚಿತ್ರಗಳನ್ನು ನೋಡುವಳು. ತಂಬೂರಿಯನ್ನು ನುಡಿಸಬೇಕೆಂದು ಹೊದಿಕೆಯನ್ನು ತೆರೆದಳು ಮಾತ್ರ. ಮನಸ್ಸಾಗಲಿಲ್ಲ. ಮತ್ತೆ ಹಾಗೇ ಇಟ್ಟುಬಿಟ್ಟಳು.

ಅರುಣಾ "ಹೀಗೇಕಾಗಿದ್ದೀ ? "ಎಂದು ಕೇಳಿದಾಗೆಲ್ಲ "ನನಗೇನಾಗಿದೆ ಅಕ್ಕಾ ? ಇರುವ ಹಾಗೇ ಇದ್ದೇನಲ್ಲ."ಎಂದು ನಕ್ಕುಬಿಡುತ್ತಿದ್ದಳು. ಆದರೆ ಆ ಶುಷ್ಕನಗೆಯನ್ನೂ ತಂದುಕೊಳ್ಳಬೇಕಾದರೆ ಅವಳ ಅಂತರಂಗವೆಲ್ಲ ಹೀರಿಹೋಗುತ್ತಿತ್ತು. ಇತ್ತೀಚೆಗಂತೂ ಅಕ್ಕನ ಮುಖ ತಪ್ಪಿಸುವದೇ ಅವಳ ಕೆಲಸವಾಯಿತು.

ಎಲ್ಲಿ, ಏನು ಕೇಳುತ್ತಾಳೋ ಎಂಬ ಹೆದರಿಕೆ. ಆ ಹೆದರಿಕೆ ಶಾಶ್ವತವಾಗಿ ಬೇರೂರಿತು. 'ಅಕ್ಕನಿಗೆ ನಾನು ದ್ರೋಹಮಾಡಿದೆ. ವಂಚಿಸಿದೆ. ಅವಳಿಗೆ ನಾನು ಮುಖ ತೋರಿಸಲಾರೆ.' ಎಂಬ ವಿಚಾರ ಸದಾ ಅವಳನ್ನು ಕಾಡಿಸಹತ್ತಿತು.

ಮಾಲತಿ ಒಂದು ದಿನ ಮಧ್ಯಾಹ್ನ ಎಂದಿನಂತೆ ಮಾತನಾಡಿಸಲು ಬಂದರೆ ನಿದ್ದೆಹತ್ತಿದವರಂತೆ ನಟಿಸಿಬಿಟ್ಟಳು. 'ಪಾಪ, ಮಲಗಿದ್ದಾಳೆ' ಎಂದುಕೊಂಡು ಅರುಣಳೊಡನೆ ಆಕೆ ಮಾತನಾಡುತ್ತ ಕುಳಿತಳು.

"ಮಾಲತಿ, ಕರುಣಾ ಈಗೇಕೊ ಒಂದೆರಡು ದಿನ ಒಂದು ತರಹ ಆಗಿದ್ದಾಳೆ. ಏನಾಗಿರಬಹುದು ?" ತಡೆಯಲಾರದೆ ಕೇಳಿದಳು ಅರುಣಾ.

ಗುಟ್ಟು ಎಲ್ಲಿ ಹೊರಬಿದ್ದಿದೆಯೋ ಎಂಬ ಭಯ ಒಳಗೆ. ಅದನ್ನು ತೋರ್ಪಡಿಸದೆ "ನನಗೇನು ಹಾಗೆ ತೋರಲಿಲ್ಲವಲ್ಲ !" ಎಂದಳು ಮಾಲತಿ.

"ಅವಳ ಸ್ವಭಾವವೇ ಒಂದು ರೀತಿ ಅನ್ನು. ಒಂದೊಂದು ಬಾರಿ ಹೀಗೇ ಮಾಡುತ್ತಾಳೆ. ಮಾತಾಡುವದಿಲ್ಲ. ಊಟದಲ್ಲಿ, ಕೆಲಸದಲ್ಲಿ, ಓದಿನಲ್ಲಿ ಯಾವುದರಲ್ಲಿಯೂ ಆಸಕ್ತಿಯಿಲ್ಲದವಳಾಗಿದ್ದಾಳೆ. ಗಹನವಾದ ಚಿಂತೆಯಲ್ಲಿ ಮುಳುಗಿದವರಂತೆ ಕುಳಿತುಬಿಡುತ್ತಾಳೆ ಒಬ್ಬಳೆ. ಸರಳವಾಗಿ ಉತ್ತರ ಕೊಟ್ಟರೆ ಕೊಟ್ಟಳು. ಇಲ್ಲವಾದರೆ ಒಮ್ಮೆಲೆ ಸಿಟ್ಟಿಗೆದ್ದುಬಿಡುತ್ತಾಳೆ. ಆದರೂ ನನಗೇಕೋ ಈಗ ಅವಳನ್ನು ನೋಡಿದರೆ ಸಂಕಟವಾದಂತಾಗುತ್ತದೆ ನೋಡು....ಆಗಿನ್ನೂ ಚಿಕ್ಕವಳಿದ್ದಳು. ಆಗಲೂ ಹೀಗೆಯೇ .... ಒಮ್ಮೆಯಂತೂ ಮನೆ ಬಿಟ್ಟು ಎಲ್ಲಿಯೋ ಹೋಗಿಬಿಟ್ಟಿದ್ದಳು. ಅವಳಿಗಾಗಿ ಯಾರ ಕರುಳು ಕೊರೆಯಬೇಕು ಹೇಳು ಆ ಕಂಸನ ಮನೆಯಲ್ಲಿ? ಬಿಸಿಲಲ್ಲಿ ಹುಡುಕಿ ಹುಡುಕಿ ಹತಾಶಳಾದೆ. ಇವಳು ಹೋಗಿ ಊರ ಮುಂದಿನ ಗುಡಿಯಲ್ಲಿ ಕುಳಿತುಬಿಟ್ಟಿದ್ದಳು...." ಎಂದು ಕರುಣಳ ಬಾಲ್ಯದ ದಿನಗಳನ್ನು ನೆನೆದುಕೊಂಡಳು. ಆಗ ಹಿಂದಿನ ಚಿತ್ರಗಳೊಂದೊಂದಾಗಿ ಬಂದು ಅವಳೆದುರಿಗೆ ನಿಂತವು. ಅರುಣಳಿಗೆ ನಗೆ ಬಂದಿತು. "ಇಲ್ಲಿ ಕೇಳು ಮಾಲತಿ, ನಮ್ಮ ಕರುಣಳಿಗೆ – ನೀನು ಬೇಕಾದರೆ ಜಂಭವೆಂದು ಕರೆಯಬಹುದು– ಅಭಿಮಾನ ಬಹಳ. ತನ್ನ ಮನಸ್ಸಿಗೆ ಬಂದಂತೆ ನಡೆಯಲೇಬೇಕೆಂಬ ಹಟವೂ ಅಷ್ಟೇ ಪ್ರಬಲ ಅವಳಲ್ಲಿ. ಒಂದು ದಿನ ಹೀಗಾಯ್ತು ನೋಡು: ಸಂಕ್ರಮಣ ಬಂದಿತ್ತು. ನಮ್ಮ ಮಾವ ಹುಡುಗರಿಗೆಲ್ಲ ಹೊಸ ಬಟ್ಟೆ ಹೊಲಸಿ ತಂದ. ಆಗಿನ್ನೂ ಕರುಣಳಿಗೆ ಹತ್ತು–ಹನ್ನೊಂದು ವರುಷ. ಅವಳ ಸಮವಯಸ್ಸಿನ

ಮಗಳೊಬ್ಬಳಿದ್ದಾಳೆ ನಮ್ಮ ಮಾವನಿಗೆ. ತನ್ನ ಇಬ್ಬರು ಹುಡಿಗೆಯರಿಗೆ, ನನಗೆ, ಕರುಣಳಿಗೆ,– ಹೀಗೆ ನಾಲ್ಕು ಒಳ್ಳೆ ಸೀರೆಗಳನ್ನು ತಂದಿದ್ದ. ನಮ್ಮ ಅತ್ತೆಯ ಕಾಕದೃಷ್ಟಿಯಾಗಲೆ ಬಿದ್ದಿತ್ತು. ಅವುಗಳಲ್ಲಿ ಎರಡನ್ನು ಬಚ್ಚಿಟ್ಟು, ಗಂಟೆ ನಲ್ಲಿಯ ಯಾರೋ ಬಹಳ ದಿನಗಳ ಹಿಂದೆ ಉಡುಗೊರೆ ಕೊಟ್ಟ ಎರಡು ಕಿರಿಗೆ ಗಳನ್ನು ನಮಗೆ ಕೊಟ್ಟಳು. ನಾನೇನೋ ತೆಗೆದುಕೊಂಡೆ. ನಮ್ಮ ದುರ್ದೈವ ಎಂದುಕೊಂಡೆ. ನಮ್ಮ ತಾಯಿಯಿರುತ್ತಿದ್ದರೆ ! ಎಂದುಕೊಂಡು ಅತ್ತೆ. ಅನಾಥ ಅಸಹಾಯರಾದ ನಮಗೆ ಅವರು ಎರಡು ಹೊತ್ತು ಅನ್ನ ಹಾಕುವಷ್ಟಾದರೂ ಒಳ್ಳೆಯ ಬುದ್ಧಿ ಅವರಲ್ಲಿದೆಯೆಂದುಕೊಂಡು ಸುಮ್ಮನಿದ್ದೆ. ಕರುಣಾ ಕೇಳ ಬೇಕಲ್ಲ ? ಮಾವನ ಮಗಳು ಹೊಸ ಸೀರೆ ಉಟ್ಟು ಇವಳೆದುರು ಮೆರೆದಾಡು ವದನ್ನು ನೋಡಿ ಜೀವಳಿಗೆ ಸಂಕಟ ತಡೆಯದಾಯ್ತು. ಅತ್ತೆಯವರು ಅಕ್ಕರತೆ ಯಿಂದ ಬಂದು 'ಅಯ್ಯ ! ಕರುಣಳಿಗೆ ಸೀರೆ ತರುವದನ್ನೆ ಮರೆತಿರುವರೇನೋ! ಬಾ ಕರುಣಾ ನಾನೊಂದು ಒಳ್ಳೆಯ ಸೀರೆ ಕೊಡುವೆ'ನೆಂದು ಹಳೆಯ ಕಿರಗಿ ಯೊಂದನ್ನು ಕೊಡಬಂದಳು. 'ನನಗೂ ಅಂತಹ ಹೊಸ ಸೀರೆ ಬೇಕು' ಎಂದು ಇವಳು ಹಟ ಹಿಡಿದಳು. 'ಮಾವ ತಂದಿದ್ದಾರೆ. ನಾನು ನೋಡಿದ್ದೇನೆ. ನೀನು ಕಳ್ಳಿ....' ಎಂದು ನೇರವಾಗಿ ಅತ್ತೆಯನ್ನು ದೂಷಿಸಿಬಿಟ್ಟಳು. ಅತ್ತೆಯ ಕೋಪ ನೆತ್ತಿಗೇರಿತು. 'ದಿಕ್ಕಿಲ್ಲದ ಅನಾಥ ಹುಡಿಗೆಯೆಂದು ನಾನು ಅಂತಃಕರಣ ದಿಂದ....' ಎಂದು ಅವರು ಅನ್ನುತ್ತಿರುವಾಗಲೆ 'ನಾವೇನು ದಿಕ್ಕಿಲ್ಲದವರಲ್ಲ. ನಿನ್ನ ಅಂತಃಕರಣವನ್ನು ಸಾಕಷ್ಟು ಕಂಡಿದ್ದೇನೆ.' ಎಂದು ಹಿರಿಯರಂತೆ ಆಡಿ ಬಿಟ್ಟಳು ನೋಡು ! 'ಅಷ್ಟು ಸೊಕ್ಕಿನವಳಿದ್ದರೆ ನನ್ನ ಮನೆ ಬಿಟ್ಟು ಹೋಗು!– ಎಂದು ಗದ್ದರಿಸಿ ಕರುಣಳನ್ನು ಎರಡೇಟು ಹೊಡೆದಳು...." ಎನ್ನುವಾಗ ಅರುಣಳ ಕಣ್ಣುಗಳು ನೀರುದುಂಬಿದ್ದವು. ಮಾತಿಗೆ ಸ್ವಲ್ಪ ತಡೆಯಾಯಿತು. ಆದರೂ ನುಂಗಿಕೊಂಡು, "ಮಾವ ನಡುವೆ ಬಂದರು. ನನ್ನಂತೆ ಅವರೂ ಅಸಹಾಯ ರಾಗಿ ನಿಂತುಬಿಟ್ಟರು ಆ ತ್ರಾಟಿಕೆಯೆದುರು. ಸಮಾಧಾನಗೊಳಿಸಿ ಒಳಗಿನ ಸೀರೆಯನ್ನೇ ತೆಗೆಯಿಸಿ ಕೊಡಹೋದರು ಮಾವ. ಕೋಪ ದುಃಖಗಳಿಂದ ಕರುಣಾಳ ಮುಖ ಕೆಂಪಡರಿತ್ತು. ಕಂಪಿಸುವ ಧ್ವನಿಯಲ್ಲಿ 'ನಾವೇನು ಬಿಕ್ಕೆ ಬೇಡಲು ಬಂದಿಲ್ಲ. ಒಂದು ದಿನ ಬಂದೀತು, ಇಂತಹ ಸೀರೆಯನ್ನು ನಮ್ಮ ಮನೆಯ ಮುಸುರೆಯವಳಿಗೆ ನಾನು ಕೊಡುವದನ್ನು ನಿಮಗೆ ತೋರಿಸುತ್ತೇನೆ.'

ಎಂದವಳೇ ಸೀರೆಯನ್ನು ಅತ್ತೆಯ ಮುಖದ ಮೇಲೆಸೆದು ಬಿರುಗಾಳಿಯಂತೆ ಹೊರಗೆ ಹೋಗಿಬಿಟ್ಟಳು. ಆ ಮುಂದೆ ಎರಡು ವರುಷಗಳೆಂದರೆ ನರಕವಾಸ ದಂತಾಯ್ತು ನೋಡು ಮಾಲತಿ! ನಮ್ಮ ಕಷ್ಟದ ದಿನ ಬೇಗ ಕೊನೆಗೊಂಡವು. ನನ್ನ ಮದುವೆಯಾಯ್ತು. ಸುದೈವದಿಂದ ಒಳ್ಳೆ ಮನೆ ಸೇರಿದೆ. ಅಷ್ಟು ಅಭಿ ಮಾನ, ನಮ್ಮ ಕರುಣಳಿಗೆ. ಸ್ವಭಾವವೂ ಅಷ್ಟೇ ಸೂಕ್ಷ್ಮ. ಒಂದು ಮಾತು ಹೆಚ್ಚಾಗಬಾರದು, ಕಡಿಮೆಯಾಗಬಾರದು." ಎಂದು ಹೇಳಿದಳು ಅರುಣಾ.

"ಅರುಣಕ್ಕಾ, ಈಗ ಕರುಣಾ ದೊಡ್ಡವಳಾಗಿದ್ದಾಳೆ. ತಿಳುವಳಿಕೆ ಬಂದಿದೆ."

"ಆದರೂ ಬಾಲ್ಯದ ಹಟಮಾರಿತನ ಹಾಗೆಯೇ ಉಳಿದಿದೆ ನೋಡು. ಭ್ರಾಂತಳಂತೆ ಒಬ್ಬಳೆ ಕುಳಿತುಬಿಡುತ್ತಾಳೆ ಈಗಲೂ. ಆದರೂ ಒಂದು ಸಮಾ ಧಾನ, ಚಿಕ್ಕವಳಿದ್ದಾಗ ಮನೆ ಬಿಟ್ಟು ಹೋಗಿ ಗುಡಿಯಲ್ಲಿ ಕುಳಿತಂತೆ ಈಗ ಹಾಗೇನು ಮಾಡುವದಿಲ್ಲ. ತನ್ನ ಕೋಣೆಯಲ್ಲಿಯೇ ಮಲಗುತ್ತಾಳೆ ಅಷ್ಟೆ."

"ಇನ್ನೂ ಅನುಭವ ತಿಳುವಳಿಕೆ ಹೆಚ್ಚಿದಂತೆ ಕಡಿಮೆಯಾಗುತ್ತ ಹೋಗು ತ್ತದೆ ಅಲ್ಲೆ."

ಮಾಲತಿಯೊಂದಿಗೆ ಅರುಣಾ ಹೀಗೆ ಮಾತನಾಡುತ್ತಿದ್ದುದೆಲ್ಲವನ್ನೂ ಒಳಗೆ ಮಲಗಿದ್ದ ಕರುಣಾ ಕೇಳುತ್ತಿದ್ದಳು.

ಒಮ್ಮೆಲೆ ಎರಡೂ ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಕಣ್ಣು ಗಳನ್ನು ಬಿಗಿಯಾಗಿ ಮುಚ್ಚಿದಳು. ಅವರ ಮಾತಿನಲ್ಲಿಯ ಒಂದು ಶಬ್ದ, ಒಂದು ಅಕ್ಷರವೂ ತನ್ನ ಕಿವಿಗೆ ಬೀಳಬಾರದೆಂದಳು. ಅವಳು ಹೀಗೆಂದೂ ಮಾಡಿರಲಿಲ್ಲ 'ನಾನೇಕೆ ಹೀಗೆ ಮಾಡಿದೆ? ಮಾಲತಿ ಬಂದಾಗ ನಿದ್ರೆಯ ಸೋಗು ಏಕೆ ಹಾಕಿದೆ? ಅಕ್ಕನ ಜೊತೆ ಅವಳು ಮಾತನಾಡುವಾಗ ಕಿವಿ, ಕಣ್ಣು ಏಕೆ ಮುಚ್ಚಿಕೊಂಡೆ?' ಎಂದು ತನ್ನನ್ನು ತಾನೇ ಕೇಳಿಕೊಂಡಳು.

ಒಂದೆರಡು ನಿಮಿಷ ಹಾಗೆಯೇ ಜಾರಿದವು.

'ಹೌದು; ನಾನು ಅಭಿಮಾನಿ. ನಾನು ಹಟಮಾರಿಯೂ ನಿಜ. ನನ್ನ ಮನಬಂದಂತೆ ನಡೆಯಲೇಬೇಕು, ಇದೂ ನಿಜ. ಒಂದೊಂದು ಸಲ ನನಗೆ ಮನೆ, ಜನ, ಅಕ್ಕ, ಸ್ನೇಹಿತೆಯರು, ಯಾರೂ ಬೇಡ ಎನಿಸುತ್ತದೆ. ನಾನೊಬ್ಬಳೇ ಇರ ಬೇಕು. ನನಗಾಗಿ ಯಾರೂ ಮರುಗಬೇಕಾದ್ದಿಲ್ಲ. ನಾನು ನನಗಾಗಿ' ಎಂದು

ಕೊಂಡರೂ ಮದ್ಯದ ಅಮಲಿನಲ್ಲಿದ್ದವನು ಸ್ಥಿಮಿತ ತಪ್ಪಿ ಹೊಯ್ದಾಡುವಂತೆ ಕರುಣಳ ಮನಸ್ಸು ಹೊಯ್ದಾಡಹತ್ತಿತು. ಹೀಗೆ ಸಂಯಮ ಕಳೆದುಕೊಂಡ ಮನಸ್ಸು ತನಗೇ ತಿಳಿಯದಂತೆ ಅಸಂಬದ್ಧವಾಗಿ ಬಡಬಡಿಸಹತ್ತಿತು. ಸ್ವಾತ್ಮ ಪ್ರಜ್ಞೆಯ ನಿಯಂತ್ರಣ ಸಡಿಲಾಗಿತ್ತು. ಆ ಪ್ರಜ್ಞೆಯ ಶಕ್ತಿಗೆ ಹೆದರಿ ಕತ್ತಲಲ್ಲಿ ಅವಿತುಕೊಂಡಿದ್ದ ವಿಕೃತಭಾವಗಳು ಇಮ್ಮಡಿ ಜೋರಿನಿಂದ ಮೇಲೆ ನೆಗೆದೆದ್ದವು. ವಿಚಾರಿಸಲು ಆಸ್ಪದ ಕೊಡದಂತೆ ಕರುಣಳ ಮನದ ಮೇಲೆ ದಾಳಿ ಮಾಡಿದವು, ಇರಿದವು, ಹಿಂಸಿಸಿದವು. 'ಹೀಗೇಕೆ ಆಗುತ್ತಿದೆ ನನಗೆ?' ಎಂಬ ಭಯಾನಕ ವಿಚಾರ ಬಂದಾಗ ಮತ್ತೆ ಒಂದು ಗಂಟೆ ಕಳೆದಿತ್ತು. ಒಮ್ಮೆಲೆ ದುಃಖ ಉಕ್ಕಿತು. ಮೂಕವಾಗಿ ಅತ್ತುಬಿಟ್ಟಳು.

ಆ ದಿನ ರಾತ್ರಿ ಅವಳಿಗೆ ವಿಪರೀತ ತಲೆಶೂಲೆ. ನೆಪಕ್ಕೆ ಊಟ ಮಾಡಿ ಮಲಗಿಬಿಟ್ಟಳು. ಬಹಳ ಹೊತ್ತು ನರಳಿದಳು, ಹೊಯ್ದಾಡಿದಳು; ಸೋತು ಸೋತು ನಿದ್ರೆಹೋದಳು. ಮರುದಿನ ಬೆಳಿಗ್ಗೆ ಎದ್ದಾಗ ಮೈ ಹಗುರಾದಂತಾಯ್ತು.

'ನಿನ್ನೆ ಏನಾಯ್ತು, ಹಾಗೇಕಾಯ್ತು?' ಎಂದು ತನ್ನನ್ನೆ ಕೇಳಿಕೊಂಡಳು. ಹಿಂದಿನ ದಿನಕ್ಕಿಂತ ತುಸು ಸಮಾಧಾನವಾಯಿತು ಅವಳಿಗೆ. ಸಾಮಾನ್ಯವಾಗಿ ದಿನದಂತೆ ಅವಳು ಇರಲಿಲ್ಲವಾದರೂ ಗಾಬರಿಯಾಗುವಂತಾಗಲಿಲ್ಲ.

ಆ ದಿನ ಸಾಯಂಕಾಲ.

ಕರುಣಾ ಓದುತ್ತ ಕುಳಿತಿದ್ದಳು. ಅಕ್ಕ ಒಳಗೆ ಬಂದು "ಕರುಣಾ!" ಎಂದು ಅಂತಃಕರುಣದಿಂದ ಕರೆದಳು. ಆ ಮಮತೆಯ ಕರೆಗೆ ಕರುಣಳ ಹೃದಯದ ಜಾಡ್ಯವೆಲ್ಲ ಕಳೆದಂತಾಯ್ತು. ಬಾಯ್ಬಿಡುತ್ತಿದ್ದ ನೆಲಕ್ಕೆ ನೀರು ಸುರುವಿದಂತಾಯ್ತು. ಕರುಣಳ ಬಳಿಗೆ ಬಂದು ನಿಂತು "ಎಷ್ಟು ಸೊರಗಿಬಿಟ್ಟೆರುವಿ, ಈ ಎರಡು ದಿನಗಳಲ್ಲಿ!" ಎಂದು ಅರುಣಾ ಉದ್ಗಾರ ತೆಗೆದಳು.

ಕರುಣಾ ತನ್ನನ್ನೊಮ್ಮೆ ನೋಡಿಕೊಂಡಳು.

ಅರುಣಾ ತಂಗಿಯ ಮೈ, ಕೈ ಮುಟ್ಟಿ ನೋಡಿದಳು. ಜ್ವರವೇನು ಬಂದಿರಲಿಲ್ಲ.

"ನನಗೇನಾಗಿಲ್ಲ ಅಕ್ಕಾ. ಅದೇಕೋ ಎರಡು ದಿನ ಸಮಾಧಾನವಿರಲಿಲ್ಲ ಅಷ್ಟೆ." ಎಂದು ನಗುತ್ತಲೆ ಕರುಣಾ ಹೇಳಿದಳು.

ಬೇಡವೆಂದರೂ ತಡೆತಡೆದು ಬರುತ್ತಿದ್ದ ಸಂಕಟವನ್ನು, ಭಯವನ್ನು

ಒಳಗೇ ನುಂಗಿಕೊಂಡಳು ಅರುಣಾ. ಈಗ ತಾನೂ ಸಂಯಮ ತಪ್ಪಿದರೆ ವಿಪರೀತವಾದೀತೆಂದು ಹಚ್ಚಿಗೆ ಆ ವಿಷಯವನ್ನು ಕೆದಕಲಿಲ್ಲ. ಮನೆ ಬಿಟ್ಟು ಹೊರಗೆ ನಾಲ್ಕು ಜನರಲ್ಲಿ ಬೆರೆತರೆ ಸರಿಯಾದೀತೆಂದು ಆಲೋಚಿಸಿ "ಕರುಣಾ, ಮಾಲತಿಯ ಮನೆಗೆ ಹೋಗಿ ಬರೋಣ ನಡೆ. ಅವರ ತಾಯಿ ಬರಹೇಳಿದ್ದಾರೆ." ಎಂದಳು.

"ನಾನೊಲ್ಲೆ. ಪರೀಕ್ಷೆಗೆ ಒಂದು ತಿಂಗಳಿದೆ ಅಕ್ಕಾ. ನಾನು ಈಗ ನಾಲ್ಕಾರು ದಿನ ಸರಿಯಾಗಿ ಕಾಲೇಜಿಗೂ ಹೋಗಿಲ್ಲ. ನೀನು ಹೋಗಿ ಬಾ. ನಾನು ಇನ್ನೂ ಓದಬೇಕು."

'ಅಭ್ಯಾಸದಲ್ಲಿಯಾದರೂ ತೊಡಗಲಿ; ಅದೂ ಒಳ್ಳೆಯದೆ' ಅಂದುಕೊಂಡು "ನಾನು ಬೇಗನೆ ಬಂದುಬಿಡುತ್ತೇನೆ. ಇವರು ಅಕಸ್ಮಾತ್ತಾಗಿ ಬಂದರೆ ನನ್ನನ್ನು ಕರೆ" ಎಂದು ಹೇಳಿ ಅರುಣಾ ಹೊರಟುಹೋದಳು.

ಅರುಣಾ ಹೋಗಿ ಕೆಲ ನಿಮಿಷಗಳಾಗಿರಬೇಕು.

'ನಾನೂ ಹೋಗಬೇಕಾಗಿತ್ತೇನೋ! ಅಕ್ಕನಿಗೆ ನಿರಾಸೆ, ಅಸಮಾಧಾನ ಮಾಡಂತಿದೆ.' ಎಂದು ತನ್ನ ಕೃತಿಗಾಗಿ ತನ್ನನ್ನೆ ಶಪಿಸಿಕೊಂಡಳು, ಹಳಿದುಕೊಂಡಳು; "ಯಾವ ಜನ್ಮದಲ್ಲಿಯ ಪಾಪವೋ? ತಾಯಿಗಿಂತ ತಾಯಿಯಾಗಿ ನನ್ನನ್ನು ಸಲುಹಿದ ಅಕ್ಕನನ್ನು ನಾನು ನೋಯಿಸುತ್ತಿದ್ದೇನೆ." ಎಂದು ತನ್ನ ಮನವನ್ನೆ ಹಿಂಸಿಸಿಕೊಂಡಳು.

ಹೀಗೇ ಯಾವ ನಿರ್ದಿಷ್ಟ ವಿಚಾರವಿಲ್ಲದೆ, ಏನೇನೋ ಸುಮ್ಮನೆ ಕುಳಿತಿದ್ದಳು.

"ಅಕ್ಕಾ!" ಎಂದು ಸುರೇಶ ಒಳಗೆ ಬಂದ. ಬಂದವನೆ ಅಧಿಕಾರಯುಕ್ತತೀವಿಯಿಂದ ಕಪಾಟಿನಲ್ಲಿರಿಸಿದ ತಬಲ ತೆಗೆದ. ತಂಬೂರಿಯ ಹೊದಿಕೆಯನ್ನು ತೆರೆದು, ಅದನ್ನು ಕರುಣಳ ಕೈಗಿತ್ತು "ಬಹಳ ದಿನಗಳಾದವು ನಿನ್ನ ಹಾಡು ಕೇಳಿ. ಇಂದಂತೂ ನನಗೆ ಸಾಕಾಗಿ ಹೋಗಿದೆ; ನಾಳೆ 'Maths Test' ಶಾಲೆಯಲ್ಲಿ. ಈಗಲೆ ತಲೆ ಚಿಟ್ಟೆನ್ನಹತ್ತಿದೆ. ಬಹಳೇ ಬೇಜಾರಾಗಿದೆ ನೋಡು." ಎಂದು ಒಂದೇ ಉಸಿರಿನಲ್ಲಿ ಹೇಳಿದ.

ಕರುಣಾ ಮಾತನಾಡಲಿಲ್ಲ.

ಅವಳೆಡೆಗೆ ನೋಡುತ್ತ "ಯಾಕೆ ಅಕ್ಕಾ ಮೈಯಲ್ಲಿ ಸರಿಯಾಗಿಲ್ಲೆ?" ಎಂದು ಸುರೇಶ ಕೇಳಿದ.

ಅದಕ್ಕೂ ಅವಳು ಉತ್ತರಿಸಲಿಲ್ಲ.

ಸುರೇಶ ಹತಾಶನಾಗುವ ಹುಡುಗನೇ ಅಲ್ಲ. ಮತ್ತೆ ಮತ್ತೆ ಅವಳನ್ನು ಕಾಡಿಸಹತ್ತಿದ. ಕೊನೆಗೆ "ಒಂದೇ ಒಂದು ಭಾವಗೀತ ಹೇಳಿಬಿಡು" ಎಂದು ದುಂಬಾಲು ಬಿದ್ದ.

ಕರುಣಳೆದುರಿಗೆ ತಂಬೂರಿ ಮಲಗಿತ್ತು. ಅದನ್ನು ಮೀಟಿದರೆ ತಾನಾಗಿಯೇ ಹಾಡುತ್ತಾಳೆಂದು ತಿಳಿದು, ಒಂದು ಬಾರಿ ಜೋರಾಗಿ ಅದನ್ನು ಮನಸ್ಸಿಗೆ ಬಂದಂತೆ ಮೀಟಿದ. ಅಲ್ಲಿಂದ ತಬಲ ಬಾರಿಸಲು ಪ್ರಾರಂಭಿಸಿದ. ಏನು ಮಾಡಿದರೂ ಕರುಣಾ ಕದಲಿಲ್ಲ. ಆತನಿಗೇನು ತಿಳಿಯಬೇಕು ಅವಳ ಸ್ಥಿತಿ! ಇನ್ನೂ ವಿನೋದದ ಲಹರಿಯಲ್ಲಿಯೇ ಇದ್ದ. ಅಪಸ್ವರದಲ್ಲಿ ಕಿರುಚಲು ಆರಂಭಿಸಿದ. ಆಗಲಾದರೂ ಅದನ್ನು ಕೇಳಲಾರದೆ ಅವಳು ಸಿಟ್ಟಿಗೆದ್ದು ಹಾಡಬಹುದೆಂದು ಆತನ ಎಣಿಕೆ. ಅದೂ ಹುಸಿಹೋಯಿತು. ಕೊನೆಗೆ ಅವಳ ಹತ್ತಿರ ಬಂದು ಕುಳಿತು ತನ್ನ ಸಹಜ ತುಂಟ ರೀತಿಯಲ್ಲಿ "ಯಾಕೆ, ಮಾಮಾ ಬೈದಿದ್ದಾರೇನು? ಅರುಣಕ್ಕ ಹೊಡೆದರೇನು ?" ಎಂದು ಕೇಳಹತ್ತಿದ. ಎಲ್ಲಿಂದ ಕೊಚ್ಚಿಬಂದಿತೋ ಕೋಪ ಅವಳಿಗೆ. "ಹೊರಗೆ ನಡೆ ಇಲ್ಲಿಂದ!" ಎಂದು ಕಣ್ಣಗಲಿಸಿ ಗದರಿಸಿದಳು.

ಆತನ ಹೃದಯ ಅದನ್ನು ಸಹಿಸಲಾರದಾಯ್ತು. ಅವಮಾನಕ್ಕಿಂತ ತನ್ನನ್ನು ಉಪೇಕ್ಷಿಸಿದಳಲ್ಲ ಎಂಬ ದುಃಖ ಆತನಿಗೆ. ಮಾತನಾಡದೆ ಮೆಲ್ಲನೆ ಎದ್ದು ಹೊರಟ. ಬಾಗಿಲ ಬಳಿ ನಿಂತು ಕಣ್ಣೊರಸಿಕೊಂಡು ಹೋಗಿಬಿಟ್ಟ.

ತಂತಿಯ ಮೇಲಿಟ್ಟ ಅವಳ ಬೆರಳು ಜೋರಾಗಿ ಮೀಟಿತು.

ಆ ಭಾರವಾದ ಮೌನವನ್ನು ಮಿಂಚಿನಂತೆ ಒಮ್ಮೆಲೆ ಭೇದಿಸಿದ ನಾದ ತರಂಗಗಳಂತೆ ಅವಳ ನಿಗ್ರಹಿಸಿದ ಭಾವನೆಗಳೆಲ್ಲ ಹುಚ್ಚು ಹೊಳೆಯಾಗಿ ಹರಿದು ಬಂದವು. ನಿರಾಸೆ, ಅಸಮಾಧಾನ, ತನ್ನ ನಡತೆಗಾಗಿ ವ್ಯಥೆ, ಮಾಲತಿ ಅಕ್ಕ ಸುರೇಶರನ್ನು ಅಕಾರಣವಾಗಿ ನೋಯಿಸಿದುದಕ್ಕೆ ಪರಿತಾಪ, ಸಂಕಟಗಳೆಲ್ಲ ಒಂದೇ ಬಾರಿಗೆ ಚಿಮ್ಮಿ ಬಂದವು. ಅವುಗಳ ಹಿಂಸೆಯನ್ನು ತಾಳಲಾರದೆ ಮತ್ತೆ ಜೋರಿನಿಂದ ತಂತಿ ಮೀಟಹತ್ತಿದಳು. ನಾದ ತೀವ್ರವಾಗುತ್ತ ನಡೆಯಿತು. ಷಡ್ಜ, ಪಂಚಮ, ಮಂದ್ರ ಷಡ್ಜಗಳು ದ್ರುತಗತಿಯಿಂದ ನುಡಿಯಹತ್ತಿದವು. ಪ್ರಗಲ್ಭ ಬಿರುಗಾಳಿಗೆ ಸಿಲುಕಿದ ಸಾಗರದಲ್ಲಿ ಒಂದರ ಮೇಲೊಂದು ಭೀಕರ ಆಕಾರದಲ್ಲಿ ಬಂದು ಅಪ್ಪಳಿಸುವ ತೆರೆಗಳಂತೆ ಅವಳ ಮನದ ತೀರಕ್ಕೆ ಬಂದ

ಬಂದು ಅಪ್ಪಳಿಸಿದವು.

ಬಿರುಗಾಳಿ ನಿಂತಿತು. ಆ ಸ್ವರದ ಅಲೆಯ ಹೊಡೆತಕ್ಕೆ ಸಿಕ್ಕ ಮನಸ್ಸು ತುಸು ಸಮಾಧಾನ ಹೊಂದಿತು.

'ಕಾಹೆ ಸಜನೀ, ಆಯೆ ನ ಬಾಲಮ' ಬಡೇಗುಲಾಮ ಅಲಿಖಾನರ ಠುಮರಿ ಗೀತವನ್ನು ಕಲ್ಲು ಕಂಬನಿ ಸುರಿಸುವಂತೆ ಹಾಡಿದಳು. ಬಾಗಿಲ ಮರೆಯಲ್ಲಿ ನಿಂತ ಸುರೇಶ ಬಿಕ್ಕಿ ಬಿಕ್ಕಿ ಅತ್ತುಬಿಟ್ಟ. ಕರುಣಾ ಹಾಡುವದನ್ನು ನಿಲ್ಲಿಸಿದಳು.

ಹೊರಗೆ ಬಿಕ್ಕುವ ಧ್ವನಿ! ತಟ್ಟನೆದ್ದು ಹೊರಗೆ ಬಂದಳು. ಮರೆಯಲ್ಲಿ ನಿಂತಿದ್ದ ಸುರೇಶನನ್ನು ನೋಡಿದಳು. ಆತನ ಕೈವಿಡಿದು ಒಳಗೆ ಕರೆದುಕೊಂಡು ಬಂದಳು. ಸುರೇಶನಿಗೆ ತಡೆಯಲಾಗಲಿಲ್ಲ. 'ಅಕ್ಕಾ....!' ಎಂದು ದೊಡ್ಡದನಿ ತೆಗೆದು ಅತ್ತುಬಿಟ್ಟ. ಸುರೇಶನನ್ನು ನೈದಡವಿದಳು; ಬಿಗಿಯಾಗಿ ಅಪ್ಪಿಕೊಂಡಳು.

ಕರುಣಳ ಉಸಿರು ಕಟ್ಟಿ ನಿಂತಿತ್ತು. ಕಟ್ಟೊಡೆದ ಕೆರೆಯಂತೆ ಕಂಬನಿ ಹರಿಯಿತು. "ನಾನು ನಿಷ್ಕರುಣಿ ಸುರೇಶ....ನಿ ಷ್ಕ ರು ಣಿ...."ಎಂದು ಹೇಳುವಾಗ ಅವಳೆದೆಯೆಲ್ಲ ಚೂರುಚೂರಾಗಿತ್ತು.

ಮೌನದ ನಿಮಿಷಗಳು ತುಸು ಸಮಾಧಾನ ತಂದವು. ದುಃಖದ ಆವೇಗ ಕಡಿಮೆಯಾಯ್ತು. "ನಾಳೆ ಸಾಯಂಕಾಲ ಬರುತ್ತೀಯಾ ಸುರೇಶ? ಒಂದೆರಡು ತಾಸು ಸಮಾಧಾನದಲ್ಲಿ ಕಳೆಯೋಣ."ಎಂದಳು.

ಕರುಣಳ ಪರಿತಾಪದ ನುಡಿಗೆ ಆತನ ಹೃದಯ ಕರಗಿ ಹೋಗಿತ್ತು. 'ಮೊದಲಿನಂತೆ ಕರುಣಾ ಮಮತಾಯಿಯಾಗಿರುವಳಲ್ಲ!'ಎಂದು ಹಿಗ್ಗಿದ. "ಓಹೊ, ಬರುತ್ತೇನೆ."ಎಂದ.

ಹೊರಗೆ ಕಾಲ ಸಪ್ಪಳವಾದಂತಾಯಿತು. ಸುರೇಶ ಹೊರಗೆ ಬಂದು ನೋಡಿದ. ಗಣಪತರಾಯರು ಬಂದಿದ್ದರು.

"ಮನೆಯಲ್ಲಿ ಯಾರಿಲ್ಲವೇ?" ಎನ್ನುತ್ತ ಅವರು ಒಳಗೆ ಬರುತ್ತಿರುವಷ್ಟರಲ್ಲಿಯೇ ಸುರೇಶ ಕರುಣಳ ಬಳಿ ಓಡಿ ಬಂದು "ಮಾಮಾ ಬಂದರು."ಎಂದು ಎಚ್ಚರಿಸಿದ.

ಕಂಣೀರನ್ನೊರೆಸಿಕೊಂಡು ಕರುಣಾ ಮೇಲೆದ್ದಳು.

"ನಾನು ಬರುತ್ತೇನೆ ಅಕ್ಕಾ."ಎಂದು ಹೇಳಿ ಹೋಗಿಬಿಟ್ಟ ಸುರೇಶ.

ಕರುಣಾ ಹೊರಗೆ ಬರುತ್ತಲೆ, "ಅರುಣಾ ಎಲ್ಲಿ ಹೋಗಿದ್ದಾಳೆ?"ಎಂದು ಕೋಟು ಬಿಚ್ಚುತ್ತ ಗಣಪತರಾಯರು ಕೇಳಿದರು.

"ಮಾಲತಿಯ ಮನೆಗೆ ಹೋಗಿದ್ದಾಳೆ. ಕರೆಯಲೇ?"ಎಂದು ಕೇಳಿದಳು.

"ಕರುಣಾ, ಮೊದಲು ಒಂದು ಕಪ್ಪ ಚಹ ಮಾಡು. ಗಂಟಲು ಒಣಗಿದೆ." ಎನ್ನುತ್ತ ತಮ್ಮ ಕೋಣೆಯ ಕಡೆಗೆ ನಡೆದರು.

ನಡೆದುದನ್ನೆಲ್ಲ ಮರೆಯಲೇಬೇಕಾಗಿತ್ತು ಕರುಣಳಿಗೆ. ಮುಖ ತೊಳೆದು ಕೊಂಡು ಬಂದು, ಅಡುಗೆ ಮನೆಯನ್ನು ಸೇರಿ ಚಹದ ಸಿದ್ಧತೆಯಲ್ಲಿ ತೊಡಗಿದಳು.

ಬಟ್ಟೆ ಬದಲಾಯಿಸಿ, ಧೋತರವನ್ನುಟ್ಟುಕೊಂಡು "ತನನನ"ಎಂದು ಗುಣುಗುತ್ತ ಅವರೂ ಅಡುಗೆಮನೆಗೆ ಬಂದರು.

"ಮಣೆ ಹಾಕಿದಳು ಕರುಣಾ. ಗೋಡೆಗೊರಗುತ್ತ "ಉಶ್ ಅಪ್ಪಾ!" ಎಂದು ಕುಳಿತುಕೊಂಡು ಗಣಪತರಾಯರು "ಮತ್ತೇನು ಕರುಣಾಬಾಯೀ, ಅಭ್ಯಾಸ ಹೇಗೆ ನಡೆದದೆ?"ಎಂದು ಕೇಳಿದರು.

ಸ್ವಭಾವತಃ ರಸಿಕರು, ವಿನೋದಿಗಳಾಗಿದ್ದ ಗಣಪತರಾಯರು, 'ಲಹರಿ' ಯಲ್ಲಿದ್ದಾಗ ಮಾತನಾಡುವ ರೀತಿಯೇ ಹೀಗೆ.

"ಚೆನ್ನಾಗಿ ನಡೆದಿದೆ." ಎನ್ನುತ್ತ ಕಪ್ಪಿಗೆ ಚಹ ಸೋಸಿದಳು.

"ಮತ್ತೇನಾದರೂ ವಿಶೇಷ ಕಾಲೇಜಿನಲ್ಲಿ?" ಎಂದು ಮಾತು ಮುಂದರಿಸಿದರು.

"ವಿಶೇಷವೇನಿರಬೇಕು? ಅಂತಹದೇನೂ ಇರದಿದ್ದುದೇ ಒಂದು ವಿಶೇಷ." ಎಂದು ಉತ್ತರಿಸಿದಳು ಕರುಣಾ.

ಗಣಪತರಾಯರು ನಗುತ್ತ "ನೀನು ಹೇಗೆ ಕಾಲೇಜಿಗೆ ಹೋಗುತ್ತೀಯೋ, ಎಲ್ಲಿ ಕೂಡುತ್ತೀಯೋ!.... ಅಂ! ನೇರವಾಗಿ ಹೋಗಿ ಟಾಂಗಾದ ಕುದುರೆಯಂತೆ ನೇರವಾಗಿ ಮನೆಗೆ ಬಂದುಬಿಡುತ್ತೀಯೆಂದು ತೋರುತ್ತದೆ. Lecture, ಅಭ್ಯಾಸ ಬಿಟ್ಟು ಬೇರೆ ಯಾವ ವಿಷಯ ನಿನಗೆ ಗೊತ್ತೇ ಇರುವದಿಲ್ಲವೇನು?" ಎಂದು ಕೇಳಿದರು.

ತಾನು ಕಾಲೇಜು ತಪ್ಪಿಸುವದು ಅವರಿಗೆ ತಿಳಿದಿರಬಹುದೆಂದು ಕರುಣಾ ಹೆದರಿದಳು. ಅನುಮಾನಿಸುತ್ತ "ಯಾಕೆ?" ಎಂದು ಕೇಳಿದಳು ತಿರುಗಿ.

"ನಿಮ್ಮ ಪ್ರೊಫೆಸರ ನಲಿನೀಬಾಯಿಯವರ ಮದುವೆಯಂತೆ!"

"ಆಂ !" ಎಂದು ಕರುಣಾ ಉದ್ಗಾರ ತೆಗೆಯುವದರಲ್ಲಿಯೇ ಹೊರಗಿನಿಂದ ಬರುತ್ತಿದ್ದ ಅರುಣಾ, ತವಕದಿಂದ "ಹೌದು, ನಿನ್ನೆ ಮಂಡಳದಲ್ಲಿ ಸುದ್ದಿ ಹೊರಬಿತ್ತು. ಅವರ ಪತಿ ಕಲಕತ್ತೆಯಲ್ಲಿ ಎಂಜಿನೀಯರ್ ಇದ್ದಾರಂತಲ್ಲ? ಈ ಜೂನ ತಿಂಗಳಲ್ಲಿ ಜರ್ಮನಿಗೆ ಹೋಗುವವರಿದ್ದಾರಂತೆ !" ಎಂದು ಸಂಪೂರ್ಣ ಸಮಾಚಾರ ತಿಳಿಸಿಯೇಬಿಟ್ಟಳು.

"ಆ-ಹ್ಹಾ ! ನೋಡು ಕರುಣಾ ! ನಿನ್ನ ಅಕ್ಕ ಹೇಗಿದ್ದಾಳೆ! ಪತ್ರಿಕಾ ಕರ್ತನಾದ ನನ್ನನ್ನೂ ಮೀರಿಸಿದ್ದಾಳೆ ವಿಷಯ ಸಂಗ್ರಹಿಸುವದರಲ್ಲಿ ! 'All India Information Beauro' ನೋಡು !" ಎಂದು ತಮ್ಮ ವೈಶಿಷ್ಟ್ಯಪೂರ್ಣ ಧ್ವನಿಯಲ್ಲಿ ರಾಗವೆಳೆದರು. "ಬರೋಣವಾಗಲಿ ಬಾಯಿಸಾಹೇಬ ! ಮತ್ತೆ ಯಾರ ಲಗ್ನ ನಿಶ್ಚಯಿಸಿದ್ದೀರಿ ?" ಎಂದು ಕೇಳಿದರು.

"ಯಾಕೆ? ಈ ದಿನ 'Full form'ನಲ್ಲಿ ಇದ್ದಂತಿದೆಯಲ್ಲ ? ದಿನ ಕಳೆದಂತೆ ನೀವು ಸಣ್ಣವರಾಗುವರಲ್ಲ ! ಹುಡುಗತನ ಬಿಡಿರಿ."

"ನಿನಗೆ ಒಮ್ಮೆ ಹೇಳಿಲ್ಲವೇ, ನಮಗೊಂದು ಮಗು...."

ನಡುವೆಯೇ ಬಾಯಿಹಾಕಿ "ಶ್!" ಎಂದು ಕರುಣಳಿರುವದನ್ನು ಸೂಚಿಸುತ್ತ "ಸುಮ್ಮನಾಗಿರಿನ್ನು...." ಎಂದು ಬೆದರಿಸಿಬಿಟ್ಟಳು.

'ಆಃಽಽ' ಎಂದು ಆಕಳಿಸುತ್ತ ಹೋಗಲಿ, ಬೇರೆಯವರ ಮದುವೆಯ ವಿಷಯ ನಮಗೇಕೆ ? ಕರುಣಳ ಮದುವೆಯ ವಿಚಾರ ಮಾಡಿದೆಯೇನು? " ಎಂದು ಬೇರೆ ವಿಷಯದ ಪೀಠಿಕೆ ಹಾಕಿದರು.

ಕರುಣಳಿಗೆ ಅಲ್ಲಿ ಕೂಡಲಾಗಲಿಲ್ಲ. ನಾಚಿಕೊಂಡು ಹೊರಗೆ ನುಸುಳಬೇಕೆನ್ನುತ್ತಿರುವಷ್ಟರಲ್ಲಿ ತಡೆದು "ಕೂಡು ಕರುಣಾ; ಈ ವಿಷಯ ನಿನಗೇ ಸಂಬಂಧಿಸಿದುದು" ಎಂದರು ಗಣಪತರಾಯರು.

ಒತ್ತಾಯಕ್ಕಾಗಿ ಕರುಣಾ ಕುಳಿತುಕೊಂಡಳು.

"ನಿಮ್ಮ ಮಾವ ಕಾಗದ ಬರೆದಿದ್ದಾರೆ. ಒಳ್ಳೆಯ ವರ ಹುಡುಕಿದ್ದಾರಂತೆ. ಹೂಂ,....ನಿನ್ನ ವಿಚಾರ ತಿಳಿದು ಕಾಗದ ಬರೆಯಬೇಕೆಂದು ಬಿಟ್ಟಿದ್ದೇನೆ." ಎಂದು ಕರುಣಳತ್ತ ನೋಡಿದರು.

ಅವಳು ಮುಖ ಮೇಲೆತ್ತಲಿಲ್ಲ.

"ಒಮ್ಮೆಲೆ ಹೀಗೆ ಕೇಳಿದರೆ ಹುಡಿಗಿ ಏನು ಹೇಳಬೇಕು ? ಅವಳಿಗೂ

ವಿಚಾರಿಸಲು ಒಂದಿಷ್ಟು ಅವಕಾಶ ಕೊಡಿರಿ."ಎಂದು ತಂಗಿಯ ಬೆಂಬಲಕ್ಕೆ ಬಂದಳು ಅರುಣಾ.

"ವಿಚಾರಿಸುವದೇನು ಅದರಲ್ಲಿ? ಅವಳು ವಿಚಾರ ಮಾಡುತ್ತಿರಲಿ. ಅವರು ಬಂದು ನೋಡಿಕೊಂಡು ಹೋಗಲಿ. ಒಪ್ಪಿಗೆಯಾಗದಿದ್ದರೆ 'ನೀವು ತಂದ ವರ ನಾಪಾಸ್ ಎಂದು ಹೇಳಿಬಿಟ್ಟರಾಯ್ತು!"

"ನಿಮಗೆಲ್ಲ ವಿನೋದವೇ! ಲೌಕಿಕ ರೀತಿ-ನೀತಿ ಒಂದಿಷ್ಟೂ ತಿಳಿಯು ದಿಲ್ಲ ನಿಮಗೆ! ಇವಳು ವಿಚಾರಿಸುತ್ತಿರಲಿ; ಅವರು ಬಂದು ನೋಡಿಕೊಂಡು ಹೋಗಲಿ ಹೀಗೆಂದರೇನು....?"ಎಂದು ತುಸು ಸಿಡುಕಿನಿಂದ ಅರುಣಾ ಅಂದು ದಕ್ಕೆ ಪೂರಕವಾಗಿ ಗಣಪತರಾಯರು "...ಹೀಗೆಂದರೇನು ನಿಮ್ಮ ತಲೆ?" ಎಂದು ಜೋಡಿಸಿದರು.

ಕರುಣಾ ನಕ್ಕುಬಿಟ್ಟಳು.

"ಅರುಣಾ, ಈ ವಿಷಯ ಇರುವದೇ ಹೀಗೆ. ಯಾವನೊ ಒಬ್ಬ ಲೇಖ ಕನೋ, ತತ್ವಜ್ಞಾನಿಯೋ ಹೇಳಿದ ಮಾತು ನೆನಪಾಯ್ತು ಕೇಳು. ಹುಡಿಗೆ ತನ್ನ ಆದರ್ಶ ಪತಿಯನ್ನು ಹುಡುಕುತ್ತಲೇ ಇರುತ್ತಾಳೆ. ಅಷ್ಟರಲ್ಲಿ ಅವಳ ಮದುವೆ ಆಗಿಬಿಡುವದಂತೆ."

ಕರುಣಾ ಮೆಲ್ಲಗೆ ಅಲ್ಲಿಂದ ಜಾರಿಕೊಂಡಳು. ಹೋಗುವಾಗ ಗಣಪತ ರಾಯರು ಹೆಂಡತಿಗೆ ಹೇಳಿದ ಮಾತಿನ ಮೊದಲಿನ ಶಬ್ದಗಳು ಮಾತ್ರ ಅವಳಿಗೆ ಕೇಳಿಸಿದವು.

"ಹಾಗಾದರೆ ಶಂಕರರಾಯರಿಗೆ ಪತ್ರ ಬರೆದು, ಅವರೊಬ್ಬರನ್ನೆ ಇಲ್ಲಿಗೆ ಬರಹೇಳಿ ನಮ್ಮೊಳಗೆ ಆಲೋಚಿಸಿ ಮುಂದೆ ನೋಡೋಣ. ಅಷ್ಟರಲ್ಲಿ ನೀನು ಕರುಣಾಳನ್ನು ಒಂದು ಮಾತು ಕೇಳಿ ನೋಡು."ಎಂದು ಮಾತು ಅಲ್ಲಿಗೇ ಮುಗಿಸಿದರು.

* * *

ಈಗೆರಡು ದಿನಗಳಿಂದ ಕರುಣಾ ತೀರ ಸೊರಗಿದಂತೆ ಕಾಣಹತ್ತಿದಳು. ಯಾರ ಸಂಪರ್ಕವನ್ನೂ ಅವಳು ಬಯಸುತ್ತಿರಲಿಲ್ಲ. ಯಾರೊಡನೆಯೂ ಮಾತ ನಾಡಲಿಚ್ಛಿಸುತ್ತಿರಲಿಲ್ಲ. ಯಾರಾದರೂ ಸಹಜವಾಗಿ ಮಾತನಾಡಿಸಿದರೂ ಒಮ್ಮೆಲೆ ರೇಗುತ್ತಿದ್ದಳು. ಇಲ್ಲವೆ ಮೂಕಿಯಾಗಿ ಕುಳಿತುಬಿಡುತ್ತಿದ್ದಳು. ಹೆಚ್ಚಿನ

ವೇಳೆಯನ್ನು ಏಕಾಕಿಯಾಗಿ ತನ್ನ ಕೋಣೆಯಲ್ಲಿ ಕುಳಿತು ಕಳೆಯುತ್ತಿದ್ದಳು.

ದಿನಾಲು ಗೋಡೆಯ ಮೇಲ್ಬದಿಯ ಮೂಲೆಯನ್ನು ಎವೆಯಿಕ್ಕದೆ ನೋಡುತ್ತ ಕೂಡುತ್ತಿದ್ದಳು. ಜೇಡ ಹುಳವೊಂದು ನಿತ್ಯ ಒಂದೊಂದು ಎಳೆಯಂತೆ ನಯವಾಗಿ ಬಲೆಯನ್ನು ನೇಯುತ್ತಿತ್ತು. ಅವಳು ದಿನಾಲು ಅದನ್ನೆ ನೋಡುತ್ತಿದ್ದಳು. ಆ ದಿನ ಸಹಜವಾಗಿ ರೂಢಿಬಲದಿಂದ ಅದರೆಡೆಗೆ ನೋಡಿದಳು. ಬಲೆ ಪೂರ್ತಿಯಾಗಿತ್ತು. ತುದಿಯಲ್ಲಿ ಜೇಡಹುಳ ಜಪ್ಪಿಸಿ ಕುಳಿತಿತ್ತು. ಬಲೆಯ ನಯವಾದ ಎಳೆಯ ಸೊಬಗನ್ನು ಕಂಡು ಪಕ್ಕದ ಹುಳವೊಂದು ಅದರಲ್ಲಿ ಸಿಲುಕಿತು. ತತ್‌ಕ್ಷಣ ಸಂಜ್ಞೆಯಾಯಿತು. ಎಳೆಗಳು ಬಿಗಿಯತೊಡಗಿದವು. ಹುಳ ಚಡಪಡಿಸಹತ್ತಿತು.

ಅದೆಷ್ಟೋ ಹೊತ್ತು ಅದನ್ನೆ ನೋಡುತ್ತ ಕುಳಿತಳು.

ಅವಳಿಗೆ ತನ್ನ ಮೇಲಿನ ಹಿಡಿತವೇ ತಪ್ಪಿತ್ತು. ಮನೋರಾಜ್ಯದಲ್ಲಿ ಅರಾಜಕತೆಯಾಗಿತ್ತು. ಗಾಯಗೊಂಡು ಅಸಹಾಯನಾಗಿ ಕೆಡೆದು ಬಿದ್ದ ಅರಸು ತನ್ನ ಕಣ್ಣೆದುರಿಗೇ ಶತ್ರುಗಳು ರಾಜ್ಯವನ್ನು ಸೂರೆಗೊಳ್ಳುತ್ತ ಅರಮನೆಗೆ ಕೊಳ್ಳಿಯಿಕ್ಕಿ ವಿಕಟವಾಗಿ ಕುಣಿಯುತ್ತಿರುವದನ್ನು ನೋಡುತ್ತ ಹತಬಲನಾಗಿ ಕಂಬನಿ ಮಿಡಿಯುತ್ತ ಬಿದ್ದಿರುವಂತೆ ಕರುಣಳ ಗತಿಯಾಯಿತು.

ಅರೆಗಾಯಗೊಂಡ ಭಾವನೆಗಳೆಲ್ಲ ಬಂಡೆಬ್ಬಿಸಿದ್ದವು. ಮೊದಮೊದಲು ತೆರೆಯ ಮರೆಯಿಂದಲೇ ಮನವನ್ನು ಹಿಂಸಿಸಿ ಗಾಸಿಗೊಳಿಸಿದ್ದವು. ಮನಸ್ಸು ದುರ್ಬಲವಾದಾಗ ಅವುಗಳ ಏರಾಟಿಕೆ ಹೆಚ್ಚಾಯ್ತು. ಕರುಣಳನ್ನು ದಿಕ್ಕು ದಿಕ್ಕಿಗೆ ಎಳೆದಾಡಹತ್ತಿದವು ನಿರ್ಭಯದಿಂದ.

ಇದೆಲ್ಲ ಕರುಣಳಿಗೆ ಮಸುಕಾಗಿ ಕಾಣುತ್ತಿತ್ತು. ಆದರೆ ಅವಳು ಏನೂ ಮಾಡುವಂತಿರಲಿಲ್ಲ. ಸುಮ್ಮನೆ ಕುಳಿತು ಕೊರಗುತ್ತಿದ್ದಳು.

ಮೂರನೆಯ ದಿನ :

ಮನೆಯಲ್ಲಿ ಕುಳಿತುಕೊಳ್ಳುವದು ಅಸಾಧ್ಯವಾಯ್ತು. ಮೂಕವೇದನೆಯನ್ನು ಸಹಿಸದಂತಾದಳು. ಹಿಂದಿನ ದಿನದ ರಾತ್ರಿಯಿಂದ ಅಕ್ಕನೊಂದಿಗೆ ಮಾತನಾಡಿರಲೇ ಇಲ್ಲ. ಆ ಸಂದರ್ಭ ಬಂದಾಗೆಲ್ಲ ಜಾರಿಕೊಂಡಿದ್ದಳು. ಬೆಳಗಿನ ಚಹ, ಊಟಗಳನ್ನು ಗಣಪತರಾಯರ ಜೊತೆಯಲ್ಲಿಯೇ ಮುಗಿಸಿದಳು.

ಇನ್ನು ಹಾಗೆಯೇ ಮುಂದುವರಿಸುವದು ಸಾಧ್ಯವಾಗಲಿಲ್ಲ. ಕಾಲೇಜಿಗೆ

ಹೊರಟುಬಿಟ್ಟಳು. ನಾಲ್ಕೈದು ದಿನಗಳಿಂದ ಮನೆ ಬಿಟ್ಟು ಕದಲಿರಲಿಲ್ಲ. ಸಹ-ಪಾಠಿಗಳೊಡನೆ ಬೆರೆಯಲು, ಮಾತನಾಡಲು ಮನಸ್ಸು ಹಿಂಜರಿಯುತ್ತಿತ್ತು.

ಮೊದಲಿನ ಎರಡು ತಾಸು ಮುಗಿಯುವಷ್ಟರಲ್ಲಿ ಕರುಣಳಿಗೆ ಕುಸಿದು ಬೀಳುವಂತಾಯ್ತು. ಪ್ರಾಧ್ಯಾಪಕರು ತಮ್ಮ ಕರ್ತವ್ಯಕ್ಕನುಗುಣವಾಗಿ "ಈಗ ಮೂರು ನಾಲ್ಕು ದಿನಗಳಿಂದ ಕಾಲೇಜಿಗೆ ಬಂದಿರಲಿಲ್ಲವೇಕೆ?" ಎಂದು ಕೇಳಿ ಬಿಟ್ಟರು.

ಕರುಣಾ ಬಹು ಪ್ರಯಾಸದಿಂದ ಎದ್ದು ನಿಂತಳು. ಉತ್ತರಿಸಲಾಗಲಿಲ್ಲ. ಹೌಹಾರಿದವಳಂತೆ ಸುತ್ತಲು ನೋಡಿದಳು. ಎಲ್ಲರೂ ತನ್ನನ್ನು ಉದ್ದೇಶಪೂರ್ವಕವಾಗಿ ಕೆಣಕುತ್ತಿದ್ದಾರೆಂದು ಸಂಕಟಪಟ್ಟಳು. ಹಿಂದಿನ ಸಾಲಿನಲ್ಲಿ ಕುಳಿತಿದ್ದ ಒಬ್ಬಳು ಪಿಸಿಪಿಸಿ ನಕ್ಕುಬಿಟ್ಟಳು.

"ನಾನು ಕೇಳಿದುದರ ಕಡೆಗೆ ಗಮನವಿದೆಯೇ ?" ತುಸು ಹುಬ್ಬೇರಿಸಿ ಕೇಳಿದರು ಪ್ರಾಧ್ಯಾಪಕರು.

ಇಷ್ಟೇ ಸಾಕಾಯ್ತು ಕರುಣಳಿಗೆ.

"ಗಮನ ಬೇರೆ ಕಡೆಗೆ ಹೋಗಿರಬೇಕು ಪಾಪ!" ಎಂದು ಹಿಂದೆ ಯಾರೋ ಗುಣಗುಟ್ಟಿದಂತಾಯ್ತು.

"ಮೈಯಲ್ಲಿ ಸರಿಯಾಗಿರಲಿಲ್ಲ" ಎಂದು ಹೇಗೋ ಹೇಳಿ ಕುಳಿತುಬಿಟ್ಟಳು.

ಮುಖ ಮೇಲೆತ್ತಲಿಲ್ಲ. ಗಂಟೆಯಾಗುವದೊಂದೇ ತಡ ಮನೆಗೆ ನಡೆದು ಬಿಟ್ಟಳು.

ಇಲ್ಲಿಯವರೆಗೂ ಹೋರಾಡಿ ಕೊರಗಿದ ಮನಕ್ಕೆ ಸಹಿಸುವ ಬಲ ಇಲ್ಲದಂತಾಯಿತು. ಅವಳ ಸೂಕ್ಷ್ಮ ಹೃದಯಕ್ಕೆ ವಿಪರೀತ ಆಘಾತವಾದಂತಾಯಿತು. ಎಲ್ಲರೂ ತನ್ನನ್ನು ಹೀಯಾಳಿಸುತ್ತಾರೆ, ಅವಮಾನಗೊಳಿಸುತ್ತಾರೆ, ಎಂದು ಭಾವಿಸಿ ಒಳಗೊಳಗೇ ಜೀರ್ಣಳಾದಳು.

ಮನೆಗೆ ಬಂದವಳೇ ಮಲಗಿಬಿಟ್ಟಳು. ಮನದಲ್ಲಿ ಭೀಷಣ ಅಳಲು, ಚೀತ್ಕಾರಗಳು! ಒಂದೇ ಒಂದು ಬಾರಿ ಕ್ಷೀಣವಾಗಿ "ಅಕ್ಕಾ" ಎಂದು ಹಲುಬಿ ಉರುಳಾಡಹತ್ತಿದಳು. ಸಂಜೆಯ ಹೊತ್ತಿಗಾಗಲೆ ಮೈ ಕಾದಿತ್ತು. ತಲೆ ಸಿಡಿದು ಹೋಗುವಂತೆ ಸಂಘರ್ಷಣೆಯಿಂದ ತಪ್ತವಾಗಿತ್ತು. ಒಂದೇ ಸವನೆ ಸಂಕಟದಿಂದ ಬಿಸಿಯುಸಿರು ಬಿಡುತ್ತಿದ್ದಳು.

ವೇದನೆಯನ್ನು ತಡೆಯಲಾಗದೆ ತುಟಿ ಕಚ್ಚಿಕೊಂಡಳು. ಎದೆಯ ಕಲ ಮಲ ತಾಳಲಾರದೆ ಜೋರಾಗಿ "ಅಕ್ಕಾss" ಎಂದು ಚೀರಿಬಿಟ್ಟಳು.

ಕೈಯಲ್ಲಿ ಹಿಡಿದ ಪಾತ್ರೆಯುರುಳಿತು. ಅರುಣಾ ಧಾವಿಸಿ ಬಂದಳು. ಕರುಣಳ ದಾರುಣಸ್ಥಿತಿಯನ್ನು ನೋಡಿ ಅವಳಿಗೆ ಹೆಪ್ಪುಗಟ್ಟಿದಂತಾಯಿತು. ಬಂದವಳೆ ಅವಳ ತಲೆಯನ್ನು ತೊಡೆಯಮೇಲಿರಿಸಿಕೊಂಡು ಕೊರಳು ಮುಟ್ಟಿ ನೋಡಿದಳು. ಜ್ವರದ ಕಾವು ಇನ್ನೂ ಏರುವದರಲ್ಲಿತ್ತು. ಅದರ ಬಾಧೆಗೆ ಹಣ್ಣಾಗಿ ಕರುಣಾ ಎಚ್ಚರ ತಪ್ಪಿದವರಂತೆ ಮಲಗಿಬಿಟ್ಟಿದ್ದಳು.

ಒಂದು ಬಾರಿ ಅಕ್ಕನನ್ನು ನೋಡಿದಳು. ಅರುಣಳು ಆ ವೇದನಾಪೂರ್ಣ ನೋಟವನ್ನು ಎದುರಿಸಲಾರದೆ, "ಇದೇನಾಯ್ತು ಕರುಣಾ?" ಎಂದು ಬಿಕ್ಕಿದಳು.

ಗಣಪತರಾಯರನ್ನು ಕರೆತರಲು ಸುರೇಶನನ್ನು ಓಡಿಸಿದಳು. ಅವರು ಬರುವವರೆಗೂ ಅವಳನುಭವಿಸಿದ ನೋವನ್ನು ಹೇಳತೀರದು. ಕರುಣಳಂತೂ ನರಳುತ್ತ ಕಣ್ಣು ತೆರೆದು ಬಿದ್ದುಕೊಂಡಿದ್ದಳು. ಒಂದು ಮಾತನ್ನೂ ಆಡಲಿಲ್ಲ.

ಗಣಪತರಾಯರು ಡಾಕ್ಟರರನ್ನು ಕರೆದುಕೊಂಡೇ ಬಂದರು. ಕಣ್ಣೀರಿಡುತ್ತ ನಿಂತ ಹೆಂಡತಿಯನ್ನು ಹೊರಗೆ ಕರೆದು ಸಮಾಧಾನ ಹೇಳಿದರು. ಡಾಕ್ಟರರು ಕರುಣಳನ್ನು ಪರೀಕ್ಷಿಸುವವರೆಗೆ ಅರುಣಳಿಗೆ ಕಾಯ್ದ ಹಂಚಿನ ಮೇಲೆ ನಿಂತಂತಾಗಿತ್ತು.

ಡಾಕ್ಟರರು ಗಣಪತರಾಯರನ್ನು ಕರೆದು, "High fevers ಇದೆ. ಉಳಿದ Complications ಏನೂ ಇಲ್ಲ. ಅಶಕ್ತಳಾದ್ದರಿಂದ ತುಸು ಹೆಚ್ಚು ಗಾಬರಿ ಮಾಡಿಸಿದ್ದಾಳೆ...." ಎಂದು, ಹೊಯ್ದಾಡುತ್ತ ನಿಂತಿದ್ದ ಅರುಣಳತ್ತ ತಿರುಗಿ "ನೀವೇನು ಗಾಬರಿಯಾಗಬೇಡಿರಿ ಅರುಣಾಬಾಯಿ" ಎಂದು ಸಮಾಧಾನ ಹೇಳಿದರು

"ಜ್ವರ ಕಡಿಮೆಯಾಗಲು ಇಂಜೆಕ್ಶನ್ ಕೊಡುತ್ತೀರಾ?"ಎಂದು ಅರುಣಾ ಕೇಳಿದಳು.

"ನಾಳೆ ನೋಡೋಣ. ಇವತ್ತು ಸಾಯಂಕಾಲ, ರಾತ್ರಿ, ಬರಿ ಔಷಧ ಕೊಡುತ್ತೇನೆ. ಅಂತಹ ಯಾವ ವಿಪರೀತವೂ ಇಲ್ಲ." ಎಂದು ಹೇಳಿದಾಗ ಅರುಣಳಿಗೆ ತುಸು ಧೈರ್ಯ ಬಂತು.

ಡಾಕ್ಟರರ ಜೊತೆ ಹೋಗಿ ಗಣಪತರಾಯರು ಔಷಧಿ ತಂದರು. ಒಂದು

ಸಲ ಔಷಧಿಯನ್ನು ಕುಡಿಸಬೇಕಾದರೆ ಅವರಿಗೆ ಸಾಕುಸಾಕಾಗಿಹೋಯ್ತು.

ಗಂಟಲಿಗೆ ಇಳಿಯುವವರಲ್ಲಿಯೇ ವಾಂತಿಮಾಡಿಕೊಂಡಳು. ತೀರ ನಿರ್ವಿಣ್ಣಳಾಗಿ ಮಲಗಿಬಿಟ್ಟಳು. ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಜ್ವರ ಇಳಿಮುಖವಾಗತೊಡಗಿತು. ಕಾಫಿ, ಹಣ್ಣಿನ ರಸವನ್ನು ಕುಡಿಸಿದರು. ಅರುಣಾ ಅಂದು ಬೆಳಗಿನ ವರೆಗೆ ತಂಗಿಯ ಬದಿಯಲ್ಲಿಯೇ ಕುಳಿತಳು.

ಮರುದಿನ ಬೆಳಿಗ್ಗೆ ಹತ್ತು ಗಂಟೆಗೆ ಡಾಕ್ಟರರು ಮತ್ತೆ ಬಂದು ಪರೀಕ್ಷಿಸಿದರು. ಹಿಂದಿನ ದಿನಕ್ಕಿಂತ ಜ್ವರ ಕಡಿಮೆಯಾಗಿತ್ತು. ಯಾವ ಭಯವಿಲ್ಲೆಂದು ಧೈರ್ಯ ಹೇಳಿದರು. ನಾಲ್ಕಾರು ದಿನಗಳಲ್ಲಿ ಪೂರ್ತಿಯಾಗಿ ಗುಣವಾಗುವದೆಂದು ಹೇಳಿದಾಗ ಅರುಣಳಿಗೆ ಪೂರ್ತಿ ಸಮಾಧಾನವಾಯ್ತು.

ಆ ದಿನ ಮಧ್ಯಾಹ್ನ:

ಅರುಣಾ ಔಷಧಿ ಕುಡಿಸಲು ಬಂದಳು. ಬಟ್ಟಲನ್ನು ಬಾಯಿಗೆ ಹಿಡಿದಾಗ "ನಾನೊಲ್ಲೆ"ನೆಂದು ಕೈ ಸರಿಸಿಬಿಟ್ಟಳು. ಜ್ವರ ಇನ್ನೂ ಪೂರ್ತಿ ಬಿಟ್ಟಿರಲಿಲ್ಲ. ತಂಗಿಯ ಹಟಮಾರಿತನವನ್ನು ನೋಡಿ ಒಂದು ಕ್ಷಣ ಸಿಟ್ಟು ಬಂದಿತು. "ಹಾಗೆ ಮಾಡಬಾರದು ಕರುಣಾ. ಬೇಗನೆ ನೀನು ಗುಣಹೊಂದಬೇಕು. ಪರೀಕ್ಷೆ ಸಮೀಪಿಸಹತ್ತಿದೆ. ನೀನು ಹೀಗೆ ಹಟಮಾಡಿದರೆ ಹೇಗೆ ನೋಡು !" ಎಂದರೂ ಕೊನೆಗೆ ವಿಫಲಳಾಗಿ ಗಣಪತರಾಯರನ್ನೇ ಕರೆತಂದಳು.

"ಔಷಧಿ ಕುಡಿ ಕರುಣಾ" ಎಂದು ಅವಳ ತಲೆ ನೇವರಿಸುತ್ತ ಗಣಪತರಾಯರು ಹೇಳಿದರು.

"ಬಹಳ ಕಹಿ. ನಾನೊಲ್ಲೆ."

"ಪೆಪ್ಪರಮಿಂಟ ಕೊಡುತ್ತೇನೆ; ಕುಡಿ."

"ನನಗೆ 'Ping-pong' ರ‍್ಯಾಕೆಟ್ ಬೇಕು ಮಾಮಾ !"ಹಟಮಾರಿ ಮಗುವಿನ ಧ್ವನಿಯಲ್ಲಿ ಹೇಳಿದಳು.

ರೋಗಿಯ ಬಯಕೆಗಳೇ ವಿಚಿತ್ರ. ಅವಳ ಇಷ್ಟವನ್ನು ಪೂರಯಿಸಲೇ ಬೇಕಲ್ಲ ! ಇಲ್ಲದಿದ್ದರೆ ಮತ್ತೆನಾದರೂ ವಿಪರೀತಕ್ಕಿಟ್ಟುಕೊಂಡರೆ ?

ಅಂದು ರ‍್ಯಾಕೆಟ್ ತಂದು ಕೊಟ್ಟ ಮೇಲೆಯೇ ಔಷಧಿ ಕುಡಿದಳು. ಒಂದೆರಡು ದಿನಗಳಲ್ಲಿ ಜ್ವರ ಸ್ತಿಮಿತಕ್ಕೆ ಬಂದವು. ಮನೆಯಲ್ಲಿ ಓಡಾಡಿಕೊಂಡಿರುವಷ್ಟು ಶಕ್ತಿ ಬಂದಿತು. ಆದರೆ ಅವಳ ಮುಖದ ಮೇಲಿನ ಮೊದಲಿನ ನಗೆ

ಗೆಲುವು, ಉತ್ಸಾಹಗಳು ಮಾತ್ರ ಮಾಯವಾಗಿಬಿಟ್ಟಿದ್ದವು.

ತಲೆದಿಂಬಿನ ಕೆಳಗೆ ರ್‍ಯಾಕೆಟ್ ಇಟ್ಟುಕೊಂಡು ಮಲಗುತ್ತಿದ್ದಳು. ಯಾವಾಗಲೂ ಅದನ್ನು ಕೈಯಲ್ಲಿ ಹಿಡಿದುಕೊಂಡು ಅತ್ತಿತ್ತ ಕೈಬೀಸುತ್ತಿದ್ದಳು. ಒಮ್ಮೊಮ್ಮೆ ತನ್ನಷ್ಟಕ್ಕೆ ತಾನೆ ಏನೇನೋ ಗುಣುಗುತ್ತಿದ್ದಳು. ಅರುಣಳ ಕಂಣಿಗಂತೂ "ಮಂಕು" ಕವಿದವರಂತೆ ಕಾಣುತ್ತಿದ್ದಳು.

ಯಾವುದೋ ವಿಷಯದಲ್ಲಿ ಅವಳ ಮನ ವ್ಯಸ್ತವಾಗಿತ್ತು; ವ್ಯಗ್ರವಾಗಿತ್ತು. ಸಾಮಾನ್ಯವಾದ ದಾರಿಯನ್ನು ಬಿಟ್ಟು ಕವಲೊಡೆದಿತ್ತು ಅವಳ ಮನದ ರೀತಿ. ಈ ವಿಚಿತ್ರ ವರ್ತನೆ, ಅಕಾರಣ ಕಂಬನಿ, ಇವುಗಳನ್ನು ಕರುಣಾ ಗಮನಿಸಿರಲಿಲ್ಲ. ನೋಡಿದ್ದರೆ 'ಇದು ಬರಿ ಜ್ವರವಲ್ಲ'ವೆಂದು ಎದೆಗೆಡುತ್ತಿದ್ದಳೇನೋ! ಭಾವಶೂನ್ಯವಾದ ಅವಳ ನೋಟ, ಅವಳ ವಿಲಕ್ಷಣ ಮೌನ, ಒಮ್ಮೊಮ್ಮೆ ಭ್ರಾಂತಳಂತೆ ತನ್ನಷ್ಟಕ್ಕೆ ತಾನು ಆಡುತ್ತಿರುವ ಮಾತುಗಳು—ಇವೆಲ್ಲ ಡಾಕ್ಟರರಿಗೆ ಹೇಗೆ ಅರ್ಥವಾಗಬೇಕು?

ಜ್ವರದ ತಾಪ ಕಡಿಮೆಯಾಗಹತ್ತಿತು. ಒಂದು ದಿನ ಮಧ್ಯಾಹ್ನ ಕರುಣಾ ಬರೆಯಲು ಕುಳಿತಳು. ಅರಿಯಲಾರದ ಭಾವನೆಗಳು ಒಳಗಿನಿಂದ ಪ್ರೇರಿಸುತ್ತಿದ್ದವು. ಅದುಮಿಟ್ಟ ದೊಂಡ ಪ್ರವೃತ್ತಿಗಳೆಲ್ಲ ಸೇಡು ತೀರಿಸಿಕೊಳ್ಳಹತ್ತಿದ್ದವು.

ನಾಲ್ಕಾರು ಬಾರಿ ಬರೆದು ಓದಿ, ಹರಿದು ಹಾಕಿದಳು. ಮತ್ತೆ ಪ್ರಾರಂಭಿಸಿದಳು:

'ಜೀವಸಖ ಸುಧಾಕರ'....ಎಂದು ಪ್ರಾರಂಭಿಸಿದಳು.

ಸುದೀರ್ಘವಾಗಿ ಬರೆದಳು. ತನ್ನ ಮನದಳಲನ್ನು ತೋಡಿಕೊಂಡಳು. ಹೃದಯದ ದಾರುಣ ವ್ಯಥೆ, ನೋವು ಸಂಕಟಗಳನ್ನೆಲ್ಲ ಒಂದು ಸಲ ಪತ್ರದಲ್ಲಿ ಹೊರಗೆಡವಿದಳು. ಕೊನೆಯ ಭಾಗಕ್ಕೆ ಬಂದಾಗ ಒಂದೇಸಮನೆ ಕಂಣೀರು ಹರಿಯುತ್ತಿತ್ತು. ಕೈ ದುರ್ಬಲವಾಗಿ ಮುಂದೆ ಸಾಗಲಿಲ್ಲ. ತನ್ನ ಆತ್ಮಶಕ್ತಿಯನ್ನೆಲ್ಲ ಸಂಚಯಿಸಿ,—

"ನನ್ನ ರೋಗದ ಅರ್ಥ ನಿನ್ನನ್ನುಳಿದು ಯಾರಿಗೂ ತಿಳಿಯಲಾರದು. ನನ್ನಿಂದ ಎಷ್ಟು ಜನರಿಗೆ ಹಿಂಸೆ, ನೋಡು? ಅಕ್ಕ, ಮಾಮಾ, ಮಾಲತಿ, ಇವರನ್ನೆಲ್ಲ ನೋಯಿಸಿದ್ದೇನೆ. ಅವರೆದುರು ಹೇಗೆ ತೋಡಿಕೊಳ್ಳಲಿ? ಈ ಸಂಕಟವನ್ನು ಸಹಿಸಲಾರದವಳಾಗಿದ್ದೇನೆ. ಸಾವು ಹೆಚ್ಚು ಪ್ರಿಯವೆನಿಸಹತ್ತಿದೆ. ಈ ಅನಿಶ್ಚಿತವಾದ ಮಾನಸಿಕ ಘರ್ಷಣೆಯಲ್ಲಿ ನಾನು ನಿತ್ಯ ಸಾಯುತ್ತಿದ್ದೇನೆ. ಮೈಯಲ್ಲಿ

ಅಶಕ್ತತೆ, ಅಸ್ವಾಸ್ಥ್ಯ ಹಾಗೆಯೇ ಇವೆ. ನಾನು ಸುಧಾರಿಸಹತ್ತಿದ್ದೇನೆಂದು ಅಕ್ಕನಿಗೆ ಹುಚ್ಚು ಸಮಾಧಾನ. ನನ್ನ ಸಮಸ್ಯೆಯನ್ನು ನೀನೇ ಬಿಡಿಸಬೇಕು. ಆ ಸ್ಥಳಕ್ಕೆ ನಾಳೆ ಬಂದುಬಿಡು. ಬೇಗ ಬಾ. ಸಾಯುವ ಮೊದಲು ನಿನ್ನನ್ನು ನೋಡ ಬಯಸಿದೆ ಈ ಜೀವ. ನಿನ್ನ ಎದೆಗೊರಗಿ ಪ್ರಾಣಬಿಡಬೇಕೆಂದಿದ್ದೇನೆ. ಈ ಭಾಗ್ಯವನ್ನಾದರೂ ನನ್ನಿಂದ ಕಸಿದುಕೊಳ್ಳಬೇಡ,

ನಿನ್ನ ಜನ್ಮಾಂತರದ ಗೆಳತಿ
—ಕರುಣಾ

ಕೊನೆಯ ಸಾಲು ಬರೆಯಬೇಕಾದರೆ ಕರುಣಳ ಪ್ರಜ್ಞೆ ತಪ್ಪಿದಂತಾಯ್ತು. ಕಣ್ಣು ಮುಚ್ಚಿ ಬಿದ್ದುಬಿಟ್ಟಳು. 'ಅಕ್ಕಾs !'ಎಂದು ಯಾರಿಗೂ ಕೇಳದಂತೆ ಕನವರಿಸಿದಳು. ಮನದ ಬೇಗುದಿಯು ತೀಕ್ಷ್ಣವಾಗಿ ಕೊರೆದು ಬಂದಿತ್ತು ಅವಳ ಕನವರಿಕೆಯಲ್ಲಿ.

* * *

ಮರುದಿನ ಬೆಳಕು ಹರಿಯಿತು. ಕರುಣಾ ಕೋಣೆಯಿಂದ ಹೊರಬಂದಳು. ಯಾವ ವ್ಯತ್ಯಾಸವಿಲ್ಲದವರಂತೆಯೇ ಇದ್ದಳು. ಅಕ್ಕನೊಡನೆ ಬೆರೆತು ಮಾತನಾಡಿದಳು. ಗಣಪತರಾಯರೊಂದಿಗೆ ನಗುತ್ತ ಹರಟಿದಳು. "ಮಾಲತಿ ಕಾಣಿಸುವದಿಲ್ಲವಲ್ಲ?"ಎಂದು ಅಕ್ಕನನ್ನು ಕೇಳಿದಳು.

"ಈಗ ನಾಲ್ಕೈದು ದಿನಗಳಿಂದ ಊರಲ್ಲಿರಲಿಲ್ಲ. ಈ ದಿನ ಬಂದಿದ್ದಾಳೆ." ಎಂದು ಹೇಳಿದಳು.

ಕರುಣಾ ಅಂದು ಹೊಟ್ಟೆ ತುಂಬ ಊಟಮಾಡಿದಳು. ಅರುಣಳ ಕರುಳಲ್ಲಿ ನೊರೆಹಾಲು ಹರಿಸಿದಷ್ಟು ಸಂತೋಷವಾಯಿತು. ತನ್ನ ತಂಗಿ ಮೊದಲಿನಂತಾದಳೆಂದು ಹಿಗ್ಗಿದಳು. ದೇವರಿಗೆ ಹರಕೆ ಹೊತ್ತಳು.

ಅರುಣಾ ಅಡುಗೆಮನೆಯ ಕೆಲಸವನ್ನು ಮುಗಿಸುವವರೆಗೂ ಅವಳೊಂದಿಗೆ ತುಂಬ ಮಾತನಾಡಿದಳು. ನಡುಮನೆಗೆ ಬಂದು 'ಉಶ್' ಎಂದು ಅರುಣಾ ಕುಳಿತುಕೊಂಡಳು. ಮಗ್ಗುಲಲ್ಲಿ ಕುಳಿತ ತಂಗಿಯನ್ನು ಸಂತೃಪ್ತಿ ಭಾವದಿಂದ ನೋಡಿದಳು.

ಆ ಒಂದು ಗಳಿಗೆಯಲ್ಲಿ ಕರುಣಾ ಅನುಭವಿಸಿದ ಸಾಂತ್ವನ, ಸಮಾಧಾನ ಅನಿರ್ವಚನೀಯುವಾಗಿದ್ದವು. ಕರುಣಳನ್ನು ಮಗ್ಗುಲಲ್ಲಿ ಮಲಗಿಸಿಕೊಂಡು ಮಲಗಿದಳು. ಸಾವಕಾಶವಾಗಿ ಅವಳ ತಲೆ ತಟ್ಟುತ್ತ ಕೂಸನ್ನು ಮಲಗಿಸು

ವಂತೆ ಮಲಗಿಸಿದಳು. ಕರುಣಳಿಗೆ ಬೇಗ ನಿದ್ರೆಯಾವರಿಸಿತು. ತಂಗಿಯ ಸಪ್ಪೆ ಮುಖ, ಕೃಶವಾದ ದೇಹವನ್ನು ನೋಡುತ್ತ ಮಲಗಿದಳು ಅರುಣಾ.

ಅವಳ ತಲೆಗೂದಲಲ್ಲಿ ಮೃದುವಾಗಿ ಕೈಯಾಡಿಸುತ್ತ "ದೇವರು ನಿನ್ನನ್ನು ಸುಖಿಯಾಗಿಡಲಿ" ಎಂದು ಮನ ತುಂಬಿ ಪ್ರಾರ್ಥಿಸಿದಳು.

* * *

ಕನಸು ಕಂಡೆದ್ದವಳಂತೆ ಒಮ್ಮೆಲೆ ಎಚ್ಚತ್ತಳು ಕರುಣಾ. ಬದಿಯಲ್ಲಿ ಅಕ್ಕ ಇರಲಿಲ್ಲ. ಒಳಗೆ ನೋಡಿದಳು. ಅರುಣಾ ಕಸಗೂಡಿಸುತ್ತಿದ್ದಳು.

"ಅಕ್ಕಾ, ನಾನು ಮಾಲತಿಯನ್ನು ಕರೆದುಕೊಂಡು ತುಸು ತಿರುಗಾಡಿ ಬರಲಾ?"ಎಂದು ಕೇಳಿದಳು.

"ದೂರ ಹೋಗಬೇಡ. ಹೀಗೇ ತುಸು ಸುತ್ತಾಡಿಕೊಂಡು ಬಂದುಬಿಡಿರಿ." ಎಂದು ಹೇಳಿದಳು. ಕರುಣಾ ತಟ್ಟನೆ ತನ್ನ ಕೋಣೆಗೆ ಓಡಿದಳು. ಜ್ವರದಿಂದ ಬಳಲಿ, ಕೊರಗಿದ್ದರೂ ಆ ದಿನ ಅವಳಿಗೆ ಎಲ್ಲಿಂದಲೊ ಅಮಿತ ಉತ್ಸಾಹ, ಚೈತನ್ಯ ಮೂಡಿಬಂದಿದ್ದವು.

ವಿಶೇಷವಾಗಿ ಅಲಂಕಾರ ಮಾಡಿಕೊಳ್ಳದೆ ಲಗುಬಗೆಯಿಂದ ಹೊರಗೆ ನಡೆದಳು. ಮಾಲತಿಯ ಮನೆಗೆ ಮಾತ್ರ ಹೋಗಲಿಲ್ಲ. ಮಾಲತಿಯ ಮನೆ ಯೆದುರಿಗೆ ಬಂದಾಗ ಮಾತ್ರ ಬರಿ ಅವರ ಬಾಗಿಲೆಡೆಗೆ ನೋಡುತ್ತಾ ನೇರವಾಗಿ ಮುಂದೆ ನಡೆದಳು. ಆ ಬಿಸಿಲು ಕರುಣಳನ್ನು ಬಳಲಿಸಿತು. ವೇಗವಾಗಿ ನಡೆ ದಂತೆ ಸೋತುಬಿಟ್ಟಳು. ಆಯಾಸದಿಂದ ತೇಕಹತ್ತಿದಳು.

ಬಸ್ಸು ಹತ್ತಿ ಹೋದರಾಯ್ತೆಂದು ಸಮೀಪದ ಕೂಟಕ್ಕೆ ಬಂದಳು. ಬಸ್ಸಿ ಗಾಗಿ ಕಾಯುತ್ತ ನಿಂತವರ ಸಂಖ್ಯೆ ಹೆಚ್ಚಿಗಿರಲಿಲ್ಲ. ಗುಂಪುಗುಂಪಾಗಿ ಹತ್ತೆಂಟು ಜನ ನಿಂತಿದ್ದರು. ಬಸ್ಸು ಬರಲು ಇನ್ನೂ ಅವಕಾಶವಿತ್ತು. ಆದುದ ರಿಂದಲೆ ಪ್ರಯಾಣಿಕರು ಇನ್ನೂ 'ಸಾಲು' ಮಾಡಿಕೊಂಡು ನಿಂತಿರಲಿಲ್ಲ.

ಅವರಿಂದ ತುಸು ದೂರದಲ್ಲಿ ಕರುಣಾ ನಿಂತಳು. ಅವಳ ಗಮನವೆಲ್ಲ ಬೀದಿಯ ಕಡೆಗೆ. ತವಕದಿಂದ ಬಸ್ಸಿನ ದಾರಿ ಕಾಯುತ್ತಿದ್ದಳು. ಕೆಲ ದೂರದಲ್ಲಿ ನಿಂತ ಕಾಲೇಜ ಯುವಕರ ದೃಷ್ಟಿ ಕರುಣಳೆಡೆಗೆ ಸ್ವಾಭಾವಿಕವಾಗಿ ತಿರುಗಿತು. ಇಷ್ಟು ಸಮಯದ ವರೆಗೆ ಗಮನ ಹರಿಯದಿದ್ದುದೇ ಆಶ್ಚರ್ಯ.

ಮಧ್ಯದಲ್ಲಿ ನಿಂತ ಜಾಣಿ ಒಳ್ಳೆ ಉತ್ಸಾಹದಿಂದ ಯಾವುದೋ ಅತಿ

ರಹಸ್ಯದ ವಿಷಯವನ್ನು ಹೇಳುತ್ತಿದ್ದ. ಸುತ್ತ ನಿಂತ ಆತನ 'ಭಕ್ತ'ರೆಲ್ಲ ಏಕಾಗ್ರತೆಯಿಂದ ಕೇಳುತ್ತಿದ್ದರು. ಒಂದು ಸಲ ಕರುಣಳತ್ತ ನೋಡಿ ಮತ್ತೆ ತಮ್ಮ ಮಾತುಗಳಲ್ಲಿ ಮುಳುಗಿವರು. ಅವರ ಪರಿಚಯ ಅವಳಿಗಿರಲಿಲ್ಲ. ತಮ್ಮ ಕಾಲೇಜಿನ ವಿದ್ಯಾರ್ಥಿನಿ ಅವಳಲ್ಲದುದರಿಂದ ಹೆಚ್ಚಿನ ಆಸಕ್ತಿಯನ್ನು ಅವರೂ ತೋರಲಿಲ್ಲ.

ಜಾ:ನಿ ನಡುವೆ ಒಮ್ಮೆಲೆ "ನನಗೂ ಗೊತ್ತಾಗುತ್ತಿರಲಿಲ್ಲ. ನಮ್ಮ ಲೂಸೀ ಹೇಳಿದಳು. ಸುಧಾಕರ ಪ್ರಣಯಲೀಲೆಯಲ್ಲಿ ತೊಡಗಿದ್ದಾನಂತೆ. ಅವಳನ್ನೇ ಮದುವೆಯಾಗುತ್ತಾನಂತೆ."

"ಯಾರು ಆ ಹುಡಿಗೆ ?" ಒಬ್ಬ ಕೇಳಿದ.

"ಅದಾರೋ ನನಗೆ ತಿಳಿಯದು. ನಮ್ಮ ಕಾಲೇಜಿನವಳಲ್ಲವಂತೆ ಅವಳು."

"ಅಂತೂ ಸುಧಾಕರ ಬಂದ ಒಂದು ವರುಷದೊಳಗಾಗಿಯೇ ಹಕ್ಕಿಯನ್ನು ಹಾರಿಸಿದ ನೋಡು !"

"ಆತನನ್ನು ನೋಡಿದರೆ ಅಂತಹ ಸಾಹಸದ ಹುಡುಗನಂತೆ ಕಾಣುತಿದ್ದಿಲ್ಲ ?" ಎಂದು ವಿಸ್ಮಯದಿಂದ ಒಬ್ಬ ಕೇಳಿದ.

"ಹೆಣ್ಣಿನ ನೋಟ ಎಲ್ಲವನ್ನೂ ಕಲಿಸುತ್ತದೆ. ಮೇಲೆ ಎಷ್ಟು ಸಂಭಾವಿತನಂತೆ ಕಾಣುತ್ತಿದ್ದ ನೋಡು !" ಎಂದು ಹೀಯಾಳಿಸುವ ಚುಚ್ಚು ಮಾತಿನಲ್ಲಿ ನುಡಿದ ಜಾ:ನಿ.

"ನಾಳೆ ಕಾಲೇಜಿನಲ್ಲಿ ಮೋಜುಮಾಡೋಣ, ನಿಲ್ಲು" ಎಂದು ಮರುದಿನದ ತಮ್ಮ ಕಾರ್ಯಕ್ರಮವನ್ನು ಗೊತ್ತುಪಡಿಸಿದ ಶಶಿ.

ಬಂಡೆಗಲ್ಲನ್ನು ತಲೆಯ ಮೇಲೆ ಎತ್ತಿ ಹೇರಿದಂತಾಯ್ತು ಕರುಣಳಿಗೆ.

ಅಷ್ಟರಲ್ಲಿ ಬಸ್ಸು ಬಂದಿತು. ಕರುಣಾ ಮನೆಗೆ ಹಿಂತಿರುಗಿದಳು. ಅವಳ ಧೈರ್ಯವೆಲ್ಲ ಉಡುಗಿಹೋಗಿತ್ತು. ಮಾಲತಿಯ ನೆನಪಾಯ್ತು. ಕೋಪ, ತಿರಸ್ಕಾರಗಳಿಂದ ಅವಳನ್ನು ಶಪಿಸಿದಳು. "ನನ್ನ ಬದುಕನ್ನು ಮಣ್ಣುಗೂಡಿಸಿದೆ ಮಾಲತೀ...." ಎಂದು ಕೊರಗಿದಳು. ಮನೆಗೆ ಬರುವಾಗ ಮಾಲತಿಯ ಮನೆಯತ್ತ ಮುಖ ತಿರುವಿ ಕೂಡ ನೋಡಲಿಲ್ಲ.

ಧಾವಿಸಿ ಮನೆ ಹೊಕ್ಕಳು. ಮಾಲತಿ ತನ್ನ ಮನೆಯ ಬಾಗಿಲಲ್ಲೇ ನಿಂತಿದ್ದಳು. ಕರುಣಳನ್ನು ಒಂದೆರಡು ಬಾರಿ ಕೂಗಿದರೂ ಅವಳಿಗೆ ಕೇಳಿಸಿರಲಿಲ್ಲ.

ಕೇಳಿಸಿದರೂ ಕರ್ಕಶವಿಕಟಧ್ವನಿಯಂತೆ ಕಿವಿಯನ್ನಿರಿಯಿತು.

"ಗುಂಗಿನಲ್ಲಿ ನಡೆದಿದ್ದಾಳೆ" ಎಂದುಕೊಂಡಳು ಮಾಲತಿ. ತಾನು ಊರ ಲ್ಲಿಲ್ಲದುದರಿಂದ ಕರುಣಳನ್ನು ನೋಡುವದಾಗಿರಲಿಲ್ಲ. ನಾಲ್ಕಾರು ದಿನಗಳಿಂದ ಕರುಣಳಿಗೆ ಜಡ್ಡಾದುದನ್ನು ತಾಯಿಯಿಂದ ತಿಳಿದು ಮಿಡುಕಿದಳು. ಕರುಣ ಳನ್ನು ಕಂಡುಬರಬೇಕೆಂಬ ಆಸೆಯಿಂದ ನಡೆದಳು.

ಬಂದು ನೋಡಿದಾಗ ಕರುಣಳ ಕೋಣೆಯ ಬಾಗಿಲು ಇಕ್ಕಿತ್ತು. ಗೆಳತಿ ಯನ್ನು ನೋಡುವ ಉತ್ಸುಕತೆಯಲ್ಲಿ ಜೋರಿನಿಂದ ಬಾಗಿಲು ತೆರೆದಳು. ತನ್ನನ್ನು ಅಚಲ ನೋಟದಿಂದ ದಿಟ್ಟಿಸುತ್ತ ಒರಗಿದ ಕರುಣಳನ್ನು ನೋಡಿ ಮಾಲತಿ ಬೆದ ರಿದಳು. "ಏನೋ ಅನಾಹುತ ಸಂಭವಿಸಿದೆ" ಎಂದು ಸಂದೇಹ ಪ್ರಬಲವಾಯಿತು.

ಮಾಲತಿಯನ್ನು ನೋಡಿ ಕರುಣಾ ತುಟಿ ಬಿಚ್ಚಲಿಲ್ಲ. ಬಾಗಿಲಲ್ಲೇ ನಿಂತು ಕೊಂಡು "ಕರುಣಾ!"ಎಂದು ಅನುಮಾನಿಸುತ್ತ ಭೀತಧ್ವನಿಯಲ್ಲಿ ಮಾಲತಿ ಕೂಗಿದಳು.

ಮಾಲತಿಯ ಮುಖ, ಮಾತು ಕರುಣಳಿಗೆ ತೀವ್ರ ಜುಗುಪ್ಸೆ, ತಿರಸ್ಕಾರ ಗಳನ್ನುಂಟುಮಾಡಿದವು. ಅವಳನ್ನು ಮುಂದೆ ಮಾತನಾಡಗೊಡಲಿಲ್ಲ ಕರುಣಾ. ಸಿಡಿದೆದ್ದ ಕೋಪವನ್ನೆಲ್ಲ ನಿಗ್ರಹಿಸಿ ಅತಿ ಸೌಮ್ಯವಾಗಿ ತಾನೇ "ದಯವಿಟ್ಟು ಇಂದಿನಿಂದ ನನ್ನನ್ನು ನೋಡಬೇಡ, ಮಾತನಾಡಿಸಬೇಡ."ಎಂದು ಹೇಳಿ ಮುಖ ತಿರುವಿ ಮಲಗಿಬಿಟ್ಟಳು.

ಮಾಲತಿಯನ್ನು ಬೆಟ್ಟದ ಮೇಲಿಂದ ಕೆಳಗೆ ಉರುಳಿಸಿದಂತಾಯಿತು. ಅಲ್ಲಿ ನಿಲ್ಲುವ ಧೈರ್ಯವಾಗಲಿಲ್ಲ. ಉದ್ವೇಗದಿಂದ ಮನೆಗೆ ತಿರುಗಿದಳು. ಹೊಸ್ತಿಲ ದಾಟುವಾಗ "ನಾನೇನು ಅನ್ಯಾಯ ಮಾಡಿದ್ದೇನೆ ಅವಳಿಗೆ? "ಎಂದು ಚಿಂತಿಸಿ ದಳು. ಒಮ್ಮೆಲೆ ಅಳು ಬಂದುಬಿಟ್ಟಿತು. ಅಲ್ಲದೆ ಭಯಾನಕ ಕಲ್ಪನೆ ಮೂಡಿ ಮತ್ತೂ ಅಧೀರಳಾದಳು. ಸಹಜಕುತೂಹಲದಿಂದ ಏನೋ ಸಂತೋಷದ ಭರ ದಲ್ಲಿ ತನ್ನ ಸಹಪಾಠಿಯೋರ್ವಳೆದುರು "ನಮ್ಮ ಕರುಣಳ ಮದುವೆ ಸಮೀಪ ದಲ್ಲಿ. ಜೇನು ಹಾಲು ಕೂಡಿದಂತೆ ಮಧುರ ಪ್ರೇಮವಿವಾಹ. ಅವಳು ತುಂಬ ಸುದೈವಿ...."ಎಂದು ಅಭಿಮಾನದಿಂದ ಹೇಳಿದ್ದು ನೆನಪಾಗಿ "ಅಯ್ಯೋ ತಪ್ಪು ಮಾಡಿದೆನಲ್ಲಾ!"ಎಂದು ಎದೆ ನಡುಗಿತು. ಯಾವ ದುರುದ್ದೇಶದಿಂದಲೂ ಹಾಗೆ ಹೇಳಿರಲಿಲ್ಲ ನಿಜ. ಆದರೆ ಅದರ ಪರಿಣಾಮ ಈಗ ಮಾಲತಿಗೆ ಅರ್ಥ

ವಾಯಿತು. ಇಂತಹ ಅನರ್ಥ ಒದಗುತ್ತದೆಂದು ಅವಳೆಣಿಸಿರಲಿಲ್ಲ. ತನ್ನಿಂದ ಘಟಿಸಿದ ಈ ಅಚಾತುರ್ಯಕ್ಕಾಗಿ ತನ್ನನ್ನು ತಾನೆ ಹಳಿದುಕೊಂಡಳು. ಕರುಣಾಳ ಕಾಲು ಹಿಡಿದುಕೊಂಡು ಕ್ಷಮೆ ಬೇಡಲೇ ಎಂದುಕೊಂಡಳು. ಆದರೆ ಕರುಣಾಳ ಆ ಮುಖ ನೆನೆದು ಅಧೀರಳಾದಳು. ಮನೆಗೆ ಬಂದು ಮಲಗಿದರೂ ತಲೆಯಲ್ಲಿ ಇದೇ ತಿರುಗುತ್ತಿತ್ತು. ರಾತ್ರಿಯನ್ನೆಲ್ಲ ಅತ್ತೇ ಕಳೆದಳು.

*          *          *

ಮಾಲತಿ ಹೊರಟು ಹೋದ ಬಹಳ ಹೊತ್ತಿನ ಮೇಲೆ ಉಬ್ಬಸಬಡುತ್ತ, ಕರುಣಾ ಮುಖ ಮೇಲಕ್ಕೆತ್ತಿದಳು. ಭವಿಷ್ಯ ಘೋರವಾಗಿ ಕಂಡಿತು. 'ಬರುವ ಬೆಳಗನ್ನು ಎದುರಿಸುವುದು ಹೇಗೆ ?' ಎಂದು ನೆನೆದು ಕುಸಿದಳು.

'....ಊರಲ್ಲೆಲ್ಲ ಸುದ್ದಿ ಹರಡಬಹುದು !'

'....ಅಕ್ಕನ ಕಿವಿಗೂ ತಲುಪಬಹುದು !'

'....ಮಾನಸಾ ಮುಖವೆತ್ತದಂತಾಗುವುದು !'

ತಲೆ ಚಚ್ಚಿಕೊಂಡಳು. ತಲೆಗೂದಲನ್ನು ಹುಚ್ಚಿಯಂತೆ ಕಿತ್ತಾಡಿದಳು. ಎದ್ದೆದ್ದು ಮಂಚದಲ್ಲಿ ಅಪ್ಪಳಿಸಿದಳು. ಅರುಣಾ ಆಗ ಹಿತ್ತಲಲ್ಲಿದ್ದಳು.

ಅತ್ತು ಅತ್ತು ನಿದ್ದೆ ಹೋದಳು ಕರುಣಾ. ನಡುನಡುವೆ ಕ್ಷೀಣವಾದ ಧ್ವನಿಯಲ್ಲಿ ಅಸ್ಪಷ್ಟವಾಗಿ ಕನವರಿಸುತ್ತಿದ್ದಳು. ಅವಳ ಮುಖದ ಮೇಲೆ ಅಪಾರ ವೇದನೆ, ಬಹುದಿನಗಳಿಂದ ಹುದುಗಿರಿಸಿಕೊಂಡ ನೋವು, ಭಯ, ಸಂಕಟಗಳು ವಿಕಾರವಾಗಿ ಮೂಡಿ ನಿಂತಿದ್ದವು.

ಆ ಕತ್ತಲೆಯಲ್ಲಿ ಅವಳ ಮುಖ ಯಾರಿಗೂ ಕಾಣುವಂತಿರಲಿಲ್ಲ !

## ಪ್ರಕರಣ : ೯

ಗಣಪತರಾಯರು ಸಂಪಾದಕರ ಕೋಣೆಯ ಎಡಬದಿಯ ತಮ್ಮ ಚಿಕ್ಕದಾದ ಪ್ರತ್ಯೇಕ ಕೋಣೆಯಲ್ಲಿ ಕುಳಿತಿದ್ದರು. ಮರುದಿನದ ಸಂಚಿಕೆಯಲ್ಲಿ 'ಹೊಸ ಪುಸ್ತಕ'ಗಳ ವಿಮರ್ಶೆಯನ್ನು ಬರೆಯುವ ಕೆಲಸವಿತ್ತು. ಅದೇ ಸಂಸ್ಥೆಯವರು ಹೊರಡಿಸುತ್ತಿದ್ದ ಮಾಸಪತ್ರಿಕೆಯಲ್ಲಿ 'ಓದುಗರ ಪ್ರಶ್ನೆ'ಗಳಿಗೆ ಉತ್ತರ ಬರೆಯುವ ಕಾರ್ಯವೂ ಅವರ ಪಾಲಿಗೇ ಇತ್ತು.

ಮೇಜಿನ ಮೇಲೆ ಹರವಿದ ಐದಾರು ಹೊಸ ಕಾದಂಬರಿಗಳ ವಿಮರ್ಶಾ ಸಂಗ್ರಹವನ್ನು ಸಿದ್ಧಪಡಿಸುವದರಲ್ಲಿ ನಿರತರಾಗಿದ್ದರು. ಒಂದು ಬಾರಿ, ಬರೆದ ಟಿಪ್ಪಣಿಯ ಕಾಗದವನ್ನು ಕೈಗೆತ್ತಿಕೊಂಡರು. ಆ ಕಾದಂಬರಿಗಳನ್ನು ನೋಡಿದಾಗ ಅಸಹ್ಯವಾದ ಜುಗುಪ್ಸೆ ಅವರಿಗೆ. 'ಇಂತಹ ಕಾದಂಬರಿಗಳು ಬರದಿದ್ದರೇ ಕ್ಷೇಮ'ವೆಂದು ಕಟುವಾಗಿ ಮನದಲ್ಲಿ ಅಂದುಕೊಂಡರೂ ಹಾಗೆ ಬರೆಯಲು ಬರುವಂತಿರಲಿಲ್ಲ. ಪತ್ರಿಕಾವ್ಯವಸಾಯದ ನೂರೆಂಟು ಸೂಕ್ಷ್ಮಸಮಸ್ಯೆಗಳು ಅಡಕವಾಗಿದ್ದವು ಅದರಲ್ಲಿ.

ಬೇಸರದಿಂದಲೆ ಗೀಚಹತ್ತಿದರು. ಹೊಗಳಿದಂತೆ ಆಗಿರಬಾರದು, ಟೀಕಿಸಿದಂತೆಯೂ ಆಗಿರಬಾರದೆನ್ನುವ ರೀತಿಯಲ್ಲಿ ಬರೆದು ತೆಗೆದರು. ಆ ಶಾಖೆಯನ್ನು ಒಪ್ಪಿಸಿಕೊಂಡ ಹೊಸದರಲ್ಲಿ ಯಾವುದೋ ಒಂದು ಕಾದಂಬರಿಯನ್ನು ಪ್ರಾಮಾಣಿಕವಾಗಿ ವಿಮರ್ಶಿಸಿ ಕಟುವಾಗಿ, ಕಹಿಯಾಗಿ ಬರೆದುದಕ್ಕೆ ಸಂಪಾದಕರಿಂದ 'ವ್ಯವಹಾರ-ಲಾಭ-ಹಿತ ಸೂತ್ರ'ದ ಉಪದೇಶಾಮೃತವನ್ನು ಪಡೆದಿದ್ದರು. ಅಂದಿನಿಂದ 'ನಿಷ್ಕಾಮ ಚಿತ್ತ' ಎಂಬ ವ್ಯಾವಹಾರಿಕ ದಾಸ್ಯಕ್ಕೆ ಸಿಲುಕಿ ಮನ ಒಪ್ಪದಿದ್ದರೂ ಸಂಪಾದಕರೊಪ್ಪುವಂತೆ ಬರೆಯುವ ರೂಢಿಯಾಯ್ತು. ಇತ್ತೀಚೆಗೆ ಅವರಿಗೆ ವಿಮರ್ಶೆ ಬರೆಯಲು ಶ್ರಮವಾಗುತ್ತಿರಲಿಲ್ಲ. 'Ready made' ಪದಪ್ರಯೋಗಗಳನ್ನು ಯಾಂತ್ರಿಕವಾಗಿ ಹೊಂದಿಸಿಟ್ಟು ಅಲ್ಲಲ್ಲಿ ತುಸು ಬೇರೆ ಬಣ್ಣ ಬಳಿದು, ವೈವಿಧ್ಯ ತೋರಿಸಿಬಿಡುವದೊಂದೆ ಅವರ ಕೆಲಸವಾಯ್ತು.

ಆಕಳಿಸುತ್ತ 'ಓದುಗ ಮಹಾಶಯರ' ಪತ್ರಗಳನ್ನು ತಿರುವಿ ಹಾಕುತ್ತ ಕುಳಿತಿದ್ದರು. ಓದುತ್ತ ಕುಳಿತಂತೆ ಒಮ್ಮೆಲೆ ಜೋರಾಗಿ ನಕ್ಕುಬಿಟ್ಟರು. ಅದೇ ವೇಳೆಗೆ ತನ್ನ ಕೆಲಸ ಮುಗಿಸಿ ಹೊರಟಿದ್ದ ಕುಲಕರ್ಣಿ, ನಗೆ ಕೇಳಿ ಒಳಗೆ ಬಂದು "ಯಾಕೆ ಗಣಪತರಾವ್, ಏನೋ ಸ್ವಾರಸ್ಯವಿದ್ದಂತಿದೆಯಲ್ಲ ?" ಎಂದು ಎದುರಿಗೆ ಕುರ್ಚಿಯೆಳೆದುಕೊಂಡು ಕುಳಿತರು.

"ಸ್ವಾರಸ್ಯವೇ ? ಹೂಂ. ಇಲ್ಲಿ ನೋಡಿರಿ. ಒಬ್ಬ ಮಹಾಶಯ ಹೀಗೆ ಕೇಳಿದ್ದಾನೆ: "ನಾನು ಗೀತಾಬಾಲಿಯಲ್ಲಿ ಅನುರಕ್ತನಾಗಿದ್ದೇನೆ. ಅದಕ್ಕೇನು ಮಾಡಲಿ ? ಅವಳಿಗೆ ಪತ್ರ ಬರೆಯಲಿಯಾ ?"

"ಮಗ ! ನಾಳೆ ಇಂಗ್ಲಂಡದ ಅಳಿಯನಾಗಬೇಕೆಂದಾನು ?"

ಇಬ್ಬರೂ ಹೊಟ್ಟೆತುಂಬಾ ನಕ್ಕರು.

"ಅವನಿಗೇನು ಸಲಹೆ ಕೊಡುತ್ತೀರಿ ನೀವು ?"

"ನಾನೇ ? ಪತ್ರ ಬರೆಯುವ ಮೊದಲು ಇನ್ನೊಮ್ಮೆ ಕನ್ನಡಿಯಲ್ಲಿ ನಿಮ್ಮ ಮುಖವನ್ನು ನೋಡಿಕೊಂಡರೆ ಒಳಿತು "ಎಂದು ಹೇಳುವವನಿದ್ದೇನೆ.

ಹರಟೆ ಸಾಗಿತು. ಅಗ್ಗದ ಕಾದಂಬರಿ, ಹುಡುಗರ ಹುಚ್ಚು 'Romnace' ಹೀಗೇ ಆಧುನಿಕ ಸಾಹಿತ್ಯಕ ಸಮಾಜಿಕ ರೋಗರುಜಿನಗಳ ವಿಷಯವಾಗಿ ತುಂಬ ಮೋಜಿನಿಂದ ಮಾತನಾಡುತ್ತ ಕುಳಿತರು. ಗಣಪತರಾಯರು ಒಳ್ಳೆ ವಿನೋದ ಪೂರ್ಣ ರೀತಿಯಲ್ಲಿ ಒಂದೊಂದಾಗಿ ಸಮಸ್ಯೆಗಳನ್ನೆತ್ತಿ ತೋರುತ್ತಿದ್ದರು. ಅವರ ಮಾತಿಗೆ ಆತಂಕವಾಗಿ ಸುರೇಶ ತೇಕುತ್ತ ಬಂದು ನಿಂತು, "ಮಾಮಾ, ಅಕ್ಕಾ ಬೇಗ ಬರಹೇಳಿದ್ದಾಳೆ. ಕರುಣಾ ಹೇಗೋ ಮಾಡಹತ್ತಿದ್ದಾಳೆ...." ಎಂದ.

ಮೈಮುರಿತು ಮಲಗಿದಾಗ ಮೇಲಿನಿಂದ ಹಾವು ಬಿದ್ದಂತಾಯ್ತು.

'ಆಂ!' ಎಂದು ಗಾಬರಿಯಿಂದ ಕೋಟನ್ನು ಹೆಗಲಮೇಲೊಗೆದು ಕೊಂಡು ಗಣಪತರಾಯರು ಕುಲಕರ್ಣಿಗೆ ಹೇಳದೆ ನಡೆದೇ ಬಿಟ್ಟರು.

ಟಾಂಗಾ ಇಳಿದವರೇ ಒಳಗೆ ಭರ್‍ರನೆ ನಡೆದರು ನಡುಮನೆಯ ಬಾಗಿಲಲ್ಲಿ ಮಾಲತಿ ಅಳುತ್ತ ಕಂಗೆಟ್ಟು ನಿಂತಿದ್ದಳು ಗಣಪತರಾಯರ ಗಂಡೆವೆ ಬಿರುಕು ಬಿಟ್ಟಿತು. 'ಅರುಣಾ....' ಎನ್ನುತ್ತ ಒಳಗೇ ಧಾವಿಸಿದರು.

ತಂಗಿಯನ್ನು ಗಟ್ಟಿಯಾಗಿ ಹಿಡಿದುಕೊಂಡು, ಅಳಲಾಗದೆ ಕುಳಿತಿದ್ದಳು ಅರುಣಾ.

ಕರುಣಾ ಪ್ರಜ್ಞಾಶೂನ್ಯಳಾಗಿ ಅಕ್ಕನ ತೋಳುಗಳಲ್ಲಿ ಬಿದ್ದಿದ್ದಳು.

ಗಂಡ ಬಂದುದನ್ನು ನೋಡಿ ಮೆಲ್ಲಗೆ ಕರುಣಳನ್ನು ತೊಡೆಯಿಂದ ಕೆಳಗೆ ಮಲಗಿಸಿ ಸದ್ದುಮಾಡದೆ ಅರುಣಾ ಹೊರಗೆ ಬಂದು ಗಣಪತರಾಯರನ್ನು ಅಲ್ಲಿಯೇ ನಿಲ್ಲಿಸಿ, ಅವರ ಮುಖವನ್ನು ನೋಡಿ ಬಿಕ್ಕಿಸಿ ಬಿಕ್ಕಿಸಿ ಅಳಹತ್ತಿದಳು.

ರಾಯರಿಗೆ ದಿಕ್ಕೇ ತಪ್ಪಿದಂತಾಯ್ತು. "ಮತ್ತೆ ಜ್ವರ ಬಂದಿದೆಯೇನು?" ಎಂದು ಕೇಳಿದರು.

"ಹೂಂ. ವಿಲಕ್ಷಣವಾಗಿ ಮಾತನಾಡುತ್ತಾಳೆ. ನನಗೇಕೋ ಇಲ್ಲದ ಭಯಾನಕ ಚಿತ್ರ ಕಂಣೆದುರು ಬರಹತ್ತಿದೆ...." ಎಂದು ಅಳುತ್ತಲೆ ಹೇಳಿದಳು. ಕರುಣಳ ಎಚ್ಚರ ತಪ್ಪಿದಾಗಿನ ಅರ್ಧಮರ್ಧ ಭ್ರಮೆಯ ಮಾತು, ರಾವುಹೊಡೆದ

ಅವಳ ಮುಖ, ನಿಸ್ತೇಜ ನೋಟ ನೆನೆದಂತೆ ಅರುಣಳಿಗೆ ಕುದಿಯಿತು.

ಹೆಂಡತಿಯನ್ನು ಸಮಾಧಾನಗೊಳಿಸುತ್ತ "ಹುಚ್ಚಿಯಂತೆ ಮಾಡಬೇಡ ಅರುಣಾ, ನೀನೇ ಹೀಗೆ ಧೈರ್ಯಗುಂದಿದರೆ ಕರುಣಳ ಗತಿಯೇನು ? ಸಮಾಧಾನ ಮಾಡಿಕೋ."ಎಂದು ಹೇಳಿ ಅವಳನ್ನು ತಮ್ಮ ಕೋಣೆಗೆ ಕರೆದೊಯ್ದು ಕೂಡಿಸಿದರು. ಹೀಗೆ ಹೆಂಡತಿಗೆ ಧೈರ್ಯ ಹೇಳಿದರೂ ಒಳಗೊಳಗೇ ತಾವೇ ಹತಾಶರಾಗಿದ್ದರು.

ಒಂದು ಬಾರಿ ಕರುಣಳನ್ನು ನೋಡಬೇಕೆಂದು ಮೆಲ್ಲಗೆ ಕೋಣೆಯ ಬಾಗಿಲಿಗೆ ಬಂದು ಹಣಿಕಿಕ್ಕಿದರು. ಮೆಲ್ಲಗೆ ಅವಳು ಗೋಣು ಹೊರಳಿಸಿದಳು. ಅರೆತೆರೆದ ವಿಕಾರ ಕಂಗಳಿಂದ ಬಾಗಿಲೆಡೆಗೆ ನಿರಂತರ ಪ್ರತೀಕ್ಷೆಯ ಭಾವದಿಂದ ಅವಳು ನೋಡುತ್ತಿದ್ದಳು. ಅವಳ ಆ ಅವಸ್ಥೆಯನ್ನು ನೋಡಿ ಗಣಪತರಾಯರಿಗೆ ಕಸಿವಿಸಿಯಾಯ್ತು. ಗಣಪತರಾಯರು ಹಣಿಕಿಕ್ಕಿದ ಹೊತ್ತಿನಲ್ಲೇ ತೀರ ಸೋತು ಹೋದ ಧ್ವನಿಯಲ್ಲಿ "ಅವರು ಬಂದರೇ? "ಎಂದು ಕರುಣಾ ಕೇಳಿದಳು.

ತಮ್ಮನ್ನು ಗುರುತಿಸಲಾರದಷ್ಟು ಅವಳ ಬುದ್ಧಿ, ಮನಸ್ಸು ಜರ್ಜರಿತವಾದುದನ್ನು ನೋಡಿ ಅವರಿಗೆ ಹೆಚ್ಚಿನ ಗಾಬರಿಯಾಯ್ತು. ಸಾವಕಾಶವಾಗಿ ಒಳಗೆ ಬಂದು ಅವಳ ಬದಿಗೆ ಕುಳಿತುಕೊಂಡರು. ಕುತ್ತಿಗೆಯ ವರೆಗೆ ಹೊದಿಸಿ ಅತ್ಯಂತ ಅಂತಃಕರಣದಿಂದ "ಕರುಣಾ, ಬಂದಿದ್ದೇನೆ, ನೋಡು!"ಎಂದು ಹೇಳುವಾಗ ಗಂಟಲು ಕಟ್ಟಿತು.

ಕರುಣಾ ಬಹು ಪ್ರಯಾಸದಿಂದ ಗಣಪತರಾಯರನ್ನೊಮ್ಮೆ ನೋಡಿದಳು. ಕಣ್ಣಾಲೆಗಳು ತುಂಬಿ ನಿಂತವು. ನಿರಾಶೆಯ ಉಸಿರನ್ನೆಳೆದು ಮತ್ತೆ ಮುಖ ತಿರುವಿದಳು.

ಗಣಪತರಾಯರಿಗೆ ಅರ್ಥವೇ ಆಗಲಿಲ್ಲ. ಮೈ ಮುಟ್ಟಿ ನೋಡಿದರು. ಇನ್ನೂ ಬಿಸಿಯಾಗಿತ್ತು. "ನಿನಗೇನಾಗುತ್ತಿದೆ ಹೇಳು ಕರುಣಾ? ನಾನು ಬಂದಿದ್ದೇನೆ ನೋಡು." ಮತ್ತೊಮ್ಮೆ ಅಂಗಲಾಚಿದರು.

"ಮಾಮಾ...."ಎಂದು ಹಸುಗೂಸಿನಂತೆ ಅಳಹತ್ತಿದಳು.

"ಮಾ-ಮಾ-ಅವರು ಬರಲಿಲ್ಲವೇ ? ಬರಲಾರರು! " ಉದಾಸೀನವಾಗಿ ಉಸಿರ್ಗರೆದಳು.

ಬಾಗಿಲ ಮರೆಯಲ್ಲಿ ಅರುಣಾ ನಿಂತಿದ್ದಳು. ಮಾಲತಿಯೂ ಜೊತೆಗಿದ್ದಳು.

ಕರುಣಳ ಮಾತು ಕೇಳಿದಾಗ ವಿಚಿತ್ರವೆನಿಸಿತು ಗಣಪತರಾಯರಿಗೆ. 'ಅವರು' ಯಾರು? ಎಂದು ಮತ್ತೆ ಯೋಚಿಸಿ ಚಕಿತರಾದರು.

ಇದು ಮಾನಸಿಕ ರೋಗವಿರಬೇಕು; ಇದಕ್ಕೆ ದೊಡ್ಡ ಹಿನ್ನೆಲೆಯಿರಬೇಕು ಎಂದು ತರ್ಕಿಸಿ ಹೆಂಡತಿಗೇನಾದರೂ ಗೊತ್ತಿದೆಯೋ ಹೇಗೆಂಬುದನ್ನು ತಿಳಿದು ಕೊಳ್ಳಲು ಹೊರಗೆ ಬಂದರು.

ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳುತ್ತಿದ್ದಳು ಅರುಣಾ. ಅವಳಿಗೂ ಅದೇ ಯೊಚನೆ ಹೊಳೆದಿತ್ತು.

ಹೆಂಡತಿಯ ಮುಖ ನೋಡುತ್ತ "ಕೇಳಿದೆಯಾ ಅವಳೆಂದುದನ್ನು?" ಎಂದರು ಗಣಪತರಾಯರು.

"ಕೇಳಿದೆ." ಸಾವಕಾಶವಾಗಿ ಉತ್ತರಿಸಿ "ಇಲ್ಲಿ ಬರ್‍ರಿ." ಎಂದು ಅಡಿಗೆ ಮನೆಯ ಕಡೆಗೆ ಹೋದಳು. ಗಣಪತರಾಯರೂ ಹಿಂಬಾಲಿಸಿದರು.

ಈ "ಅವರು" ಒಡೆಯದ ಒಗಟಾಗಿತ್ತು ಅವರಿಗೆ. ಅದನ್ನೊಂದು ತಿಳಿದು ಕೊಂಡರೆ ಸುಲಭವಾಗಿ ದಾರಿ ಸಿಕ್ಕಬಹುದೆಂದು ಗಣಪತರಾಯರ ವಿಚಾರ.

ಮಾಲತಿಗೆ ಮಾತ್ರ 'ಅವರು' ಯಾರೆಂಬುದು ಹೊಳೆದಿತ್ತು. ತಿಳಿಸಿ ಬಿಡಲೇ ಎಂದು ಅವಳು ಯೋಚಿಸಿ, ಅವರತ್ತ ಹೋಗಿ "ಅರುಣಕ್ಕಾ!" ಎಂದು ಕರೆದಳು.

"ಏನು ಮಾಲತೀ?" ಅರುಣಾ ತಿರುಗಿ ಕೇಳಿದಳು.

"ಇಲ್ಲಿ ಸ್ವಲ್ಪ ಬರುವಿರಾ?"

"ಏನು ಹೇಳು ಸಂಕೋಚವೇಕೆ?" ಎಂದು ಗಣಪತರಾಯರೇ ಅಂದರು.

ಧೈರ್ಯಮಾಡಿ ಮಾಲತಿ ನಡೆದಿದ್ದ ಸಂಗತಿಯನ್ನೆಲ್ಲ ಹೇಳಿದಳು. ಆ ದಿನ ಸಂಜೆಯ ಮುಂದೆ ಮಾಳಿಗೆಯಲ್ಲಿ ಕುಳಿತಾಗ ಕರುಣಾ ಹೇಳಿದುದರ ವಿವರ ವನ್ನೆಲ್ಲ ತಿಳಿಸಿದಳು. ಅದನ್ನು ಕೇಳಿದ ಮೇಲೆ ಗಣಪತರಾಯರಿಗೆ ಏನೋ ಹೊಳೆ ದಂತಾಗಿ ಈಗಿದ್ದ ಚಿಂತೆಯ ಭಾರ ಅರ್ಧ ಇಳಿದಂತಾಯ್ತು. "ಹುಚ್ಚುಹುಡಿಗೆ! ಅಕ್ಕನೆದುರು ಇಷ್ಟು ಮೊದಲೆ ಹೇಳಿಬಿಟ್ಟಿದ್ದರಾಗುತ್ತಿರಲಿಲ್ಲವೇ?" ಎಂದರು.

ಅರುಣಳಿಗೆ ಇದೆಲ್ಲ ಮಾಯಾಲೋಕದಂತೆ ಕಂಡಿತು. ಇಷ್ಟು ದಿನಗಳ ವರೆಗೆ ಕರುಣಳು ವಿಚಿತ್ರವಾಗಿ ನಡೆದುಕೊಳ್ಳುತ್ತಿರುವದರ ಅರ್ಥವಾಯಿತು. ಒಂದೊಂದೇ ಸಂಗತಿಗಳು ನೆನಪಾದವು. "ಓ! ಅದಕ್ಕೇ ಹೀಗೆ ಇರುತ್ತಿದ್ದಳೇ!"

ಎಂದು ಕಾರ್ಯಕಾರಣ ಸಂಬಂಧ ತರ್ಕಿಸಿದಳು.

"ಇನ್ನು ಮುಂದೇನು ಮಾಡಬೇಕು ?" ಅರುಣಾ ಗಣಪತರಾಯರನ್ನು ಕೇಳಿದಳು.

"ಅರುಣಾ, ಗಾಬರಿಯಾಗಬೇಡ. ಅವರಂತೂ ನಿರ್ಧರಿಸಿಬಿಟ್ಟಂತಿದೆ. ನಾವೂ ಈ ಸಂಬಂಧವನ್ನು ಒಪ್ಪಿಕೊಳ್ಳೋಣ. ನಾನೇ ಹೋಗಿ ಸುಧಾಕರನನ್ನು ಕರೆತರುತ್ತೇನೆ. ಒಂದು ದಿನದಲ್ಲಿ ಎಲ್ಲ ಸರಿಯಾಗುತ್ತದೆ." ಎಂದು ಹೇಳಿ ತಡಮಾಡದೆ ನಡೆದೇಬಿಟ್ಟರು.

ಹೋಗುವಾಗ ಹೆಂಡತಿಗೆ "ಕರುಣಳ ಬಳಿ ಕುಳಿತು ಸಮಾಧಾನ ಹೇಳುತ್ತಿರು" ಎಂದು ಹೇಳಿದರು.

ಮಾಲತಿ ಹೇಳಿದುದನ್ನು ಮತ್ತೆ ಮತ್ತೆ ನೆನೆಯುತ್ತ ಬಾಯಮೇಲೆ ಕೈ ಇಟ್ಟುಕೊಂಡು, "ನನ್ನೆದುರು ಹೇಳಬಾರದಿತ್ತೇ? ನಾನೇನು ಬೇಡವೆನ್ನುತ್ತಿದ್ದೆನೆ ? ಸುಮ್ಮನೆ ತಾನೂ ಕೊರಗಿದಳು; ನಮ್ಮನ್ನೆಲ್ಲ ಗೋಳಿಡಿಸಿದಳು" ಎನ್ನುತ್ತ ಒಳಗೆ ಬಂದು ಮಲಗಿದ ಕರುಣಳ ಬಳಿ ಕುಳಿತಳು.

ಮಾಲತಿಗೆ ಒಳಗೆ ಹೋಗುವ ಧೈರ್ಯವಾಗಲಿಲ್ಲ. "ಕರುಣಾ ನನ್ನನ್ನೆಷ್ಟೇ ದೂರವಿಟ್ಟರೂ ಇಡಲಿ, ನಿಂದಿಸಲಿ, ನಾನದಕ್ಕೆ ಪಾತ್ರಳೇ. ದೈವ ಅವಳ ಬದುಕಿನಲ್ಲಿ ಹುಳಿ ಹಿಂಡದಿರಲಿ!" ಎಂದು ಮನದಲ್ಲಿಯೇ ಅಂದುಕೊಂಡಳು.

ಅರುಣಾ ಹತ್ತಿರ ಕುಳಿತುದರ ಪ್ರಜ್ಞೆ ಕರುಣಳಿಗಿರಲಿಲ್ಲ. ಅವಳ ಕಣ್ಣಿಗೆ ಕಾಣುತ್ತಿದ್ದುದು ಒಂದೇ ದಾರುಣ ಚಿತ್ರ: ಸುಧಾಕರನಿಲ್ಲದ ತನ್ನ ಬದುಕಿನ ಘೋರ ಚಿತ್ರ.

ವಿಚಾರಶಕ್ತಿ, ಸ್ಮರಣೆ, ಪ್ರಜ್ಞೆ ಪೂರ್ತಿಯಾಗಿ ಕುಸಿದಂತಾಗಿದ್ದವು. ಕಲ್ಪಿಸಿದ ರಮ್ಯಭಾವನೆಗಳೆ ಈಗ ಅತೃಪ್ತಗೊಂಡು ಕೆರಳಿ ನಿಂತು, ವಾಸ್ತವದಲ್ಲಿ ಸಂತೃಪ್ತಿಯನ್ನರಸಲು ಹೆಣಗುತ್ತಿದ್ದವು. ಅವಳನ್ನು ಆ ದಿಶೆಯಲ್ಲಿ ನೂಕುತ್ತಿದ್ದವು. ಪೂರ್ತಿಯಾಗಿ ಆ ಸುಪ್ತವಾಗಿದ್ದ ಪ್ರಬಲ ಆಸೆಗಳ ಕೈಗೊಂಬೆಯಾಗಿದ್ದಳು. ಅವು ಸೆಳೆದತ್ತ ಹೋಗುತ್ತಿದ್ದಳು. ಸ್ವಪ್ನ, ವಾಸ್ತವಗಳ ಮಧ್ಯೆ ಅತಿ ಸೂಕ್ಷ್ಮವಾದ ಸೀಮಾರೇಖೆಯಿದ್ದುದರ ಸ್ಪಷ್ಟ ಅರಿವು ಅವಳಿಗೆ ಎಂದೋ ತಪ್ಪಿಹೋಗಿತ್ತು. ಬುದ್ಧಿ ಭ್ರಮಣ ಹೊಂದಿತ್ತು. ಆರೋಗ್ಯ ಕುಸಿದಂತೆ ಭ್ರಾಂತಿ ಪೂರ್ತಿಯಾಗಿ ಅವಳನ್ನು ಕಬಳಿಸಿತು. ಅದೇ ಕೊರಗು, ಅದೇ ನೋವು, ಅದೇ

ಹಂಬಲ, ಅವನನೇ ಪ್ರತೀಕ್ಷೆ... ಇವನ್ನುಳಿದು ಬೇರೆಯಾವುದೂ ಅವಳಿಗೆ ತೋರು ತ್ತಿರಲಿಲ್ಲ.

ಮತ್ತೆ ಕನವರಿಕೆ ಪ್ರಾರಂಭವಾಯ್ತು:

"...ಎಷ್ಟು ನಿರ್ದಯಿಗಳು ನೀವು....ಬರಲಾರಿರಾ....ನಾನು ಸಾಯು ತ್ತೇನೆ....ಮದುವೆಯಾಗುವಾಗ.......ಎಂತಹ ಅಭಯ........ಅಯ್ಯೋ........ ಬಂದಿರಾ....?"

"ಬರುತ್ತಾರೆ ಕರುಣಾ. ಎಚ್ಚರಾಗು." ಎಂದು ಅಕ್ಕ ಹೇಳಿದಳು.

ಅವಳ ಮಾತು ಕೇಳಿಸಿದಂತೆ ತೋರಲಿಲ್ಲ. ಸಂಕಟದಿಂದ ಹೊರಳಾಡು ತ್ತಿದ್ದಳು. ಅದೇನೇನೋ ಬಡಬಡಿಸುತ್ತಿದ್ದಳು.

* * *

ಗಣಪತರಾಯರು ಹಾಸ್ಟೆಲಿನ ಬಾಗಿಲಿಗೆ ಬಂದಾಗ ಒಳಗಿನ ಗಡಿಯಾರ ಒಂಬತ್ತು ಹೊಡೆಯಿತು. ಬೇಗನೆ ಹೆಜ್ಜೆಹಾಕುತ್ತ ಮಾಧವನ ಕೋಣೆಗೆ ಬಂದು ಅವರು ಬಾಗಿಲು ತಟ್ಟಿದರು. ಒಳಗಿನಿಂದ "ಯಾರು ?" ಎಂದು ಕೇಳಬಂದಿತು.

"ನಾನು ಗಣಪತರಾವ್."ಎಂದು ಹೇಳುವದರಲ್ಲಿಯೇ ಬಾಗಿಲು ತೆರೆಯಿತು.

ಆಕಸ್ಮಿಕವಾಗಿ ಬಂದ ಅವರನ್ನು ನೋಡಿ ಮಾಧವ ಗಾಬರಿಯಾಗದಿದ್ದರೂ, "ಇದೇನು, ಸವಾರಿ ಈ ಕಡೆಗೆ ಬಂದಿತು ? "ಎಂದು ಆಶ್ಚರ್ಯದಿಂದ ಕೇಳಿದ.

ಒಳಗೆ ಬಂದು ಕುರ್ಚಿಯ ಮೇಲೆ ಕುಳಿತು ಒಂದು ಕ್ಷಣ ಮೌನವಾಗಿದ್ದು, ಸುತ್ತಲೂ ಒಮ್ಮೆ ದೃಷ್ಟಿ ಹಾಯಿಸಿದರು. ನಂತರ "ಆಕಸ್ಮಿಕವೇನಲ್ಲ ಒಂದು ಮಹತ್ವದ ವಿಷಯದ ಆಲೋಚನೆಗಾಗಿ ಬಂದಿದ್ದೇನೆ."ಎಂದು ಮತ್ತೆ ತುಸು ವಿಚಾರಿಸಿ "ಸುಧಾಕರ ಇದ್ದಾರೆಯೋ ರೂಮಿನಲ್ಲಿ ? "ಎಂದು ಕೇಳಿದರು.

"ಇದ್ದಾನೆ. ಯಾಕೆ ? ಕರೆದುಕೊಂಡು ಬರಲಾ ?"

"ಈಗಲೇ ಬೇಡ....ಈಗ....ಮೊದಲು..." ಎನ್ನುತ್ತ ನಡೆದುದನ್ನೆಲ್ಲ ಸೂಕ್ಷ್ಮವಾಗಿ ವಿವರಿಸಿದರು.

ಅದನ್ನು ಕೇಳಿ ಮಾಧವ ಗೊಂದಲದಲ್ಲಿ ಸಿಲುಕಿದ. ನಂಬದಾದ. ಆದರೂ ನಂಬದಂತಿರಲಿಲ್ಲ. "ಆತ ಹೀಗೆ ಎಂದೂ ಮಾಡಿರಲಾರ ಗಣಪತರಾವ್!" ಎಂದು ಉದ್ಗಾರ ತೆಗೆದ.

"ಆದುದನ್ನು ನೀತಿಯ ಒರೆಗೆ ಹಚ್ಚಿ, ತಪ್ಪು ಸರಿಯೆಂದು ತೀರ್ಮಾನಿ

ಸುವ ಪ್ರಶ್ನೆಯಲ್ಲ ಇದು. ಹೇಗೋ ನಡೆದುಹೋಗಿದೆ. ಕಾರಣ ಏನೇ ಇರಲಿ, ಇಬ್ಬರೂ ಪೂರ್ಣ ತಿಳುವಳಿಕೆಯಿಂದಲೇ ಈ ವಿಷಯದಲ್ಲಿ ಕಾಲಿರಿಸಿದ್ದಾರೆಂದೇ ನನ್ನ ಭಾವನೆ. ಈಗ ನಾನು ಯಾರ ಮೇಲೂ ಸಿಟ್ಟಾಗಿಲ್ಲ. ಸುಧಾಕರನಿಗೂ ಅಪವಾದ ಕೊಡಲಾರೆ. ಹೊಸ ವಿಚಾರ, ರೀತಿಗಳಿಗೆ ನಾವೂ ಮನ್ನಣೆ ಕೊಡಬೇಕಲ್ಲವೇ ? ಆದಷ್ಟು ಬೇಗನೆ ಮದುವೆ ಮಾಡಿಬಿಡಬೇಕೆಂದು ನನ್ನ ಯೋಚನೆ. ಇಲ್ಲವಾದರೆ ಕರುಣಳ ಸ್ಥಿತಿ ಇನ್ನೂ ಹದಗೆಡುವದೆಂಬ ಭಯ ನನಗಿದೆ...."

"ಆದರೆ ಸುಧಾಕರ...." ಎಂದು ಮಾಧವ ಹೇಳಬೇಕೆನ್ನುವದರಲ್ಲಿಯೇ ಗಣಪತರಾಯರು "ಸುಧಾಕರನ ಮನೆತನ, ಆಸ್ತಿ, ಇನ್ನೆಲ್ಲ ವಿಚಾರಗಳ ಪ್ರಶ್ನೆ ಇಲ್ಲೇ ಇಲ್ಲ. ಪರಸ್ಪರರು ಒಲಿದು ಬಯಸುತ್ತಿದ್ದಾರೆ, ಆಯ್ತು. ಅವರ ಭವಿಷ್ಯಕ್ಕೆ, ಸುಖಕ್ಕೆ ನಾವು ಆತಂಕವಾಗುವದು ತಪ್ಪು. ಈಗ ಅವರನ್ನು ಕರೆದುಕೊಂಡು ಬಾ. ಸ್ಪಷ್ಟವಾಗಿ ಮಾತನಾಡಿಕೊಳ್ಳೋಣ. ಅಂದರೆ ಮುಂದಿನ ದಾರಿ ಸುಲಭವಾಗುವದು."

ಮಾಧವ ಎಷ್ಟು ಅನುಮಾನಿಸಿದರೂ ಕೇಳದೆ ಅವನು ಸುಧಾಕರನನ್ನು ಕರೆತರುವಂತೆ ಒತ್ತಾಯಮಾಡಿದರು. ನಿರ್ವಾಹವಿಲ್ಲದೆ ಮಾಧವ ಹೋಗಿ ಸುಧಾಕರನೊಂದಿಗೆ ಕೋಣೆಗೆ ತಿರುಗಿ ಬಂದ.

"ಬರ್ರಿ, ಸುಧಾಕರ...." ಎಂದು ಗಣಪತರಾಯರೇ ಉಪಚರಿಸಿದರು.

ಪೂರ್ವಭಾವಿಯಾಗಿ ನಡೆದ ಮಾತುಕತೆಗಳು ಸುಧಾಕರನಿಗೆ ಗೊತ್ತಿರಲಿಲ್ಲ. ಉಳಿದವರಿಬ್ಬರೂ ಕೆಲ ನಿಮಿಷ ಮಾತನಾಡದೆ ಕುಳಿತುಬಿಟ್ಟರು. ಯಾರು ಮಾತಿಗೆ ಮೊದಲು ಮಾಡಬೇಕು ? ಗಣಪತರಾಯರು ಮನದಲ್ಲಿಯೇ ತೂಗಿ ನೋಡಿ ಆಲೋಚಿಸಿ ಬಹಳ ತೂಕವಾದ ಧ್ವನಿಯಲ್ಲಿ "ಸುಧಾಕರ, ಕರುಣಳ ವಿಷಯವಾಗಿ ನಾನಿಲ್ಲಿಗೆ ಬಂದಿದ್ದೇನೆ. ನಡೆದ ಘಟನೆ ಮದುವೆಯಲ್ಲಿ ಕೊನೆಗೊಂಡು ನಮಗೆಲ್ಲರಿಗೂ ಸಂತೋಷವನ್ನೀಯಬೇಕೆಂಬುದೆ ನನ್ನ ಬಯಕೆ. ನಡೆದುದರಲ್ಲಿ ತಪ್ಪಿಲ್ಲ, ದೋಷವಿಲ್ಲ.." ಎನ್ನುತ್ತ ಆತನ ಮುಖ ನೋಡಹತ್ತಿದರು.

ಸುಧಾಕರನಿಗೆ ಅವರ ಮಾತಿನ ತಲೆ ಬಾಲ ಯಾವುದೂ ತಿಳಿಯುವಂತಿರಲಿಲ್ಲ. ಅವನು ಸ್ಪಷ್ಟವಾಗಿ "ಕ್ಷಮಿಸಬೇಕು. ನೀವು ನನ್ನನ್ನು ತಪ್ಪಾಗಿ ತಿಳಿದಿದ್ದೀರಿ...."

"ಈಗ ತಪ್ಪು ಒಪ್ಪಿನ ಮಾತು ಬಂದಿಲ್ಲ ಸುಧಾಕರ. ಮದುವೆಯಾಗ

ಬೇಕೆಂದು ನೀವಿಬ್ಬರೂ ನಿರ್ಧರಿಸಿಕೊಂಡಿದ್ದೀರಿ. ಅದು ಈಗ ನಮಗೆಲ್ಲರಿಗೂ ತಿಳಿಯಿತು. ಅದಕ್ಕಾಗಿ ನೀವು ಚಿಂತಿಸುವದು ಬೇಡ. ನಿಮಗೆ ನಾವು ಯಾರೂ ಅಡ್ಡಿಯಾಗಲಾರೆವು."

ಸುಧಾಕರನಿಗೆ ತಡೆಯುವದಾಗಲಿಲ್ಲ. ಇದು ತನ್ನ ಶೀಲಕ್ಕೇ ಕಲಂಕ ಹತ್ತುವ ಮಾತೆಂದು ಬಗೆದ. "ನಿಮ್ಮ ಹುಡಿಗೆಯನ್ನು ನಾನು ಮದುವೆಯಾಗ ಬಯಸಿಲ್ಲ!" ಎಂದು ಬಿರುಸಾಗಿಯೆ ಹೇಳಿದ.

ಗಣಪತರಾಯರಿಗೆ ಶಿವಿದಂತಾಯ್ತು. ಮಾಧವ ಇವರನ್ನು ನೋಡುತ್ತ ತೆಪ್ಪಗೆ ಕುಳಿತುಬಿಟ್ಟಿದ್ದ.

"ಇದು ನಿಮ್ಮಂತಹ ಪ್ರಾಜ್ಞರು ಆಡುವ ಮಾತಲ್ಲ ಸುಧಾಕರ! ಈಗ ಅವಳನ್ನು ನೀವು ವಂಚಿಸಬಾರದು!" ಮಾತಿನಲ್ಲಿ ಪೊನೆಯಿತ್ತು, ಶಿವಿತವಿತ್ತು. ಸುಧಾಕರನಂತಹ ಸೌಮ್ಯನಿಗೂ ತಡೆಯದಾಯ್ತು.

"ಅವಳೇ ನನ್ನನ್ನು ವಂಚಿಸಿದ್ದಾಳೆ. ನಾನೇನು ಅವಳಿಗೆ ಪತ್ರ ಬರೆದಿರ ಲಿಲ್ಲ. ನಿಮಗೆ ಹೇಗೆ ತಿಳಿಯಬೇಕು ನಾನು ಅನುಭವಿಸಿರುವ ಅಪಮಾನ? ನನ್ನನ್ನು ಕಂಡು ಚುಚ್ಚಿ ಮಾತನಾಡುವ ಕಾಲೇಜ ಹುಡುಗರೆದುರು ಮುಖ ಎತ್ತಿ ತಿರುಗದಂತಾಗಿದ್ದೇನೆ. ನಾಳೆ ಬೀದಿಯ ಮೇಲೆ ನನ್ನ ಹೆಸರು ಬಂದರೆ ಆಗೇನು ಮಾಡುವಿರಿ?"

"ಒಬ್ಬಿಬ್ಬರು ಕಿಡಿಗೇಡಿಗಳು ಆಡಿದ ಮಾತಿಗಾಗಿ ನೊಂದುಕೊಂಡು ಅವಳನ್ನು ಉಪೇಕ್ಷಿಸಬೇಡಿರಿ. ಅವಳದೇನು ದೋಷವಿದೆ ಇದರಲ್ಲಿ? ಮದುವೆ ಯಾಗುವ ಮನಸ್ಸಿಲ್ಲದಿದ್ದರೆ ಮೊದಲೇ ನೀವು ಸ್ನೇಹಕ್ಕೆ ಅವಕಾಶ ಕಲ್ಪಿಸಬಾರ ದಿತ್ತು...." ಎಂದು ಉರಿಯಾಡಿದರು ಗಣಪತರಾಯರು.

ಸುಧಾಕರ ಹೆಚ್ಚೇನು ಮಾತನಾಡದೆ ಒಮ್ಮೆಲೆ ಎದ್ದು ತನ್ನ ಕೋಣೆಗೆ ಹೋಗಿ ಆ ಮೂರೂ ಪತ್ರಗಳನ್ನು ತಂದು ಗಣಪತರಾಯರೆದುರಿಗಿಟ್ಟು "ದಯ ವಿಟ್ಟು ಇವೆಲ್ಲ ಕಾಗದಗಳನ್ನು ಓದಬೇಕು ತಾವು." ಎಂದು ಹೇಳಿದ.

ಸುಧಾಕರನ ಮಾತಿನಲ್ಲಿಯ ಆವೇಗ ನೋಡಿ ರಾಯರು ಬೆಪ್ಪಾದರು. ತಾವು ಭಾವಿಸಿದಂತೆ ಆಗಿರದೆ ಮತ್ತೇನಾದರೂ ಬೇರೆ ದಾರಿಯಲ್ಲಿ ಸಾಗುತ್ತಿ ದೆಯೋ ಈ ವಿಷಯ? ಎಂದುಕೊಂಡರು. ಪತ್ರವನ್ನು ಕೈಗೆತ್ತಿಕೊಳ್ಳುವ ಮುನ್ನ ಸುಧಾಕರನ ವಿಷಯವಾಗಿ ಹಲವಾರು ವಿಚಾರಗಳು ಅವರ ತಲೆಯಲ್ಲಿ

ಮಿಂಚಿದನು.

...."ಆತ ಪೋಸಗಾರನೇ ? "

...."ಪ್ರಸಂಗ ಮೈಮೇಲೆ ಬಂದುದಕ್ಕೆ ಹೀಗೆ ನುಸುಳುತ್ತಿರಬಹುದೇ? "

...."ಕರುಣಾಳ ಸ್ನೇಹಕ್ಕಿಂತ ಮೊದಲು ಅನೇಕ ಹುಡಿಗೆಯರ...."

ಆದರೆ ಎದುರಿಗಿದ್ದ ಪತ್ರಗಳತ್ತ ನೋಡಿದಾಗ ಮೊದಲಿನ ಸಂದೇಹಗಳಿಗೆ ಆಸ್ಪದ ದೊರೆಯಲಿಲ್ಲ.

ಮಾಧವ ತನ್ನ ಪ್ರಸಂಗಾವಧಾನ ತಪ್ಪಿ ಅತ್ತಿತ್ತ ಅಡ್ಡಾಡಹತ್ತಿದ. ಸುಧಾಕರ ಕೈಕಟ್ಟಿಕೊಂಡು ಗಟ್ಟಿಯಾಗಿ ನಿಂತುಬಿಟ್ಟ.

ಗಣಪತರಾಯರು ಮೊದಲಿನ ಎರಡು ಅನಾಮಧೇಯ ಕಾಗದಗಳನ್ನು ಓದಿಕೊಂಡರು. ಉತ್ಕಟ ಪ್ರಣಯಭಾವ, ಮನದ ಹಂಬಲಗಳು ಕಾವ್ಯಮಯವಾಗಿ ತುಂಬಿ ನಿಂತಿದ್ದವು ಪತ್ರಗಳೆರಡರಲ್ಲೂ. ಮೂರನೆಯ ದೀರ್ಘ ಕಾಗದವನ್ನೆತ್ತಿಕೊಂಡರು.

"ಜೀವಸಖ ಸುಧಾಕರ,

....ಎಂತಹ ಲಜ್ಜೆಗೆಟ್ಟ ಹೆಣ್ಣು ಎಂದುಕೊಳ್ಳುವಿರಾ ?... ಹೀಗೆ ಒಲಿದು ಬಂದವಳನ್ನು ಪೀಡಿಸುವದರಲ್ಲಿ ಯಾವ ಸುಖವಿದೆಯೋ ನಿಮಗೆ! ನನ್ನ ಹೃದಯದ ಹಂಬಲು ನಿಮಗೆ ಅರ್ಥವಾಗುವದಿಲ್ಲವೇ ? ಮೋಸಗಾರ್ತಿ ಇರಬೇಕೆಂಬ ಸಂದೇಹವೇ ನಿಮಗೆ ? ಈ ಸಲ ಧೈರ್ಯದಿಂದ ನನ್ನ ಹೆಸರನ್ನು ಬರೆದಿದ್ದೇನೆ.

ನನ್ನ ಮೊದಲಿನ ಎರಡೂ ಕಾಗದಗಳಿಗೆ ಸರಿಹೊಂದುವಂತೆ ವರ್ತಿಸಿದಿರಿ. ನಿಮಗಾಗಿ ಕಾಯ್ದು ಕಾಯ್ದು ಹಿಂತಿರುಗಿದೆ ಎರಡೂ ಸಲ. ಬರಲಿಲ್ಲವೇಕೆ ? ಇಷ್ಟು ನಿರ್ದಯರಿರುವಿರೆಂದು ನಾನು ಭಾವಿಸಿರಲಿಲ್ಲ.

ಅದು ಹೇಗೋ ನನ್ನ ಮಾನಸಮೂರ್ತಿಯಾಗಿ ಬೆಳೆದಿದ್ದೀರಿ. ನನ್ನ ಆಸೆಯನ್ನು, ಬಯಕೆಯನ್ನು, ಪ್ರೇಮವನ್ನು ಮಣ್ಣಲ್ಲಿ ಹೂಳಬೇಡಿರಿ. ನಿತ್ಯ ನಿಮಗಾಗಿ ನವೆಯುತ್ತಲಿದ್ದೇನೆ.

ನನಗೀಗ ಮೈಯಲ್ಲಿ ಜ್ವರ. ಹೇಗಾಗಿರಬೇಕು ನನ್ನ ಮನಸ್ಥಿತಿ ? ನೀವಿಲ್ಲದ ಬದುಕು ನನಗೆ ನಿತ್ಯ ಸಾವು. ನಾನದನ್ನು ಸಹಿಸಲಾರೆ.

ಈ ಸಲವಾದರೂ ನೀವು ಬರುತ್ತೀರೆಂದು ಭರವಸೆ ತಾಳಬಹುದಲ್ಲವೇ? ಒಂದೇ ಒಂದು ಬಾರಿ ನಿಮ್ಮನ್ನು ಕಂಡು ಹೃದ್ಗತವನ್ನು ಹೇಳಬಯಸುವೆ. ನಾನು ಎಂದೋ ನಿಮ್ಮವಳಾಗಿದ್ದೇನೆ. ನನ್ನ ಒಲವನ್ನು ತಿರಸ್ಕರಿಸಲಾರಿರೆಂದು ವಿಶ್ವಾಸವಿದೆ.

ಭವಿಷ್ಯದ ಹೊಂಗನಸನ್ನು ನುಚ್ಚುನೂರು ಮಾಡಬೇಡಿರಿ. ನಿಮ್ಮನ್ನೊಂದು

ಬಾರಿ ನೋಡಬಯಸಿದೆ ಈ ಜೀವ. ನಿಮ್ಮ ಎದೆಗೊರಗಿ ಪ್ರಾಣ ಬಿಡಬೇಕೆಂದಿದ್ದೇನೆ. ಈ ಭಾಗ್ಯವನ್ನಾದರೂ ನನ್ನಿಂದ ಕಸಿದುಕೊಳ್ಳಬೇಡಿರಿ.

ನಿಮ್ಮ ಜನ್ಮಾಂತರದ ಗೆಳತಿ
— ಕರುಣಾ

ಪತ್ರವನ್ನು ಓದಿಕೊಂಡು ಗಣಪತರಾಯರ ಹೃದಯ ಕಂಪಿಸಿತು. ಕಣ್ಣು ತೇವಗೊಂಡವು. ಅತ್ಯಂತ ನೊಂದ ದೃಷ್ಟಿಯಿಂದ ಸುಧಾಕರನತ್ತ ಬಂದು, "ನಾನು ತಪ್ಪು ತಿಳಿದಿದ್ದೆ. ದಯವಿಟ್ಟು ಕ್ಷಮಿಸಿರಿ." ಎಂದು ದೈನ್ಯದಿಂದ ಯಾಚಿಸಿದರು.

ಅವರ ಪಶ್ಚಾತ್ತಾಪದಗ್ಧ ನುಡಿ ಸುಧಾಕರನ ಕೋಪವನ್ನು ಕರಗಿಸಿತು. ಆತ ಮಾತನಾಡದಂತಾದ.

"ಒಂದೇ ಒಂದು ಪ್ರಾರ್ಥನೆ ನಿಮ್ಮಲ್ಲಿ, ಸುಧಾಕರ. ನೀವು ಈಗ ಅವಳನ್ನು ಕಾಣದಿದ್ದರೆ ಅವಳು ಬದುಕುವ ಭರವಸೆಯಿಲ್ಲ."

ಅಂತರಂಗದಲ್ಲಿ ಬಹಳ ಹೊಯ್ದಾಡಿದ ಸುಧಾಕರ. ಯಾವ ನಿರ್ಣಯಕ್ಕೂ ಬಾರದೆ ಅಸಹಾಯನಾಗಿ "ಈ ಸ್ಥಿತಿಯಲ್ಲಿ ನಾನು ಹೇಗೆ ಬರಲಿ?" ಎಂದು ಅವರನ್ನೇ ಕೇಳಿದ.

"ನಿಮ್ಮ ಭಯ ನನಗೆ ಅರ್ಥವಾಗುತ್ತದೆ. ನನಗೇನೂ ಹೆಚ್ಚಿಗೆ ಹೇಳಲು ಬಾರದು. ನೀವು ಬರುವದರಿಂದ ಮುಂದೆ ನಿಮಗೆ ಯಾವ ಗಂಡಾಂತರ, ಇಲ್ಲವೆ ಒತ್ತಾಯದ ಸ್ಥಿತಿ ಬರಲಾರದೆಂದು ಅಭಯ ಕೊಡುತ್ತೇನೆ. ಈಗ ಅವಳು ಹಾಸಿಗೆ ಹಿಡಿದಿದ್ದಾಳೆ. ನಿನ್ನೆಯಿಂದ ಔಷಧಿ ಕುಡಿದಿಲ್ಲ, ಚಹ ಮುಟ್ಟಿಲ್ಲ, ಯಾರೊಡನೆಯೂ ಮಾತನಾಡಿಲ್ಲ………" ಗಣಪತರಾಯರಿಗೆ ಹೇಳಹೇಳುತ್ತ ದುಃಖ ತಡೆಯದಾಯ್ತು. ಕರವಸ್ತ್ರ ಕಣ್ಣಿಗೊತ್ತಿಕೊಂಡರು. ಕೊನೆಗೆ "ಅವಳೇ ತಂದು ಕೊಂಡ ರೋಗ, ಒಪ್ಪುತ್ತೇನೆ. ಆದರೆ ಅವಳನ್ನುಳಿಸುವದು ನಿಮ್ಮನ್ನು ಕೂಡಿದೆ. ಹೆಚ್ಚು ಹೇಳಲಾರೆ. ನಿಮಗೆ ಸರಿಕಂಡಂತೆ ಮಾಡಿರಿ." ಎಂದು ಹೇಳಿ ತಲೆ ಹಿಡಿದುಕೊಂಡು ಕುಳಿತುಬಿಟ್ಟರು.

ಇಲ್ಲಿಯವರೆಗೆ ಸುಮ್ಮನೆ ತಿರುಗುತ್ತಿದ್ದ ಮಾಧವ ಮುಂದೆ ಬಂದು "ಸುಧಾಕರ, ಪರಿಸ್ಥಿತಿ ಬಹಳ ಸೂಕ್ಷ್ಮವಿದೆ. ನಡೆದುದರ ಯುಕ್ತಾಯುಕ್ತತೆಗಳನ್ನು ಯೋಚಿಸುವದಕ್ಕೆ ಇದು ಸಮಯವಲ್ಲ. ನೀನು ಹೋಗುವದರಿಂದ

ಒಂದು ಜೀವ ಬದುಕುತ್ತದೆ. ದಯವಿಟ್ಟು ನನಗಾಗಿ ನೀನು ಹೋಗಿ ಬಾ." ಎಂದು ಹೇಳಿ ದಾರಿ ತೋರಿಸಿಕೊಟ್ಟ.

ಸುಧಾಕರನಿಗೆ ಯಾವುದೂ ತೋಚದಾಯ್ತು. ಕರುಣಳ ದಾರುಣ ಸ್ಥಿತಿ ಕೇಳಿ ಅವಳ ಬಗೆಗೆ ಅನುಕಂಪ, ಮರುಕಗಳು ಸ್ಫುರಿಸಿದವು ಸಹಜವಾಗಿ.

ಮಾತುಗಳು ಹೊರಲಾರದಷ್ಟು ಭಾರವಾಗಿದ್ದವು ಮೂವರ ಮನದ ಭಾವನೆಗಳು.

ಮೂವರೂ ಹೊರಟರು.

ಅರುಣಾ ಚಡಪಡಿಸುತ್ತ ಬಾಗಿಲಲ್ಲಿ ನಿಂತಿದ್ದಳು. ಅವರು ಬಂದುದನ್ನು ನೋಡಿ ಸಮಾಧಾನ ತಾಳಿದಳು. ಒಳಗೆ ಕಾಲಿರಿಸಿದರು. ಯಾರೂ ಮಾತನಾಡಲಿಲ್ಲ. ಕರುಣಳ ಕೋಣೆಯತ್ತ ಕೈ ಮಾಡಿ "ಅಲ್ಲಿ ಮಲಗಿದ್ದಾಳೆ ನೋಡಿರಿ." ಎಂದು ಹೇಳಿದರು ಗಣಪತರಾಯರು.

ಅರುಣಾ ವಿಹ್ವಲಳಾಗಿ ಅಡುಗೆಮನೆಯ ಬಾಗಿಲಿಗೆ ನಿಂತಳು ಮಾಧವನ ಜೊತೆಗೆ ಅಲ್ಲಿಯೇ ಕುಳಿತುಕೊಂಡರು ಗಣಪತರಾಯರು.

ಸುಧಾಕರ ಸಾವಕಾಶವಾಗಿ ಕೋಣೆಯತ್ತ ನಡೆದ. ನಿಗೂಢ ಮೌನ ಮನೆಯನ್ನಾವರಿಸಿತ್ತು. ಹೊಸ್ತಿಲೊಳಗೆ ಕಾಲಿರಿಸಿದ.

ಎದುರಿಗೆ ಮಂಚದ ಮೇಲೆ ಕೃಶಳಾಗಿ ಮಲಗಿದ್ದಳು ಕರುಣಾ. ಮುಖದ ಚೆಂಗುಲಾಬಿಯ ಬಣ್ಣವೆಲ್ಲ ಹೀರಿಹೋಗಿತ್ತು. ಅಂದು, ಮೊದಲು ಬಾರಿ ನೋಡಿದಾಗಿನ ಕರುಣಾ ಈಗ ಉಳಿದಿರಲಿಲ್ಲ. ನಳನಳಿಸುವ ಲತೆ ಮುರುಟಿ ಹೋದಂತಾಗಿದ್ದಳು. ನವೆದು ನವೆದು ಅವಳಂತರಂಗ ಹಿಂಡಿಹೋಗಿತ್ತು. ಆ ಭಾವಪೂರ್ಣ ಕಂಗಳು ನಿಸ್ತೇಜವಾಗಿ ಮುಚ್ಚಿಕೊಂಡಿದ್ದವು.

ತನಗಾಗಿ ಕೊರಗಿದ ಕರುಣಳನ್ನು ನೋಡಿದ ಆತ ಬಂದುದನ್ನು ಅದೆಷ್ಟು ತೀವ್ರವಾಗಿ ಗ್ರಹಿಸಿದಳು ! ಸಾವಕಾಶವಾಗಿ ಕಣ್ತೆರೆದಳು. ಒಂದು ಬಾರಿ ಆತನನ್ನು ನೋಡಿದಳು.

ದುಃಖವಿಲ್ಲ, ಸಂಕಟವಿಲ್ಲ, ಕೋಪವಿಲ್ಲ, ವ್ಯಥೆಯಿಲ್ಲ. ನಿರ್ಭಾವಳಾಗಿ ನೋಡುತ್ತಿದ್ದಳು. ಸುಧಾಕರ ಮುಖ ಕೆಳಗೆ ಹಾಕಿದ.

ಸಾವರಿಸಿಕೊಂಡು ಎದ್ದು ಪ್ರಯಾಸದಿಂದ ದಿಂಬಿಗೊರಗಿ ಕುಳಿತಳು.

"ಮನೆ ಈಗ ನೆನಪಾಯ್ತೇ ?" ಎಂದು ಮೊದಲಿಗೇ ಕೇಳಿದಳು.

ಸುಧಾಕರ ಕಕ್ಕಾವಿಕ್ಕಿಯಾದ. ಅವಳಿಗೇನು ಹೇಳಬೇಕು ? ಗಂಡನೆಂದು ತಿಳಿದೇ ಹೇಳಬೇಕಲ್ಲ ! ಅಭಿನಯಿಸಬೇಕು. ಆದರೆ ತಾನೆಂದೂ ನಾಟಕವಾಡಿಲ್ಲ. ಹೇಗೆ ಬರಬೇಕು ಆ ಇನ್ನೊಬ್ಬರಾಗುವದು ?.... ಆದರೂ ಭ್ರಮೆ ಹೋಗಲಿಕ್ಕೆ ಒಂದೆರಡು ಮಾತು ಆಡಿದರಾಯಿತು.... ಎಂದುಕೊಂಡು ಆತ ಇನ್ನು ಮಾತ ನಾಡುವ ಮೊದಲೇ "ಹೆಂಡತಿ ಸಾಯುತ್ತಿದ್ದಾಳೆಂಬ ಅರಿವು ಇದೆಯೇನು ನಿಮಗೆ?" ಎಂದು ಗದ್ದರಿಸಿದಳು.

ಸುಧಾಕರನಿಗೆ ಓಡಿ ಹೋಗುವಂತಾಯ್ತು.

"ಔಷಧಿ ತರುತ್ತೇನೆಂದು ಹೋದವರು ಎಷ್ಟು ಹೊತ್ತು ಹೋಗಬೇಕದು? ನಾನಿಲ್ಲಿ ಸಾಯುವದರ ಪರಿವೆ ನಿಮಗೇನು ?"

ಜ್ವರದ ತಾಪದಲ್ಲಿ ಉನ್ಮಾದಿತಳಾಗಿ ಮಾತನಾಡುತ್ತಿರುವ ಆ ಕರುಣಳ ವಿಕಾರವಾದ ಮುಖವನ್ನು ನೋಡಿ ಎಲ್ಲಿಯಾದರೂ ಅವಿತುಕೊಳ್ಳಬೇಕೆನಿಸಿತು ಆತನಿಗೆ. ಕಾಲಗತಿಯೇ ನಿಂತಂತೆನಿಸಿತು. ತಿಳಿಯಲಾರದ ಕರಿ ಕತ್ತಲಲ್ಲಿ ಮುಳುಗಿಬಿಟ್ಟಂತೆನಿಸಿತು. ದಾರಿಗುಂಟ ನಡೆಯುತ್ತಿದ್ದವನ ಮುಖಕ್ಕೆ ಪಕ್ಕನೆ ಮುಸುಕು ಹಾಕಿ ಕಾಡಿನಲ್ಲೆಳೆದೊಯ್ದು ಗವಿಯಲ್ಲಿ ಬಿಟ್ಟಂತೆನಿಸಿತು. ಅವಳ ಮಾತು, ಆ ವಿಚಿತ್ರ ನಡತೆಗಳನ್ನು ಅರ್ಥಮಾಡಿಕೊಂಡು "ಹೀಗೇಕಾಗಿದೆ ?" ಎಂದು ವಿಚಾರಿಸಲು ಒಮ್ಮೆ ಪ್ರಯತ್ನಿಸಿದ. ಆದರೆ ಆತನ ಮಿದುಳು ಯಾವದೊ ಆಮ್ಲದಲ್ಲಿ ಕರಗಿ ಹೋದಂತೆನಿಸಿತು. ತನ್ನ ತಲೆಯನ್ನೇ ಮುಟ್ಟಿ ನೋಡಿ ಕೊಂಡ.

ಅವಳನ್ನು ನೋಡುವ ಸಾಹಸ ಮಾಡಲಿಲ್ಲ ಸುಧಾಕರ. ಅದು ಪರಿಸ್ಥಿತಿ ಯನ್ನು, ಪ್ರಶ್ನೆಯನ್ನು, ವಿವೇಚಿಸಿ ನೋಡುವ ಸಮಯವಾಗಿರಲಿಲ್ಲ. ಆ ಪ್ರಶ್ನೆ ಗುಂಜುಗುಂಜಾಗಿ ತೊಡಕಿದ ದೊಡ್ಡ ದಾರದ ಉಂಡೆಯಂತಿತ್ತು. ಗಾಳಿಪಟ ವನ್ನು ಮಾಡುವ ಆತುರದಲ್ಲಿ ಎಳೆಮಕ್ಕಳು ಬಂದು, ಆ ದಾರದ ತುದಿ ಸಿಕ್ಕದೆ ಸಿಕ್ಕಲ್ಲಿ ಕತ್ತರಿಸಿ ತಮಗೆ ಬೇಕಾದಷ್ಟು ದಾರವನ್ನು ತೆಗೆದುಕೊಂಡು ಹೋಗುವ ದಿಲ್ಲವೆ? ಕೊನೆಗೆ ಆ ದಾರದ ಉಂಡಿಗೆ ಎಣಿಕೆಯಿಲ್ಲದಷ್ಟು ತುದಿ-ಮೊದಲು ಗಳಾಗಿ ಬಿಡಿಸಲು ಮತ್ತೂ ಅಸಾಧ್ಯವಾಗುತ್ತದೆ. ಹಾಗೆ ಆಯಿತು ಈ ಪ್ರಶ್ನೆಯ ತೊಡಕನ್ನು ಬಿಡಿಸುವ ಪ್ರಯತ್ನ. ಒಂದೇ ಕಾಲಕ್ಕೆ ಅಸಂಖ್ಯ ಬಾಣಗಳು ಬಂದು ಎದೆಯನ್ನು ಸಿಗಿದುಬಿಟ್ಟಂತೆ ಗಾಸಿಗೊಂಡಿತು ಆತನ ಮನಸ್ಸು.

ನಿಮಿಷಾರ್ಧದಲ್ಲಿ ಹಿಂದಿನ ವಿಚಾರಗಳೆಲ್ಲ ಸುಳಿದು ಹೋದವು ವೇಗವಾಗಿ ಒಂದರ ಹಿಂದೊಂದು ಓಡುವ ಮಿಲಿಟರಿ ವಾಹನಗಳಂತೆ.

ಮೊದಲ ಕಾಗದ ನೋಡಿದಾಗ,—

"ಯಾರೋ ಕುಚೇಷ್ಟೆ ಮಾಡುತ್ತಿರಬಹುದೆ"ಂದು ಉಪೇಕ್ಷಿಸಿದ್ದ. ಆದರೂ ಆ ದಿನ ಸಾಯಂಕಾಲ ಒಬ್ಬನೆ ಅಸಮಾಧಾನದಿಂದ ಅತ್ತಿತ್ತ ತಿರುಗಾಡಿದ್ದ !

ಎರಡನೆಯ ಕಾಗದವನ್ನೋದಿದಾಗ,—

"ಯಾವಳೋ ಹುಚ್ಚು ಹೊಸದಾಗಿ ಶಹರಕ್ಕೆ ಬಂದಂತಿದೆ. ಪ್ರಣಯ ಕಾದಂಬರಿ, ಚಿತ್ರಪಟ, ನಗರದ ಹೊಸ ಜೀವನವನ್ನು ಕಂಡು ಪ್ರಾಯದ ಹೊಸದರಲ್ಲಿ ಅವೇನೋ ಹುಚ್ಚು ಆಸೆ ಕಲ್ಪಿಸಿದ್ದಾಳೆ" ಎಂದುಕೊಂಡಿದ್ದ.

ಆದರೆ ಆ ಕಾಗದ ತನ್ನ ಗುರುತನ್ನಿರಿಸಿಯೆ ಹೋಗಿತ್ತು ಅವನ ಮನದ ಮೇಲೆ. ಅದಕ್ಕೇ ಆ ದಿನ ವಿಶೇಷ ಚಿಂತೆಗೊಳಗಾಗಿ ಅನ್ಯಮನಸ್ಕನಾಗಿ ಅಡ್ಡಾಡಿದ್ದ.

ಮೂರನೆಯ ಕಾಗದ ಬಂದಾಗ,—

ಕರುಣಳ ಅಸ್ಪಷ್ಟ ಚಿತ್ರ ಕಣ್ಣೆದುರು ಬಂದು ಒಂದು ಕ್ಷಣ ಬೆಚ್ಚಿದ್ದ. ಕಾಗದವನ್ನೋದಿ "ಇದೇನು ಪ್ರಸಂಗ ಬಂದಿತು ನ್ನೈಮೇಲೆ ?" ಎಂದು ಹೆದರಿದ್ದ. ಯಾರೆದುರೂ ಬಾಯಿ ಬಿಟ್ಟಿರಲಿಲ್ಲ.

"ಒಂದು ಸಲ ಆ ಹುಡಿಗೆಗೆ ಚೆನ್ನಾಗಿ ತಿಳಿಹೇಳಬೇಕು. ಇಲ್ಲವಾದರೆ ಇಲ್ಲದ ತೊಂದರೆ ಇಬ್ಬರಿಗೂ." ಎಂದು ನಿರ್ಧರಿಸಿದ್ದ.

ಆದರೆ, ಆ ಸಾಯಂಕಾಲ ! ಇನ್ನೂ ನೆನಪಿದೆ ಆತನಿಗೆ !

ಜಾ:ನಿ, ಶಶಿ, ಇವರೆಲ್ಲ ಆಡಿದ ಚುಚ್ಚುಮಾತುಗಳು! ಪರಿಸ್ಥಿತಿ ಅಲ್ಲಿಯವರೆಗೆ ಹೋದುವಕ್ಕೆ, ತನಗೆ ವೃಥಾಪವಾದ ಬಂದುದಕ್ಕೆ ಕೊರಗಿದ್ದ. ಆಗಲೆ ಹೋಗಿ ಕರುಣಳ ಕಪಾಳಕ್ಕೆ ಎರಡೇಟು ಬಿಗಿಯಬೇಕೆನ್ನುವಷ್ಟು ಸಂತಾಪವಾಗಿತ್ತು.

ಈಗೊಂದು ಗಂಟೆಯ ಹಿಂದೆ ಗಣಪತರಾಯರು ಆಡಿದ ಮಾತುಗಳು!

"ಸಂಚುಮಾಡಿ ಎಲ್ಲರೂ ಸೇರಿ ಬಲೆ ಬೀಸಹತ್ತಿದ್ದಾರೆ" ಎಂದುಕೊಂಡಿದ್ದ.

ಇಷ್ಟೆಲ್ಲ ಒಂದೆರಡು ನಿಮಿಷಗಳಲ್ಲಿ ಮೂಡಿ ಹೋಯಿತು ಅವನ ಮನಸ್ಸಿನಲ್ಲಿ.

ವಿಚಾರಗಳ ಓಟ ನಿಂತಿತು.

ಮುಂದಿನ ಸನ್ನಿವೇಶ ಯಾವ ಪಾತ್ರಗಳಿಗೆ ಸಂಬಂಧಿಸಿದುದೆಂಬುವನ್ನು ತಿಳಿಯದೆ, ನಟರೆಲ್ಲ ಗಾಬರಿಯಾಗಿ ತೆರೆಯ ಹಿಂದೆ ಓಡುವಾಗ, ಒಂದು ಕ್ಷಣ ತೆರವಾಗಿರುವ ರಂಗಭೂಮಿಯಂತೆ ಸುಧಾಕರನ ಮನಸ್ಥಿತಿಯಾಯಿತು.

ಸಾವಕಾಶವಾಗಿ ಕರುಣಳತ್ತ ಮುಖ ತಿರುವಿದ. ಅವಳು ಅಳುತ್ತಿದ್ದಳು.

ಮೋಹದ ಬಲೆ ಬೀಸಿ, ವಂಚಿಸಿ, ತನ್ನನ್ನು ಜನನಿಂದೆಗೆ ಗುರಿಮಾಡಿದ ಕರುಣಳಿಗೆ ಒಂದೆರಡೇಟು ಬಿಗಿಯಬೇಕೆಂದಿದ್ದ ಕೋಪ, ಸಂತಾಪ, ಈಗ ಕರಗಿ ಹೋದವು.

ಸಿಟ್ಟಿನ ಭರದಲ್ಲಿ ತಾನೆ ತಪ್ಪು ತಿಳಿದುಕೊಂಡಿದ್ದೆನೆಂದುಕೊಂಡ ಅವಳ ಮುಖ ನೋಡಿ. ಹಿಂದೆ ತಿಳಿದುಕೊಂಡದ್ದು ತಪ್ಪಾಗಿದ್ದರೂ, ಈಗ ನಿಜವಾಗಿ ಇದ್ದುದೇನೆಂಬುದೂ ತಿಳಿಯಲಸಾಧ್ಯವೇ ಇತ್ತು.

ಇಲ್ಲಿಯ ವರೆಗೆ ಸುಮ್ಮನಿದ್ದ ಕರುಣಾ "ನೋಡಿದಿರಾ, ನನ್ನ ಅವಸ್ಥೆ!" ಎಂದಿಷ್ಟೇ ನುಡಿದಳು.

ಅವಳಿದೆಯ ಮಾತು ಕಲಾವಿದನು ಎಳೆದ ರೇಖಾವಿನ್ಯಾಸದಂತಿತ್ತು. ಆ ವಿನ್ಯಾಸದಲ್ಲಿ ಅನೇಕ ಅರ್ಥ ಕೊಡುವ ಚಿತ್ರಗಳು ಹುದುಗಿದ್ದವು. ಒಬ್ಬೊಬ್ಬರ ದೃಷ್ಟಿಗೆ ಒಂದೊಂದು ಅರ್ಥ ಕೊಡುವಂತಿತ್ತು. ಅನುಮಾನಿಸುತ್ತ ಒಂದು ಹೆಜ್ಜೆ ಮುಂದೆ ಸರಿದ. ಇಷ್ಟು ಹೊತ್ತಿನ ವರೆಗೆ ಆತ ನಿಂತಲ್ಲಿಯೆ ನಿಂತಿದ್ದ.

"ಕುಳಿತುಕೊಳ್ಳುವದಿಲ್ಲವೇ?" ಆತಿಥ್ಯಕ್ಕಿಂತ ಬಯಕೆಯೆ ಹೆಚ್ಚಿತ್ತು ಅವಳ ಮಾತಿನಲ್ಲಿ.

ಕಾಲುಗಳನ್ನು ತುಸು ಹಿಂದಕ್ಕೆಳೆದುಕೊಂಡಳು. ಮಂಚದ ತುದಿಗೆ ಕುಳಿತುಕೊಂಡ. ತುಸು ಕಂಪಿಸಿದ.

"ಇನ್ನು ನನ್ನನ್ನು ಬಿಟ್ಟು ಹೋಗಬೇಡಿರಿ. ನನಗೊಬ್ಬಳಿಗೇ ಇರಲು ಭಯ....ಹೀಗೇಕೆ ಮಾಡಿದಿರಿ?...." ಎಷ್ಟು ದೈನ್ಯ, ಕಳವಳದಿಂದ ಬೇಡಿ ಕೊಂಡಳು!

"ಅಬ್ಬಾ!" ಎಂದುಕೊಂಡ ಸುಧಾಕರ ಮನದಲ್ಲಿ. ಆದರೆ ಬಾಯಿ ಬಿಚ್ಚಿ ಮಾತನಾಡಲಿಲ್ಲ.

"ನಾನು ತುಸು ಸಿಟ್ಟಿನಲ್ಲಿ ಬಿರುಸು ಮಾತನಾಡಿದುದಕ್ಕೆ ನಿಮಗೆ ಅಸಮಾ

ಧಾನವೇ ?....ನನ್ನ ಜೊತೆ ಮಾತನಾಡುವುದಿಲ್ಲವೇ ?"

ಅವಳ ಮಿದುಳಿನ ಜ್ವರ ಪೂರ್ತಿ ಆರಿರಲಿಲ್ಲ. ಆವಳ ಮಾತಿನಲ್ಲಿ ಅರ್ಧ ಪ್ರಜ್ಞೆ, ಅರ್ಧ ಭ್ರಮೆ.

ರಂಗಭೂಮಿಯನ್ನು ಇನ್ನೂ ಹೆಚ್ಚು ಹೊತ್ತು ತೆರವಾಗಿಡುವಂತಿರಲಿಲ್ಲ. ಸುಧಾಕರ ಏನನ್ನಾದರೂ ಮಾತನಾಡಲೇಬೇಕಾಗಿತ್ತು. ಅವಳಿನ್ನೂ ಕಂಬನಿ ಸುರಿಸುತ್ತಿದ್ದಳು. "ತಪ್ಪಾಯಿತು....ನಾ–ನು....ನೀವು ಸಮಾಧಾನ ತಂದು ಕೊಳ್ಳಿರಿ....ಮನಸ್ಸಿಗೆ ಆಯಾಸಮಾಡಿಕೊಳ್ಳಬೇಡಿ...." ಎಂದು ತಡವರಿಸುತ್ತ ಹೇಳಿದ.

ಮೃದುಸ್ವಭಾವದ ಗಂಡನನ್ನು ಅಕಾರಣವಾಗಿ ಹಿಂಸಿಸಿದುದಕ್ಕೆ ಹೆಂಡತಿ ಗಾಗುವ ಪಶ್ಚಾತ್ತಾಪ, ವ್ಯಥೆ, ಅವಳ ಮುಖದಲ್ಲಿ ಮೂಡಿದ್ದವು. ಅದೆಷ್ಟೋ ಹೊತ್ತು ಆತನನ್ನು ನೋಡುತ್ತಲಿದ್ದಳು. ಅವನ ಸಾನ್ನಿಧ್ಯ ಸುಟ್ಟ ದೇಹಕ್ಕೆ ಜೇನು ಲೇಪಿಸಿದಂತಿತ್ತು. ಅಷ್ಟು ಸಮೀಪ ಕುಳಿತಿದ್ದರೂ, ಬಹುದೂರವಿದ್ದಂತೆ ಅವಳ ಭಾಸ. ಒಂದು ಸಲ ಆತನನ್ನು ತನ್ನ ಕ್ಷೀಣ ಕೈಗಳಿಂದ ಬಿಗಿದಪ್ಪಿಕೊಳ್ಳ ಬೇಕೆಂಬ ತೀವ್ರ ಬಯಕೆ – ಬಹುದಿನಗಳಿಂದ ಬಯಸುತ್ತಿದ್ದ ಅತೃಪ್ತ ಬಯಕೆ– ಒಮ್ಮೆಲೆ ಕೊಚ್ಚಿಬಂದಿತು.

ನಿಶ್ಯಕ್ತಳಾಗಿ ಕೈಯನ್ನು ಬದಿಗೆ ಚೆಲ್ಲಿದಳು, ಅಷ್ಟೆ. ಕ್ಷೀಣವಾಗಿ ನರಳಿ ದಳು. ತಲೆಗೇರಿದ ಕಾವು ನಿದಾನವಾಗಿ ಇಳಿಯತೊಡಗಿತು. ಮುಖ, ಕೊರಳು ಗಳು ಜೋರಾಗಿ ಬೆವತಿದ್ದವು. ಎದುರಿಗೆ ಕುಳಿತವರು 'ಸುಧಾಕರ'ನೆಂಬ ಪ್ರಜ್ಞೆ ಮಸುಕಾಗಿ ಮೂಡಹತ್ತಿತು. ಆದರೂ "ಆತ ನನ್ನ ಪತಿ ಎಂಬ" ಭ್ರಮೆಯ ಅತಿ ಸೂಕ್ಷ್ಮ ಅತಿ ತೆಳ್ಳಗಿನ ಪರದೆಯೊಳಗಿಂದಲೇ ಆತನನ್ನು ನೋಡುತ್ತಿದ್ದಳು. ಅತಿ ಮೃದುವಾದ ಗಾಳಿಯ ಸ್ಪರ್ಶವಿಲ್ಲದಿದ್ದರೆ ನಡುವೆ ಪರದೆ ಇಲ್ಲವೇ ಇಲ್ಲ ಎನ್ನುವಷ್ಟು ಪಾರದರ್ಶಕವಾಗಿತ್ತು ಆ ಭ್ರಮೆಯ ತೆರೆ.

ಆದರೆ ಕರುಣಳ ಹೃದಯದಲ್ಲಿ ಅತಿಸೂಕ್ಷ್ಮ ಭಾವನೆಗಳ ಸಂಚಾರ ಇದ್ದೇ ಇತ್ತು. ಅವುಗಳ ಸ್ಪರ್ಶಕ್ಕೆ ಆ ಪರದೆ ತೆರೆತೆರೆಯಾಗಿ ಸದಾ ಹೊಯ್ದಾಡುತ್ತಲೇ ಇತ್ತು. ತನ್ನ ಅಸ್ತಿತ್ವದ ಕಲ್ಪನೆಯನ್ನು ತಂದುಕೊಡುತ್ತಿತ್ತು.

ಆದರೆ ಕರುಣಳಿಗೆ ಕಾಣದಷ್ಟು ಸೂಕ್ಷ್ಮವಾಗಿತ್ತು ಆ ಭ್ರಮೆಯ ಪರದೆ.

ಗಣಪತರಾಯರು ಮೆಲ್ಲಗೆ ಒಳಗೆ ಬಂದರು. ಕರುಣಳ ಬಳಿ ಕುಳಿತು,

ಬೆವರನ್ನೊರೆಸಿದರು. "ಕರುಣಾ, ಕಾಫಿ ತರಲಾ?" ಎಂದು ಸಂತಯಿಸಿ ಕೇಳಿದರು. ಗೋಣು ಅಲ್ಲಾಡಿಸುತ್ತ ಕರುಣಾ ಸಮ್ಮತಿಯಿತ್ತಳು. ಕಾಫಿ ಬಂದಿತು. ಬಸಿಯಲ್ಲಿ ಸ್ವಲ್ಪ ಕಾಫಿ ಹಾಕಿ ಕರುಣಳಿಗೆ ಕುಡಿಸಹೋದರು. ಅವಳದನ್ನು ನಿರಾಕರಿಸಿದಳು. ಅವಳ ಮೊಂಡತನವನ್ನು ಸಹಿಸಲೇಬೇಕಾಗಿತ್ತು. "ಹಾಗೆ ಮಾಡಬಾರದು ಕರುಣಾ, ಕುಡಿ." ಎಂದು ರಾಯರು ರಮಿಸಿ ಹೇಳಿದರು.

ಆಸೆ-ಕಂಗಳಿಂದ ಒಮ್ಮೆ ಸುಧಾಕರನತ್ತ ನೋಡಿದಳು. ಆ ನೋಟದ ಅರ್ಥವನ್ನು ಗ್ರಹಿಸಿ ಗಣಪತರಾಯರು ಒಳಗೇ ಮೃದುವಾಗಿ ನಕ್ಕು, "ನೀವು ಕುಡಿಸಿದರೆ ಕುಡಿಯುತ್ತಾಳೆ." ಎಂದು ಸುಧಾಕರನಿಗೆ ಹೇಳಿದರು. ಅವನಿಗೆ ನಾಚಿಕೆಯಾಯ್ತು. ಅದಕ್ಕಿಂತ ಹೆಚ್ಚಾಗಿ ಭಯವಾಯ್ತು. ಆದರೂ ಅವನ ಕೈ ಕೆಳಗಿರಿಸಿದ ಕಪ್ಪನ್ನೆತ್ತಿಕೊಂಡಿತು.

ಕರುಣಾ ಲಜ್ಜಿತಳಾಗಿ "ನೀವು ಹೋಗಿರಿ, ಪಪ್ಪಾ." ಎಂದು ಹೇಳಿಯೇ ಬಿಟ್ಟಳು.

ಗಣಪತರಾಯರು ನಸುನಗುತ್ತ "ಆಗಲಿ." ಎಂದು ಹೊರಬಿದ್ದರು.

ಸುಧಾಕರ ಪೇಚಿನಲ್ಲಿ ಸಿಲುಕಿದ. ಯಾಂತ್ರಿಕವಾಗಿ ಕಪ್ಪನ್ನು ಅವಳ ತುಟಿಯ ಬಳಿಗೆ ಹಿಡಿದ. ಕರುಣಾ ಸಾವಕಾಶವಾಗಿ ಕುಡಿಯಹತ್ತಿದಳು. ಆ ಕ್ಷಣದಲ್ಲಿ ಅವಳಿಗೆ ಅದು ಅಮೃತದಷ್ಟು ರುಚಿಸಿರಬೇಕು.

ಕಂಪಿಸುತ್ತಿದ್ದ ಆತನ ಕೈಗಳನ್ನು, ಮಂಚದ ಮಗ್ಗುಲಲ್ಲಿರಿಸಿದ ಚಿಕ್ಕ ಮೇಜಿನ ಮೇಲಿಟ್ಟ ಔಷಧಿ ಸೀಸೆಯ ಮೇಲೆ ನಟ್ಟ ಆತನ ನೋಟವನ್ನು ಅವಳು ಸೂಕ್ಷ್ಮವಾಗಿ ಗ್ರಹಿಸಿದಳು. ಹೊಯ್ದಾಡುತ್ತಿದ್ದ ಕಪ್ಪನ್ನು ತನ್ನ ನವೆದ ಬೆರಳುಗಳಿಂದ ಹಿಡಿದಳು. ಎಲ್ಲಿಯೋ ಒಂದು ಕ್ಷಣದ ಸ್ಪರ್ಶ! ಸುಧಾಕರ ಹಿಡಿದ ಕಪ್ಪನ್ನು ತನ್ನೆಡೆಗೆ ಸಾವಕಾಶವಾಗಿ ಎಳೆದುಕೊಳ್ಳುತ್ತ, "ಕುಡಿಯುವ ದಾಯಿತಲ್ಲವೇ?" ಎಂದು ಕೇಳಿದ.

ಇನ್ನೂ ತುಸು ಕಾಫಿ ಉಳಿದಿತ್ತು. ಅವಳಿಗೆ ಇನ್ನೂ ತುಂಬಿದಂತೆಯೇ ಅನಿಸುತ್ತಿತ್ತು.

"ಇನ್ನು ವಿಶ್ರಾಂತಿ ತೆಗೆದುಕೊಳ್ಳಬೇಕು ನೀವು." ಎಂದು ವೈದ್ಯರು ಸಲಹೆ ಕೊಡುವಂತೆ ಹೇಳಿದ.

ಏನೇನೋ ಹೇಳಬೇಕೆಂದಿದ್ದ ಕರುಣಳಿಗೆ ಶಕ್ತಿ ಸಾಲದಾಯ್ತು. ಸೋತು

ಸೋತು ತುಟಿಯ ವರೆಗೆ ಬಂದ ಮಾತುಗಳು ಅಲ್ಲಿಯೇ ಕರಗಿಬಿಡುತ್ತಿದ್ದವು. ಅವಳ ತುಟಿಗಳ ಸೂಕ್ಷ್ಮ ಚಲನವಲನವನ್ನು ಗಮನಿಸಿದ್ದರೆ ಅದರ ಅರ್ಥ ಆಗ ಬಹುದಾಗಿತ್ತೇನೋ! ಆದರೆ ಅತ್ತ ನೋಡುವ ಧೈರ್ಯ ಸುಧಾಕರನಿಗಿರಲಿಲ್ಲ. ರೋಗಿಯ ಮನಸ್ಸಿಗೆ ನೋವಾಗದ ರೀತಿಯಲ್ಲಿ ಇಲ್ಲಿಯ ವರೆಗೆ ಮಾತನಾಡಿದ. ಅವಳಿಗೆ ಔಷಧಿ ಕುಡಿಸಿದ; ಕಾಫಿ ಕುಡಿಸಿದ.

ಕರುಣಾ ಆತನನ್ನು ನೋಡುತ್ತಲೇ ಮಲಗಿದ್ದಳು. ಇಷ್ಟು ದಿನ ಬಳಲಿದ ಅವಳ ಮನಕ್ಕೆ ಇಂದು ಸಮಾಧಾನ ದೊರಕಿತು. ಬೇಗನೆ ನಿದ್ದೆ ಆವರಿಸಿತು.

ಇನ್ನು ಹೊರಡಬೇಕೆಂದುಕೊಂಡು ಸುಧಾಕರ, "ಕರುಣಾ!" ಎಂದು ಉಸುರಿದ.

"ಆಂ!" ಎಂದು ಮೆಲ್ಲನೆ ಕಣ್ಣು ತೆರೆದಳು.

"ನಾನು ಹೋಗಿಬರಲಾ?"

"ನಾಳೆ ಬೆಳಿಗ್ಗೆ ಬರುತ್ತೀರಲ್ಲವೇ?"

ಇದನ್ನು ಆತ ನಿರೀಕ್ಷಿಸಿಯೇಬಿಟ್ಟಿದ್ದ. ಅದಕ್ಕೇ ತಾನು ಹೇಳಬೇಕೆಂದು ಮನಸ್ಸಿನಲ್ಲಿ ಮಾಡಿಟ್ಟುಕೊಂಡ ಉತ್ತರವನ್ನು ಮಾತ್ರ ಹೇಳವೆ "ಬರುತ್ತೇನೆ." ಎಂದಿಷ್ಟೆ ಹೇಳಿದ.

ಸುಧಾಕರ ಬರುವದನ್ನು ಗಮನಿಸಿ, ಬಾಗಿಲ ಮರೆಯಲ್ಲಿ ಉಸಿರು ಬಿಗಿ ಹಿಡಿದುಕೊಂಡು ನಿಂತಿದ್ದ ಅರುಣಾ ತಟ್ಟನೆ ಅಡುಗೆಮನೆಗೆ ಸರಿದಳು.

ಗಣಪತರಾಯರು ಸುಧಾಕರನನ್ನು ಅಡುಗೆಮನೆಗೆ ಕರೆದುಕೊಂಡು ಬಂದರು. ಅರುಣಾ ಅವರಿಬ್ಬರಿಗೂ ಊಟಕ್ಕೆ ಬಡಿಸಿದಳು. ಊಟವಾಯ್ತು. ಯಾರೂ ವಿಶೇಷ ಮಾತನಾಡಲಿಲ್ಲ. ಹೊತ್ತು ರಾತ್ರಿ ಹನ್ನೆರಡಕ್ಕೆ ಸಮೀಪಿಸಿತ್ತು.

"ನಾನಿನ್ನು ಹೋಗುತ್ತೇನೆ." ಎಂದು ಸುಧಾಕರನೇ ಹೇಳಿದ.

ಗಣಪತರಾಯರೊಂದಿಗೆ ಅಡುಗೆಮನೆಯಿಂದ ಹೊರಬಿದ್ದ. ಇಬ್ಬರೂ ಪಡಸಾಲೆಯನ್ನು ದಾಟಿದರು. ಅರುಣಾ ಅಡುಗೆಮನೆಯ ಬಾಗಿಲಿಗೆ ಕೈಯಿಟ್ಟು ಅವರು ಹೋಗುವದನ್ನೆ ನೋಡುತ್ತ ಹೊಸ್ತಿಲ ಮೇಲೆ ನಿಂತಿದ್ದಳು.

ಹಾಗೇ ಬಾಗಿಲ ಬಳಿ ನಿಂತು ತಂಗಿಯನ್ನೊಮ್ಮೆ ನೋಡಿದಳು. ಕರುಣಾ ನಿದ್ರಿಸುತ್ತಿದ್ದಳು. ಅವಳ ಮುಖದ ಮೇಲೆ ಹರಡಿ ನಿಂತ ಸಮಾಧಾನ, ಸಂತೃಪ್ತಿಗಳನ್ನು ನೋಡಿ, ಅರುಣಾ ಮನದುಂಬಿ ಕ್ಷಣ ಕಣ್ಣುಮುಚ್ಚಿ ಉಸುರ್ಗರೆದಳು.

"ಕರುಣಾ..." ಎಂದು ಎರಡು ಬಾರಿ ಆರ್ತಳಾಗಿ ಮನದಲ್ಲಿಯೇ ಅಂದು ಕೊಂಡಳು. ದೀಪವಾರಿಸಿ, ಬಾಗಿಲು ಮುಂದೆ ಮಾಡಿ, ಮತ್ತೆ ಒಳಗೆ ಬಂದಳು.

ಹೊರಗಿನ ಬಾಗಿಲ ವರೆಗೆ ನಡೆದು ಬಂದರೂ ಸುಧಾಕರನಾಗಲಿ, ಗಣಪತ ರಾಯರಾಗಲಿ ಮೂಕ ಉಪಚಾರದ ಹೊರತು ಬೇರೆ ಒಂದು ಮಾತನ್ನೂ ಆಡ ಲಿಲ್ಲ. ಕೃತಜ್ಞತೆಯಿಂದ ಗಣಪತರಾಯರು ಮೂಕರಾಗಿದ್ದರು. ಎಂದಿಗೂ ಅನು ಭವಿಸದ ಹೃದಯಾನುಭವಗಳಿಂದ ಸುಧಾಕರ ಮೂಕನಾಗಿದ್ದ. "ನಿಮ್ಮಿಂದ ಉಪಕಾರವಾಯಿತು. ಅವಳನ್ನು ಬದುಕಿಸಿದಿರಿ." ಎಂದು ಬೀಳ್ಕೊಡುವ ಮುನ್ನ ಹೇಳಬೇಕೆಂದು ಯೋಚಿಸಿದ ಗಣಪತರಾಯರಿಗೆ ಆ ಕ್ಷಣದಲ್ಲಿ ಹೇಳಲಾಗಲಿಲ್ಲ. ಏನೋ ಉಸುರಬೇಕೆಂದರು. ಕೈ ಮಾಡಿ ಸೂಚಿಸಬೇಕೆಂದರು. ಅಷ್ಟರಲ್ಲಿ ಸುಧಾಕರ ಕೇಳಿಸದಷ್ಟು ದೂರ ನಡೆದಿದ್ದ. ಬಾಗಿಲನ್ನಿಕ್ಕಿಕೊಂಡು ಒಳಗೆ ಬಂದರು. ಅರುಣಾ ಹಾಸಿಗೆಯ ಮೇಲೊರಗಿದ್ದಳು.. ಇಬ್ಬರೂ ಮಾತನಾಡದೆ ಮಲಗಿಬಿಟ್ಟರು. ಇಬ್ಬರಿಗೂ ಬೇಗ ನಿದ್ದೆ ಬರಲಿಲ್ಲ. ಆ ರಾತ್ರಿ ಸುಖವಾಗಿ ನಿದ್ರೆ ಮಾಡಿದವರೆಂದರೆ ಕರುಣಾ ಒಬ್ಬಳೇ.

---

# ೮ : ಅರ್ಥವಿರಾಮ

ನಾನಿಯ ತಂದೆ ಬೆಂಗಳೂರಿನಿಂದ ತಿರುಗಿ ಬಂದು ಒಂದೆರಡು ದಿನಗಳಾಗಿದ್ದವು. ಬಂದ ದಿನವೇ ರಾತ್ರಿ ಗುರೂಮಾಮಾನ ಸಂಗಡ ಬಹಳ ಹೊತ್ತು ಮಾತನಾಡಿದರು. ಇಬ್ಬರ ನಡುವೆ ಮನಸ್ತಾಪವಾಗು ವಷ್ಟು ಬಿಸಿಯಾಗಿ ಮಾತುಕತೆಗಳು ನಡೆದಿರಬೇಕು. ಯಾಕಂದರೆ ಮರು ದಿನದಿಂದ ಇಬ್ಬರಲ್ಲಿಯೂ ಹೆಚ್ಚು ಮಾತುಗಳಾಗಿರಲಿಲ್ಲ.

ಬಹುಶಃ ಅಣ್ಣನ ವಿಷಯಕ್ಕಾಗಿ ಹೀಗಾಗಿರಬೇಕೆಂದುಕೊಂಡ, ನಾನಿ. ಆದರೆ ಆ ವಿಷಯದಲ್ಲಿ ತಂದೆ, ಮಾವ ಇವರಲ್ಲಿ ಭಿನ್ನಾಭಿಪ್ರಾಯ ವಾಗಲು ಸಾಧ್ಯವೇ ಇಲ್ಲ. ಅಂದಮೇಲೆ ಕಕ್ಕಿಯ ವಿಷಯ – ಪಾಲು – ಬಂಗಾರ – ಹೀಗೇನಾದರೂ ವಿಷಯ ನಡೆದು ಬಹುಶಃ ವಿಕೋಪಕ್ಕೆ ಹೋಗಿರಬಹುದೆಂಬ ಸಂದೇಹ ಬಲವಾಯಿತು. ಮಾವನನ್ನು ಕೇಳಬೇಕೆಂ ದೆನಿಸಿತು. ಹಿರಿಯರ ಮಾತಿನಲ್ಲಿ ಬಾಯಿ ಹಾಕಿ ಸುಮ್ಮನೆ ತನ್ನ ಮನವನ್ನು ಕದಡಿಕೊಳ್ಳಬಾರದೆಂದುಕೊಂಡ.

ಮಧ್ಯಾಹ್ನದ ಊಟ ವಿಚಿತ್ರ ಮೌನದಲ್ಲಿಯೇ ಮುಗಿಯಿತು. ತಂದೆ, ಮಾಮಾ, ತಾನು, ಒಬ್ಬರೂ ಮಾತನಾಡುತ್ತಿದ್ದಿಲ್ಲ. ನಾರಾಯಣಾಚಾರಿ ಸಂಜ್ಞೆಯ ಮೇಲೆಯೇ ಊಟಕ್ಕೆ ಬಡಿಸುತ್ತಿದ್ದ. ಆಗಾಗ ಅನಿವಾರ್ಯವಾಗಿ ಬರುತ್ತಿದ್ದ 'ಸಾಕು'–'ಹಾಕು'ಗಳನ್ನು ಬಿಟ್ಟರೆ ಬೇರೆ ಯಾವ ಮಾತೂ ಇರಲಿಲ್ಲ. ನಾನಿ ಕದ್ದು ತಂದೆಯನ್ನೊಮ್ಮೆ, ಮಾವನನ್ನೊಮ್ಮೆ ನೋಡಿದ. ಅಂತೂ ಊಟ ಮುಗಿಸಿ ತಮ್ಮ ತಮ್ಮ ನಿದ್ರಾಸ್ಥಾನಗಳನ್ನು ಸೇರಿದರು.

ನಾನಿಗೆ ನಿದ್ದೆ ಬರಲಿಲ್ಲ. ಕಾದಂಬರಿಯನ್ನು ಮುಂದೆ ಬರೆಯ ಬೇಕೆಂದು ಕುಳಿತ. ಹಿಂದಿನ ಕತೆಯನ್ನೆಲ್ಲ ಒಂದು ಸಲ ಓದಿಕೊಂಡ. ಕೊನೆಕೊನೆಯ ಭಾಗ ತೀವ್ರಭಾವನೆ, ತಾಕಲಾಟ, ನೋವು, ದುಃಖ, ಸಂಕಟಗಳ ಬಿರುಗಾಳಿಗೆ ಸಿಲುಕಿತ್ತು. ಅದರಲ್ಲಿ ಕರುಣಳ ನಾವೆಯಂತೂ ಪುಡಿಪುಡಿಯಾದಂತಿತ್ತು.

"ಇಷ್ಟು ವಿದ್ರಾವಕ ರೀತಿಯಲ್ಲಿ ಬರೆಯಬಾರದಿತ್ತೇನೋ!" ಎಂದೆನಿಸಿತು.

ಕಕ್ಕಿ ಹೇಳಿದ 'ಪದ್ದಿ'ಯ ಸಂಗತಿ ನೆನಪಾಯ್ತು. ಅದನ್ನು ಸಂಪೂರ್ಣವಾಗಿ ಕೇಳಬೇಕೆಂದೆನಿಸಿತು. ಈಗಾಗಲೆ ೧೦–೧೫ ದಿನಗಳು

ಕಳೆದಿವೆ. ಅವಳ ಕತೆ ಎಲ್ಲಿಯ ವರೆಗೆ ಬಂದು ನಿಂತಿದೆಯೆಂಬುದನ್ನು ನೋಡಬಯಸಿದ.

ಅವಸರದಿಂದ ಹೊರಟ. ಗುರೂಮಾಮಾ ಆಗ ವರ್ತಮಾನಪತ್ರ- ವನ್ನೋದುತ್ತ ಮಗ್ಗಲಿನ ಕೋಣೆಯಲ್ಲಿ ಮಲಗಿದ್ದ.

* * *

"ಕಕ್ಕಿ ಮನ್ಯಾಗ ಇದ್ದಾಳೇನು ಸುನೀತಾ?"

"ಹಿಂಗ್ಯಾಕ ಅಕಸ್ಮಾತ್ ಬರೋಣಾತು? ಕಕ್ಕಿ ಪುರಾಣಕ್ಕ ಹೋಗ್ಯಾಣ ಬಾ. ಯಾಕ ನಿಂತ್ಯಲ್ಲ! ಕಕ್ಕಿ ಹತ್ತರ ಕೆಲಸ ಇತ್ತೇನು?"

ನಾನಿ ಒಳಗೆ ಬಂದು ಕುಳಿತುಕೊಂಡ. ಆ ಮಾತು ಈ ಮಾತು ತೆಗೆದು, ಸಹಜವಾಗಿ ನೆನಪಾದವರಂತೆ ಕೇಳಿದ:

"ಅಂದ್ಹಾಂಗ ಪದ್ಮಾವತೀದು ಮುಂದೇನಾತವಾ?"

"ಲಗ್ನ ನಿಶ್ಚಯ ಆಗೂದರಾಗದ."

ನಾನಿ ಒಮ್ಮೆಲೆ ಇಷ್ಟಗಲ ಬಾಯಿ ತೆಗೆದು, "ಹಾಂ! ಹೌದs? ಖರೇ? ನನಗ ಹೀಂಗ ಆಗತದಂತ ಅಂದs ಅನಿಸಿತ್ತು."

"ಏನು ಅನಿಸಿತ್ತು?"

"ಅಂದ್ರ, ಹಿಂದಕ ಪತ್ರಾ ಬರದಿದ್ಲು, ಮತ್ತ, ಅವರ ತಂದಿ ಖಟಿ ಪಿಟಿ ನಡಿಸಿದ್ರು ಅಂತ ಹೇಳಿದ್ದಿ; ಅದs ಹುಡುಗ್ಗ ಹೌದಲ್ಲೊ ಈಗ ಗೊತ್ತಾಗಿದ್ದು?"

"ಏ! ಇದು ಬ್ಯಾರೆ. ಅದರದೊಂದು ಪ್ರಕರಣ ಬ್ಯಾರೇನs ಆತು." ಎಂದು ನೆನೆಸಿಕೊಂಡು ನಕ್ಕು "ಇಂಥಾ ಹುಚ್ಚು ಹುಡಿಗಿನ್ನ ನಾ ನೋಡಿ ದ್ದಿಲ್ಲ ಬಿಡು ನಾನಿ. ಅವರ ಅಪ್ಪ ಖಟಿಪಿಟಿ ನಡಿಸಿದ್ದು, ಅದೆಲ್ಲಾ ಸುಳ್ಳು. ಇಕೀ ಕೈಗಂಟು ಹಾಕಿ ನನ್ಮುಂದ ಹೇಳಿದ್ಲು. ತಿರಿಗಿ ಕೇಳಿದರ ಅವರ ತಂದಿಗೆ ಇಕೀ ಪತ್ರದ ಭಾನಗಡಿ ಸಹಿತ ಗೊತ್ತಿದ್ದಿದ್ದಿಲ್ಲ!"

"ಎಲಾ! ಮುಂದ ಏನಾತು ಹಂಗಾರ? ಆ ಹುಡುಗನ ಪತ್ರ ಇಕಿ ತಂದೀ ಕೈಯ್ಯಾಗ ಸಿಕ್ಕಿತೇನು?" ಕುತೂಹಲದಿಂದ ನಾನಿ ಕೇಳಿದ.

"ಪತ್ರ ಕೈಗೆ ಸಿಗೂದು ಅಷ್ಟs ಅಲ್ಲ! ಪದ್ದಿ ಅಪ್ಪನ ಕೈಲೆ ಹೊಡ. ತಾನೂ ತಿಂದಳು."

"ಆಕಿ ಮನಸ್ಸಿಗೆ ದೊಡ್ಡ ಆಘಾತ ಆಗಿರಬೇಕು ಪಾಪ! ಅದಕ್ಕs ಅನ್ನೂದು ನಮ್ಮ ಸಮಾಜ ಇನ್ನೂ ಹಳೇ ಪರಂಪರಾದೊಳಗು

ಕೊಳ್ಳೀಲಿಕ್ಕೆ ಹತ್ತ್ಯೇದ. ತಮ್ಮ ಲಗ್ನ ತಾವೇ ನಿಶ್ಚಯ ಮಾಡಿಕೊಂಡಿದ್ರು. ಹುಡುಗನೂ ಒಳ್ಳೆಯವ ಇದ್ನಂತ ಹೇಳಿದ್ದಿ ನೀನು. ಮಗಳ ಕಲ್ಯಾಣ ಮಾಡೂದು ಬಿಟ್ಟು ಹೀಂಗ ಹೊಡದರ ಆಕಿ ಭವಿಷ್ಯ ಹಾಳಾಧಾಂಗಾತು! ಇನ್ನ ಆ ಹುಡುಗ ಕೊರಗಬೇಕು! ನನ್ನ ಕೇಳಿದರ ಅವರ ತಂದಿ ತಮ್ಮ ಮಗಳ ಜೀವನ ತಾವs ಹಾಳುಮಾಡಿದರು ಅಂತ ಅನಸ್ತದ." ಎಂದು ನಾನಿ ಆವೇಶದಲ್ಲಿಯೇ ಮಾತನಾಡಿದ.

ನಾನಿಯ ಮಾತುಗಳನ್ನು ಕೇಳಿ ಸುನೀತಳಿಗೆ ವಿಚಿತ್ರವೆನಿಸಿತು.

"ಇದೆಲ್ಲಾ ತಪ್ಪು ತಪ್ಪು ಕಲ್ಪನಾ ನಿನ್ನ ತಲ್ಯಾಗ್ಯಾರು ತುಂಬ್ಯಾರಪಾ? ಮೊದಲಿನಿಂದೂ ಇದನ್ನೆಲ್ಲಾ ನೀ ಬ್ಯಾರೇನ ತಿಳಕೊಂಡೀದಿ. ಅದು ಹೀಂಗಾತು: ಈಕಿ ಪತ್ರಾ ಕಳಿಸಿದಳು. ಅದಕ್ಕೇನು ಉತ್ತರ ಬರಲಿಲ್ಲ. ಆ ಹುಡುಗ ಯಾವಾಗರ ಒಮ್ಮೆ ಇವರ ಮನಿಗೆ ಬರೂದನ್ನೂ ಬಿಟ್ಟಬಿಟ್ಟಾ. ಮುಂದ ನಾಕಾರ ದಿವಸದಾಗ ಈಕಿ ಮತ್ತೊಂದು ಚೀಟಿಕಳಿಸಿದಳಂತಪಾ. ಎಂಥಾ ಹುಚ್ಚು ಧೈರ್ಯಾ ನೋಡು ಆಕೀದು! ಮುಂದ ಆ ಹುಡುಗ ಪದ್ದೀ ಅಣ್ಣನ್ನ ಕರೆಸಿ ಹೀಂಗಿನ ಮಾತು ಹಿಂಗದ..ತಿಳವಳಿಕಿ ಇಲ್ಲದ ಹುಡಿಗಿ... ನಾಳೆ ನಾಕ ಮಂದ್ಯಾಗ ನನಗ ನಿಮಗs ಕೂಡೇ ಅಪಕೀರ್ತಿ ಬಂದೀತು.. ಅಂತ ಹೇಳಿದನಂತಪಾ! ಯಾವ ಮಾಯದಿಂದೋ ಇದೆಲ್ಲಾ ಅವರ ತಂದಿಗೆ ತಿಳೀತು. ಮೈಹುಳಿ ಹೊಡದರು. 'ನಾ ಭಾವೀ ಬೀಳತೀನಿ, ಕೆರೀ ಪಾಲಾಗತೀನಿ' ಅಂತ ಪದ್ದಿ ಹೊರಳ್ಯಾಡಿದಳು. ಒಂದಿವಸ ಊಟಾ ಬಿಟ್ಟು ಕೂತ್ಲು. ಹೊರಗ ಮಾರೀ ಸಹಿತ ತೋರಿಸಲಿಲ್ಲಾ. ಈಗ ಮತ್ತ ಹಾದಿಗೆ ಬಂದಾಳ..."

"ಇನ್ನ ಮುಂದ ಆಕಿ ಗತಿ?"

"ಮುಂದೇನು? ಹೇಣತೀ ತಮ್ಮಗs ಕೊಡಬೇಕಂತ ಮನ್ಯಾಗ ಮೊದಲs ನಿಶ್ಚಯ ಮಾಡೇ ಇಟ್ಟಿದ್ರು. ಆ ಅವರೂ ಒಪ್ಪ್ಯಾರ. ದಿವಸೆರಡು ದಿವಸದಾಗ ನಿಶ್ಚಯಕ್ಕ ಬರಾವರಿದ್ದಾರಂತಪಾ."

* * *

ನಾನಿಗೆ ತನ್ನ ಕಾದಂಬರಿ ಬುಡಮೇಲಾದಂತೆನಿಸಿತು. ಕಕ್ಕಿಯ ಮನೆಯಿಂದ ನಿರಾಶನಾಗಿಯೇ ಹೊರಟ. ಮನಸ್ಸಿಗೆ ಸಮಾಧಾನವಾಗ ಲಿಲ್ಲ. ಒಂದು ತಾಸಿನವರೆಗೆ ಊರ ಹೊರಗೆ ತಿರುಗಾಡಿಕೊಂಡು ಬಂದ. ಬರುವಾಗ ಆತನ ತಲೆಯಲ್ಲಿ ತನ್ನ ಕಾದಂಬರಿಯಲ್ಲಿಯ ಕತೆ, ಇಲ್ಲಿ

ಕೇಳಿದ ಪದ್ಮಾವತಿಯ ಕತೆ ಇವೆರಡೂ ಒಂದರ ಹಿಂದೊಂದು ಓಡಾಡು ತ್ತಿದ್ದವು.

ಎರಡೂ ಕತೆಗಳು ಪ್ರತ್ಯಕ್ಷ ಸಂಭವಿಸಿದ ಘಟನೆಗಳೇ!

ಆದರೂ ಕರುಣಳ ಕತೆಗಿಂತ ಪದ್ಮಾವತಿಯ ಕತೆ ಸದ್ದಿಲ್ಲದಂತೆ ನಾನಿಯ ಮನವನ್ನು ಸೆರೆಹಿಡಿದಿತ್ತು.

ಮನೆಗೆ ಬಂದವನೇ ಅಟ್ಟಕ್ಕೆ ಹೋಗಬೇಕೆನ್ನುವಷ್ಟರಲ್ಲಿ ನಾರಾ-ಯಣಾಚಾರಿ ಕೈಸನ್ನೆ ಮಾಡಿ ತಡೆದ. ನಾನಿ ನಿಂತಲ್ಲಿಯೇ ನಿಂತ. ಆಚಾರಿ ಸಮೀಪಕ್ಕೆ ಬಂದು ಪಿಸುಮಾತಿನಲ್ಲಿ, "ಮ್ಯಾಲೆ ರಾಯರು, ಮಾಮಾ ಇಷ್ಟೊತ್ತನಕಾ ವಾದಿಸ್ಯಾಡತಿದ್ದರು. ನನಗೂ ಜಂಪು ಹತ್ತಿತ್ತು. ಅವರೆ ಒದರ್ಯಾಟಕ್ಕ ಎಚ್ಚರಾತು. ಮ್ಯಾಲೆ ಹೋಗೂ ಧೈರ್ಯಾ ಆಗಲಿಲ್ಲ. ಒಂದು ತಾಸ ತನಕಾ ಬಾಗಲಾ ಹಕ್ಕೊಂಡು ಭಾರಿ ಜೋರಲೇ ಮಾತಾಡಿದರು. ಮತ್ತ ಈಗ ಒಂದು ಅರ್ಧಾ ತಾಸಿನ ಹಿಂದ ಕಕ್ಕಿನ್ನ ಕರಕೊಂಡು ಬಾ ಅಂತ ನನ್ನ ಕಳಿಸಿದ್ದರು. ಅವರು ಪುರಾಣ ಬಿಟ್ಟು ಮನಿಗೆ ಹೊರಟಿದ್ದರು ಕಾಣಸ್ತದ. ದಾರ್ಯಾಗs ಭೆಟ್ಟ್ಯಾತು. ಮತ್ತ ಹೀಂಗ ಕರಕೊಂಡು ಬಾ ಅಂದಾರ ಅಂತ ಹೇಳಿದೆ. ಅವರೂ ಮನಿಗೆ ಸಹಿತ ಹೋಗದೆ ಇತ್ಲಾಗೇ ತಿರಗಿದರು." ಎಂದು ಹೇಳಿದ.

ನಾನಿಗೆ ನಂಬಲಾಗದ ಸಂಗತಿಯಾಯ್ತು ಇದು.

"ಎಲ್ಲಿದ್ದಾಳ ಕಕ್ಕಿ?"

"ಅವರೂ ಮ್ಯಾಲೇ ಇದ್ದಾರ."

ಅಟ್ಟದ ಪಾವಟಿಗೆಗಳನ್ನೇರಿ ಬಾಗಿಲ ಹಿಂದೆ ನಾನಿ ನಿಂತುಕೊಂಡ. ಒಳಗೆ ನಡೆದ ಮಾತುಕತೆ ಮುಕ್ತಾಯಕ್ಕೆ ಬರುವದರಲ್ಲಿತ್ತು.

ನಾನಿಯ ತಂದೆ ಏನೋ ಮಿಜಿಮಿಜಿ ಎನ್ನುತ್ತಿದ್ದರು. ನಡುವೆ ಕಕ್ಕಿಯ ಧ್ವನಿ ಕೇಳಿಸಿತು: "ನಾ ಏನು ಅನ್ಯಾಯದಿಂದ ಬೇಡಿಲ್ಲಾ. ನನ್ನ ಪಾಲಿನ ಭಂಗಾರ ನನಗ ಕೊಟ್ಟರ ಸಾಕು. ಇಷ್ಟೊತ್ತನಕಾ ಮಾತಾಡಿ ದರೂ ಮತ್ತ ಅದs ಹಿಂದಿನ ಕಥೀನs ಹೇಳತೀರಿ.. 'ವ್ಯವಹಾರದಾಗ ಲುಕ್ಸಾನ ಆತು. ಭಂಗಾರ ಮಾರಿದಿವಿ, ನಾ ಬ್ಯಾರೆ ತಿಂದಿಲ್ಲs' ಅಂತ ಮಾತಮಾತಿಗೆ ಅಂತೀರಿ. ನಾನೂ ಒಂದು ಮಾತು ಕೇಳತೀನಿ ನಿಮ್ಮನ್ನ. ನಿಮ್ಮ ಒಬ್ಬರ ಖಾಸಗೀ ವ್ಯವಹಾರದ ಲಾಭಾ ಲುಕ್ಸಾನಕ್ಕ ನಾವ್ಯಾಕ ಕೈಲೆ ಸೋಸಬೇಕು? ನನ್ನ ಮಾತು ನಿಷ್ಠೂರ.. ವಾಜಮೀ ಹೌದಲ್ಲೊ

ಹೇಳ್ರಿ ಬೇಕಾರ ಗುರೂಮಾಮಾ ನೀವs ? ”

ಕೊನೆಗೆ ತಂದೆಯವರು, “ಇಷ್ಟಾತಲಾ, ಆಗಲಿ. ಪಾಲಿನ ಭಂಗಾರ ಅಂತ ನಾಯೇನು ಕೊಡೂದುಲ್ಲಾ. ಸುನೀತಾ, ಸಿಂಧೂನ ಲಗ್ನದಿಂದ ಅಂತ ಹೇಳಿ ಅದs ೨೫ ತೊಲಿ ಭಂಗಾರ ಕೊಡತೀನಿ.” ಎಂದು ಹೇಳಿದರು. ಕೇಳುತ್ತಿದ್ದ ನಾನಿಗೆ ತಂದೆಯ ದುರಭಿಮಾನ ನೋಡಿ ‘ಮನೆತನದ ಒಗರು ಅಪ್ಪನ ಮೈಯಾಗ ಇನ್ನೂ ಉಳದದಲs !’ ಎಂದೆನಿಸಿತು.

ಕಡೆಗೆ ಗುರೂಮಾಮಾ ಮುಕ್ತಾಯಗೊಳಿಸಿದರು:

“ನೀ ಅದನ್ನ ದಾನ ಅಂತರs ಕೊಡು. ಹುಡುಗರ ಲಗ್ನಕ್ಕ ಅಂತರs ತಿಳಕೊಂಡು ಕೊಡು. ಆದ ಸಾಲಾ ಅಂತ ನಿನ್ನ ಖಾತೆ ಬುಕ್ಕಿನ್ಯಾಗ ಮಾತ್ರ ಬರಿಬ್ಯಾಡಾ.”

ಅವರೆಲ್ಲ ಕೆಳಗೆ ಬರುವಂತೆ ಕಂಡಿತು.

“ನಾ ಹೋಗಿಬರ್ತೀನಿ ಗುರೂಮಾಮಾ” ಎಂದು ಕಕ್ಕಿ ಹೇಳಿದಂತೆ ಆಯಿತು.

ಬಾಗಿಲು ತೆರೆಯುವ ಸಪ್ಪಳ ಕೇಳಿ ನಾನಿ ಕೆಳಗೆ ಓಡಿ ಬಂದು ಪಡಸಾಲೆಯ ಬಾಗಿಲ ಮರೆಗೆ ನಿಂತುಕೊಂಡ. ಭರಭರನೆ ಹೊರಟ ಕಕ್ಕಿ ನಾನಿಯನ್ನು ನೋಡಿದಳು. ಇಷ್ಟು ಹೊತ್ತಿನವರೆಗೆ ಬಾರದ ಕಂಣೀರು ಈಗ ಬಂದಿತು. ಸೆರಗಿನಿಂದ ಕಣ್ಣೊರಸಿಕೊಳ್ಳುತ್ತ ಮಾತನಾಡದೆ ಹೋಗಿ ಬಿಟ್ಟಳು.

---

# ೯: ನಾನಿಯ ದಿನಚರಿಯಿಂದ

ಮನೆಯಲ್ಲಿ ಎದ್ದ ಗೊಂದಲದ ಮೂಲಕ ಕಾದಂಬರಿಯ ಕೆಲಸ
ಅರ್ಧಕ್ಕೇ ನಿಂತಿದೆ. ಆದರೆ ಮನಸ್ಸಿನಲ್ಲಿ ಕಾದಂಬರಿ ಮುಗಿತಾಯದ
ಘಟ್ಟವನ್ನು ಮುಟ್ಟಹತ್ತಿದೆ. ಕರುಣಾ ಹಾಗೂ ಸುಧಾಕರ ಇಬ್ಬರೂ ತೀ
ಹತ್ತಿರ ಹತ್ತಿರ ಬಂದಿದ್ದಾರೆ. ಮುಂದೇನು ಮಾಡಬೇಕೆನ್ನುವದನ್ನು ವಿಚಾ
ಮಾಡಿ ಮಾಡಬೇಕಾಗಿದೆ. ಇಂದು ಸುನೀತಾ ಪದ್ಮಾವತಿಯ ಕತೆ ಹೇ
ದಳು. ಕೇಳಿ ಆಶ್ಚರ್ಯವಾಯಿತು. ಅಪ್ಪನಿಂದ ಹೊಡೆತ ತಿಂದ ಮಾತ್ರಕ್ಕೆ
ಅವಳ ಪ್ರೀತಿಯ ಉತ್ಕಟತೆ ಹಾರಿಹೋಯಿತೇ? ಹಾಗೆ ಅವಳನ್ನು ಪ್ರೀ
ಸಿದ ಹುಡುಗ ಅವಳನ್ನು ಈ ಮದುವೆಯಿಂದ ಪಾರು ಮಾಡಲಾರನೇ
ಹಾಗೆ ಅವಳಿಗೆ ಒಲ್ಲದ ಮದುವೆಯಾದರೆ ಮುಂದೆ ಅವಳ ಪಾಡೇನು
ಇದೆಲ್ಲ ಅಸಹಜವಲ್ಲವೇ? ಆದರೆ ನಡೆದದ್ದಂತೂ ಅದು ಹೀಗೆಯೇ ಅಂತೆ
ವಿಮರ್ಶೆಗೆ ಬೆದರಿ ನಡೆಯಲು ಜೀವನವೇನು ಕಾದಂಬರಿಯಲ್ಲ. ಸತ್
ವನ್ನು ಮುಂದಿಟ್ಟುಕೊಂಡೇ ವಿಮರ್ಶೆ ಕಾದಂಬರಿಯ ಬೆಲೆ ಕಟ್ಟುತ್ತದೆ
ಹಾಗಾದರೆ ನನ್ನ ಕರುಣಾಳ ಗತಿ ಏನು? ಅವಳ ಸಂಸ್ಕಾರ, ಮನೊ
ಭೂಮಿಕೆ ಇವೆಲ್ಲವುಗಳ ಪ್ರಕಾರ ಅವಳ ಭವಿಷ್ಯ ಇತ್ಯರ್ಥವಾಗಬೇಕ
ಗಿದೆ. ಸುಧಾಕರ ಕರುಣಾಳನ್ನು ಮದುವೆಯಾಗಲು ಒಪ್ಪದಿದ್ದರೆ? ಬ
ಯುತ್ತ ಹೋದಂತೆ ಏನು ಸ್ಫುರಿಸುತ್ತದೋ ನೋಡಬೇಕು.

ಕಕ್ಕಿಗಾದ ಸಂಕಟವನ್ನು ನೋಡಿ ನನಗೆ ನೋವಾಗಿದೆ. ಅಪ್ಪ
ಆ ರೀತಿ ಅನ್ಯಾಯ ಮಾಡಬಾರದಾಗಿತ್ತು. ಏನೇ ಆಗಲಿ ಬಂಗಾರವನ್ನು
ಕೊಡಲು ಒಪ್ಪಿಕೊಂಡದ್ದೂ ಒಳ್ಳೆಯದೇ ಆಯಿತು. ಸುನೀತಾಳ ಭವಿಷ್ಯ
ವೊಂದು ಸುಗಮವಾಗಿಬಿಟ್ಟರೆ ತೀರಿತು......

## ಪ್ರಕರಣ : ೧೦

ಮರುದಿನದ ಬೆಳಕು ಕರುಣಳಲ್ಲಿ ಅಪೂರ್ವ ಕಾಂತಿಯನ್ನು ಎರೆದಿತ್ತು. ಆ ಬೆಳಗಿನ ಗಾಳಿ ನವಚೈತನ್ಯ, ಉತ್ಸಾಹಗಳನ್ನು ತುಂಬಿತ್ತು. ಅರಳುವ ಹೂಗಳು ಅವಳ ಮನವನ್ನರಳಿಸಿದ್ದವು. ಹಕ್ಕಿಗಳ ಹಾಡಿಗೆ ಶ್ರುತಿಗೂಡಿಸಿ ಅವಳ ಎದೆಯೂ ಹಾಡುತ್ತಿತ್ತು.

ಡಾಕ್ಟರರು ಬಂದು ಪರೀಕ್ಷಿಸಿದರು. ಅಪೂರ್ವ ಬದಲಾವಣೆಯನ್ನು ನೋಡಿ ತಮ್ಮ 'ಕೈಗುಣ'ವನ್ನು ತಾವೇ ಮೆಚ್ಚಿಕೊಂಡರು. "ಇನ್ನು ಔಷಧಿಯ ಅಗತ್ಯವಿಲ್ಲ. ಅವಳಿಗೆ ಚೈತನ್ಯ, ಬಲ ಬರುವದಕ್ಕಾಗಿ Tonic ಕೊಟ್ಟುಬಿಡಿ" ಎಂದು ಗಣಪತರಾಯರಿಗೆ ಹೇಳಿದರು.

ಸುಮಾರು ಹತ್ತು ಗಂಟೆಗೆ ಸುಧಾಕರ ಬಂದ. ನೇರವಾಗಿ ಕರುಣಳ ಕೋಣೆಗೆ ಹೋದ. ಕರುಣಾ ಎದ್ದು ಕುಳಿತಳು. ಅದೇಕೋ ಲಜ್ಜೆ ಅವಳಿಗೆ. ಹಿಂದಿನ ರಾತ್ರಿ ತಾನು ಆಡಿದ ಮಾತುಗಳು ನೆನಪಿಗೆ ಬಂದಿರಬೇಕು ಅವಳಿಗೆ.

ಅವಳ ಉತ್ಸಾಹ, ಮುಖದ ಮೇಲಿನ ಗೆಲವು, ಕಂಗಳಲ್ಲಿ ತುಂಬಿ ನಿಂತಿದ್ದ ಕಾಂತಿ, ಇವುಗಳನ್ನು ನೋಡಿದಾಗ 'ನಿನ್ನೆ ರಾತ್ರಿ ನಾನು ನೋಡಿದುದು ಇವಳನ್ನೇ?' ಎಂದು ಕೇಳಿಕೊಳ್ಳುವಂತಾಯ್ತು. ತನ್ನ ದರ್ಶನ, ತಾನು ಆಡಿದ ಸಹೃದಯದ ನುಡಿ, ತಾನು ಅವಳಿಗೆ ಮಾಡಿದ ಉಪಚಾರ ಇದರಿಂದ ಅವಳು ಚೇತರಿಸಿಕೊಂಡಳೆಂಬ ಅಭಿಮಾನ, ಹೆಮ್ಮೆ ಆತನಿಗೆ ಅಷ್ಟಾಗಿ ಇರಲಿಲ್ಲ. ಅದಕ್ಕಿಂತ ಹೆಚ್ಚಾಗಿ "ಈ ಹುಡಿಗೆ ನನಗಾಗಿ ಈ ಪರಿ ಕೊರಗುತ್ತಿದ್ದಳಲ್ಲ!" ಎಂದು ಕನಿಕರವಿತ್ತು. ತನ್ನ ಉಪಚಾರ, ಆರೈಕೆಯಿಂದ ಅವಳು ಮೊದಲಿನಂತೆ ಸುಖಿಯಾಗುವಂತಿದ್ದರೆ ಅದಕ್ಕಾಗಿ ಎಲ್ಲ ತೊಂದರೆ ವಹಿಸಲೂ ಸಿದ್ಧನಿದ್ದ. ನಿನ್ನಿನ ರಾತ್ರಿಯ ಒಂದು ಸನ್ನಿವೇಶ ಆತನಲ್ಲಿ ಬಹು ಆಳವಾಗಿ ಪರಿಣಾಮ ಮಾಡಿತ್ತು. "ಪಾಪ, ಎಂತಹ ಹುಚ್ಚು ಹುಡಿಗೆ!" ಎಂದು ಹಿಂದಿನ ರಾತ್ರಿ ಅವರ ಮನೆಯಿಂದ ಹೋಗುವಾಗ ಅಂದುಕೊಂಡಿದ್ದ. ಮರುದಿನ ಬೆಳಿಗ್ಗೆ ಬಂದಾಗ "ಎಂತಹ ಮುಗ್ಧ ಹುಡಿಗೆ! ಎಷ್ಟು ಸೂಕ್ಷ್ಮ ಅವಳ ಹೃದಯ!" ಎಂದುಕೊಂಡ.

"ಕುಳಿತುಕೊಳ್ಳಿ." ಎಂದು ಹೇಳಿ ಮಂಚದ ಒಂದು ಬದಿಗೆ ಜಾಗ ಮಾಡಿ ಕೊಟ್ಟಳು. ಒಳಗೊಂದು ಕುರ್ಚಿಯನ್ನಿಡಲು ಹೇಳಬೇಕೆಂದು ಬೆಳಿಗ್ಗೆ ಜ್ಞಾಪಿಸಿ

ಕೊಂಡಿದ್ದರೂ ಅದು ಹೇಗೋ ಮರೆತುಹೋಗಿತ್ತು.

ಸುಧಾಕರ ಹಿರಿಯ ಅಧಿಕಾರಿಯೆದುರು ಹೆದರುತ್ತ ಸಂಕೋಚದಿಂದ ಕೈ ಹೊಸೆಯುತ್ತ, ಮುಖದಲ್ಲಿ ನಗೆಬರುವಂತಹ ದೈನ್ಯತೆ ತಂದುಕೊಂಡು, ತುಸು ಹೆಚ್ಚುಕಡಿಮೆಯಾದರೆ ಕೆಳಗೆ ಬೀಳುವಷ್ಟು ಕುರ್ಚಿಯ ತುದಿಗೆ ಕೂಡುವ ಪ್ರಾಥಮಿಕ ಶಾಲಾ ಶಿಕ್ಷಕನಂತೆ ಕುಳಿತುಕೊಂಡ. ಇದನ್ನು ನೋಡಿ ಕರುಣಳಿಗೆ ನಗೆ ಬಂತು. ನಕ್ಕುಬಿಟ್ಟಳು. ಇದೇ ಹೊತ್ತಿಗೆ ಒಳಗಿನಿಂದ ಅರುಣಾ ಹಣ್ಣಿನ ರಸವನ್ನು ತೆಗೆದುಕೊಂಡು ಬಂದಳು. ಸುಧಾಕರನ ಸಂಕಟ ದೇವರಿಗೇ ಗೊತ್ತು. ಏಳಲಾಗದೆ ಸಂಕೋಚದಿಂದ ಕುಳಿತಲ್ಲಿಯೇ ಕುಳಿತ. ಅರುಣಾ ಬಂದು "ಇದು ನೋಡು, ಹಣ್ಣಿನ ರಸ ಇಟ್ಟಿದ್ದೇನೆ, ತೆಗೆದುಕೋ ಕರುಣಾ." ಎಂದು ಚಿಕ್ಕ ಮೇಜಿನ ಮೇಲಿರಿಸಿ ಅಲ್ಲಿ ನಿಲ್ಲದೆ ನಡೆದೇಬಿಟ್ಟಳು. ಗಣಪತ ರಾಯರು ಮೊದಲೆ ಸೂಚ್ಯವಾಗಿ ಹೇಳಿರಬೇಕು ಅವಳಿಗೆ.

ಇದೇಕೋ ಸುಧಾಕರನಿಗೆ ರುಚಿಸಲಿಲ್ಲ. ಉದ್ದೇಶಪೂರ್ವಕವಾಗಿಯೇ ಇದೆಲ್ಲ ನಡೆಯುತ್ತಿರಬಹುದೆಂಬ ಅನುಮಾನ ಸುಳಿದುಹೋಯಿತು ಒಂದುಸಲ ಅವನ ತಲೆಯಲ್ಲಿ. ಆದರೆ ಅರುಣಾಳ ಸಾತ್ವಿಕ ಮುಖ ಕಣ್ಣೆದುರು ಬಂದೊಡನೆ 'ಛೆ, ನನ್ನದೆಂತಹ ತಪ್ಪು ಕಲ್ಪನೆ' ಎಂದು ಅಂದುಕೊಳ್ಳುವನು.

ಕರುಣಾ ಗ್ಲಾಸನ್ನು ತೆಗೆದುಕೊಳ್ಳಬೇಕೆಂದಳು. ಆದರೆ ಅದು ಅವಳಿಗೆ ದೂರದಲ್ಲಿತ್ತು. ಇದನ್ನು ತಿಳಿದುಕೊಂಡು ಸೌಜನ್ಯದಿಂದ ಸುಧಾಕರ ಗ್ಲಾಸನ್ನು ತೆಗೆದುಕೊಂಡು ಅವಳ ಕೈಗೆ ಕೊಡಹೋದ. ಹಟಮಾರಿ ಹುಡಿಗೆಯಂತೆ ಕೈಕಟ್ಟಿಕೊಂಡು ಅದನ್ನು ಇಸಿದುಕೊಳ್ಳದೆ ಸುಮ್ಮನೆ ಕುಳಿತುಬಿಟ್ಟಳು. ಸುಧಾಕರನಿಗೆ ಅದರ ಇಂಗಿತ ಗೊತ್ತಾಗಿ "ಹೀಗೆ ತುಂಟತನ ಮಾಡಬಾರದು" ಎಂದು ಹೇಳಿದ.

"ನಾನೇನು ಮಾಡಲಿ, ನನ್ನ ಕೈಯಲ್ಲಿ ಶಕ್ತಿಯಿಲ್ಲ. ನೋಡುವುದಿಲ್ಲವೇ ನನ್ನನ್ನು?" ಎನ್ನುತ್ತ ಹುಬ್ಬುಗಂಟಿಕ್ಕಿ ಆತನ ಕಡೆಗೆ ನೋಡದೆಯೂ ನೋಡುತ್ತ ಕುಳಿತಳು.

"ಅರುಣಾಬಾಯಿಯವರನ್ನು ಕರೆಯಲಾ ?" ಎಂದು ಸುಧಾಕರ ಏಳಲು ತೊಡಗಿದ. ಅವಳು ಒಮ್ಮೆಲೆ ರೇಗಿದಳು. ಮುಖ ಕೆಂಪೇರಿತು. ಕೆಳಮುಟಿಯನ್ನು ಕಚ್ಚಿಕೊಳ್ಳುತ್ತ ಬಿರಬಿರನೆ ಸುಧಾಕರನನ್ನು ದಿಟ್ಟಿಸಿ ನೋಡಿದಳು. ಕೂಡುವಂತೆ

ಸನ್ನೆಗೈದಳು. ಕ್ಷಣದಲ್ಲಿ ಆ ಸಿಟ್ಟುಗೆದ್ದ ಮುಖ ಒಮ್ಮೆಲೆ ಮೆಲ್ಲಗೆ ನಗುತ್ತಿತ್ತು. "ಹೀಗೆ ತುಂಟತನ ಮಾಡಬಾರದು!" ಎಂದು ಅವನ ಮಾತನ್ನೆ ಅವನಿಗೆ ತಿರುಗಿಸಿದಳು.

ನಿರ್ವಾಹವಿಲ್ಲದೆ ಸುಧಾಕರ ಅವಳ ಹತ್ತಿರ ಕುಳಿತು ರಸವನ್ನು ಕುಡಿಸಿದ. ಕರುಣಾ ರಸ ಕುಡಿದು ದಿಂಬಿಗೊರಗಿದಳು. ಆಸ್ಥೆಯಿಂದ ಆತನೊಡನೆ ಮಾತ ನಾಡಿದಳು. ಕುತೂಹಲದಿಂದ ಅದೆಷ್ಟೋ ಪ್ರಶ್ನೆಗಳನ್ನು ಕೇಳಿದಳು. ತನ್ನೆದೆಯ ಬಯಕೆಯನ್ನು ಅತಿ ಸೂಕ್ಷ್ಮವಾಗಿ, ಪರ್ಯಾಯವಾಗಿ ಆತನೆದುರು ಹೇಳಬೇಕೆಂಬ ವಿಚಾರ ಸುಳಿದು ಸುಳಿದು ಮಾಯವಾಗುತ್ತಿತ್ತು.

ಒಂದು ಗಂಟೆಯ ವರೆಗೆ ಅಲ್ಲಿ ಕುಳಿತಿದ್ದ. ಕರುಣಾ ಆಡುವ ಪ್ರತಿ ಯೊಂದು ಮಾತಿನ ಹಿಂದೆ ಅಡಗಿದ ಅವಳ ಉತ್ಕಟಭಾವನೆಯನ್ನು ನೋಡು ತ್ತಿದ್ದ. ತನ್ನೊಳಗೇ ವಿಚಾರಿಸುತ್ತಿದ್ದ:

"....ಈಗ ಅವಳು ತನ್ನ ಬಗೆಗೆ ಭಾವಿಸಿದುದೇನು ?"

"...ಹೀಗೆ ನಡೆದರೆ ಇದು ಮುಂದೆ ಯಾವ ರೂಪಕ್ಕೆ ತಿರುಗಬಹುದು?"

"....ಇನ್ನು ಮುಂದೆ ತಾನು ಯಾವ ದಾರಿಯನ್ನಾರಿಸಬೇಕು ?"

ಈ ಮೂರು ಪ್ರಶ್ನೆಗಳ ಮೇಲೇ ಅವರಿಬ್ಬರ ಭವಿಷ್ಯ ರೂಪಿತವಾಗುವ ದಿತ್ತು.

ಕರುಣಳಿಗೆ ಈ ಪ್ರಶ್ನೆಗಳೇ ಇರಲಿಲ್ಲ.

ಸುಧಾಕರನಿಗೆ ಮಾತ್ರ ವಿಚಾರಗಳ ತಿಕ್ಕಾಟ ಪ್ರಾರಂಭವಾಗಿ ಏನೋ ನಿರ್ಣಯಕ್ಕೆ ಬಂದಂತೆ ಕೊನೆಯಲ್ಲಿ "ಅವಳಿಗೆ ಪೂರ್ತಿ ಗುಣವಾಗಿ, ಓಡಾಡಿ ಕೊಳ್ಳುವಂತೆ ಆಗಲಿ. ಮುಂದೆ ನೋಡಿದರಾಯ್ತು...." ಎಂದುಕೊಂಡ. ಅದ ರಂತೆ ಹೆಚ್ಚು ಸಂಕೋಚವಿಲ್ಲದೆ ಅವಳೊಡನೆ ಮಾತನಾಡಿದ. ವಿನೋದದ ಕತೆ ಹೇಳಿ ಅವಳ ಮನಸ್ಸನ್ನು ರಂಜಿಸಿದ. ಒಳ್ಳೆಯ ಸ್ನೆಹಿತನಂತೆ ಅವಳೊಡನೆ ನಡೆದುಕೊಂಡ.

ಹೊರಡುವ ಮುನ್ನ ಹೆಚ್ಚು ಸಲಿಗೆಯಿಂದ "ಸಾಯಂಕಾಲ ಬೇಗನೆ ಬಂದುಬಿಡಿರಿ. ಒಬ್ಬಳೆ ಕುಳಿತು ಕುಳಿತು ಬೇಸರವಾಗುತ್ತದೆ" ಎಂದು ಅಧಿಕಾರ ದಿಂದ ಹೇಳಿ ಕರುಣಾ ಮಂದಹಾಸ ಬೀರಿದಳು.

ಬಿಳಿಚಿಕೊಂಡ ಅವಳ ಮುಖದಲ್ಲಿ ಮಿಂಚಿದ ಹರುಷ ಸಂತೃಪ್ತಿಗಳು

ಆತನ ಹೃದಯವನ್ನು ಕಲಕಿದವು. ಒಣಗಿದ ತುಟಿಯಲ್ಲಿ ಮೂಡಿದ ಕಿರುನಗೆ, ನಿಸ್ತೇಜವಾಗಿದ್ದರೂ ಒಂದು ಬಗೆಯ ಸೌಮ್ಯ ಕಾಂತಿಯಿಂದ ಕೂಡಿದ ಕಂಗಳು, ಇವೆರಡನ್ನು ಸುಧಾಕರನಿಗೆ ತಿಳಿಯದಂತೆ ಆತನ ಹೃದಯದಲ್ಲಿ ಮುಚ್ಚಿಟ್ಟಳು ಕರುಣಾ.

* * *

ಸಾಯಂಕಾಲ ವೇಳೆಗೆ ಸರಿಯಾಗಿ ಮತ್ತೆ ಬಂದ. ತುಸು ಹೆಚ್ಚುಕಡಿಮೆ ಬೆಳಗಿನಂತೆಯೇ ಕಾರ್ಯಕ್ರಮ. ಒಂದೇ ಬದಲಾದವಣೆಯೆಂದರೆ ಆ ಸಂತೋಷದ ಮಾತುಕತೆಯಲ್ಲಿ ಅರುಣಾ ಗಣಪತರಾಯರೂ ಸೇರಿದ್ದರು.

* * *

ಪರೀಕ್ಷೆ ಸಮೀಪಿಸುತ್ತಿತು. ಅದರ ಎಚ್ಚರ ಸಂಪೂರ್ಣವಾಗಿ ಇತ್ತು. ರಾತ್ರಿಯೆಲ್ಲ ಮನಸುಗೊಟ್ಟು ಓದುತ್ತಿದ್ದ ಸುಧಾಕರ. ಅದರಲ್ಲಿಯೂ ದಿನಕ್ಕೆರಡು ಬಾರಿ ಕರುಣಳ ಮನೆಗೆ ಹೋಗಿಬರುವವನ್ನು ತಪ್ಪಿಸಿರಲಿಲ್ಲ. ಒಂದು ರೀತಿಯಿಂದ ಆತನ ಮನಸ್ಸೂ ಅದರಿಂದ ಹಗುರಾಗುತ್ತಿತ್ತು.

ಮಾಧವನಿಂದ ಯಾವುದನ್ನೂ ಆತ ಮುಚ್ಚಿಟ್ಟಿರಲಿಲ್ಲ. ಈಗೆರಡು ದಿನಗಳಿಂದ ಕರುಣಾಳ ಪ್ರಕೃತಿಯಲ್ಲಾದ ಪರಿವರ್ತನೆಯನ್ನು ಕೇಳಿ ಮಾಧವ ಹಿಗ್ಗಿದ್ದ. ತಾನೂ ಒಮ್ಮೆ ಅಲ್ಲಿಗೆ ಹೋಗಿ ಬರಬೇಕೆಂದುಕೊಂಡ. ಕರುಣಾ ಚೇತರಿಸಿಕೊಂಡು ಮೊದಲಿನಂತೆ ಓಡಾಡಿಕೊಳ್ಳುವ ಚಿತ್ರ ಸುಧಾಕರನ ಕಣ್ಣೆದುರು ಬಂದಾಗ ಆತನ ಹೃದಯ ಅತ್ಯಂತ ಸಮಾಧಾನ ತೃಪ್ತಿಗಳಿಂದ ತುಂಬಿ ನಿಲ್ಲುತ್ತಿತ್ತು. ಜೀವ ಜೀವಗಳನ್ನು ಅಂತರ್ಯಾಮಿಯಾಗಿ ಬಂಧಿಸುವ ಈ ಸ್ನೇಹ, ಆತ್ಮೀಯತೆಗಳನ್ನು ನೆನೆದಾಗ ಅವನಿಗೆ ವಿಲಕ್ಷಣವೆನಿಸುತ್ತಿತ್ತು. ಮನಸ್ಸಿನ ವರ್ತನೆ, ಬದಲಾವಣೆಗಳೆಲ್ಲ ಅವನಿಗೆ ಬಹು ವಿಚಿತ್ರವಾಗಿ ತೋರುತ್ತಿದ್ದವು.

ಈಗ ಕರುಣಳ ಬಗೆಗೆ ಆತನಿಗೆ ಕನಿಕರ, ಸ್ನೇಹ, ಸಹೃದಯತೆಗಳಿದ್ದವು. ನಿರ್ಮಲ ಹೃದಯದಿಂದ ತಾನು ಸುರಿಸಿದ ಸ್ನೇಹಜಲದಿಂದ ಕರುಣಳು ಸಾವನ್ನೇ ಗೆದ್ದಳೆಂಬುದನ್ನು ಕಂಡಾಗ ಸುಧಾಕರನಿಗೆ ಒಂದು ರೀತಿಯ ಅಭಿಮಾನವೆನಿಸುತ್ತಿತ್ತು.

ಆತ ಅವಳಲ್ಲಿ ತೋರಿದ ಅನುಕಂಪ, ಕರುಣೆ, ಕನಿಕರ, ದಯೆ, ಸ್ನೇಹ, ಇವೆಲ್ಲವುಗಳು ಕ್ಷಣಕ್ಷಣಕ್ಕೆ ಒಂದರೊಳಗೊಂದು ಕರಗಿ ಲೀನವಾಗಿ ಮತ್ತೆ

ಹೊಸ ವರ್ಣ, ರೂಪಗಳನ್ನು ತಾಳುತ್ತ ನಡೆದವು ಅವಳ ಹೃದಯದಲ್ಲಿ. ಆದರೆ ಸುಧಾಕರ ಸ್ನೇಹದ ಸೀಮೆಯನ್ನು ದಾಟಲಿಚ್ಛಿಸುತ್ತಿರಲಿಲ್ಲ.

ನಿತ್ಯದಂತೆ ಆ ದಿನ ಬೆಳಿಗ್ಗೆ ಮತ್ತೆ ಕರುಣಳ ಮನೆಯ ಕಡೆಗೆ ನಡೆದ. ಆದರೆ ನಿತ್ಯ ಹೋಗುವ ದಾರಿಯನ್ನು ಅಂದು ಬದಲಿಸಿ ಕಾಲೇಜಿನ ತೋಟದಲ್ಲಿ ಹಾಯ್ದು ಹೋದ. ತೋಟದಲ್ಲಿಯ ಗಿಡಬಳ್ಳಿಗಳೆಲ್ಲ ಪುಷ್ಪಾಲಂಕೃತವಾಗಿದ್ದವು. ಮನುಷ್ಯಸಹಜ ಪ್ರವೃತ್ತಿಯಿಂದ ಪ್ರೇರಿತವಾಗಿ ಅರಳಿದ ಗುಲಾಬಿಯೊಂದನ್ನು ಕಿತ್ತುಕೊಂಡು ಹೋದ.

ಕರುಣಳ ಮನೆ ಸಮೀಪಿಸುತ್ತಿರುವಂತೆ, ಮುಂದೆ ನಡೆಯುವದೇ ಸುಧಾಕರನಿಗೆ ಅಸಾಧ್ಯವಾಯ್ತು. ಅಡವಿಯಿಂದ ತಪ್ಪಿಸಿಕೊಂಡು ಊರಲ್ಲಿ ಹೊಕ್ಕ ಮೃಗವನ್ನು ನೋಡುವಂತೆ ಆತನನ್ನು ಬಾಗಿಲಲ್ಲಿ ನಿಂತು, ಕಿಟಕಿಯಲ್ಲಿ ಹಣಿಕಿ, ಒಂಮ ಕುಹಕದೃಷ್ಟಿಯಿಂದ ನೋಡಿ ಪಿಸುಪಿಸು ಮಾತನಾಡಿಕೊಂಡು ನಗುತ್ತಿದ್ದರು ನೆರೆಹೊರೆಯ ಜನ. ನೀರಿನ ಬಿಂದಿಗೆಯನ್ನು ಬಗಲಲ್ಲಿಟ್ಟುಕೊಂಡು ಬರುತ್ತಿದ್ದ ಒಬ್ಬಳಂತೂ ಸುಧಾಕರನನ್ನು ನೋಡುತ್ತ ಹಾಗೆಯೆ ನಿಂತುಬಿಟ್ಟಳು. ಇನ್ನೊಬ್ಬ ಮುಗ್ಧೆ ಜನ ತನ್ನನ್ನು ನೋಡುವದರ ಪರಿವೆಯಿಲ್ಲದೆ ಕಂಣರಳಿಸಿ ಬಾಯ್ತೆರೆದು ಸುಧಾಕರನನ್ನು ನೋಡಿ ಗಟ್ಟಿಯಾಗಿಯೇ ನಕ್ಕುಬಿಟ್ಟಳು. ಮತ್ತೊಬ್ಬಳು ವೃದ್ಧೆ ಸುಧಾಕರ ಮುಂನೆ ಸಾಗಿದಂತೆ, ಹೊರಳಿದಂತೆ, ತನ್ನ ಕತ್ತನ್ನು ಹೊರಳಿಸುತ್ತ 'ಇದೇನ್ ಅಲೌಕಿಕರೇ ತಾಯೀ....!' ಎಂದುಬಿಟ್ಟಳು. ತುಂಟ ವಯಸ್ಸಿನ ಕಿಡಿಗೇಡಿ ಯುವಕರಿಬ್ಬರು ಅರ್ಥಪೂರ್ಣವಾಗಿ ಇವನತ್ತ ನೋಡಿ ಹುಬ್ಬು ಹಾರಿಸಿ ತಮ್ಮೊಳಗೇ ನಕ್ಕರು.

ಇದೆಲ್ಲವನ್ನೂ ಸುಧಾಕರ ಗಮನಿಸುತ್ತಲೇ ನಡೆದಿದ್ದ. ಆದರೆ ತನ್ನ ನಿರ್ಮಲ ಉದ್ದೇಶವನ್ನು ನೆನೆದು ಅದಕ್ಕೆ ಆತ ಬೆಲೆ ಕೊಟ್ಟಿರಲಿಲ್ಲವಾದರೂ, ಜನರ ಆ ಕುತ್ಸಿತ ಕುತೂಹಲದ ನೋಟಕ್ಕೆ ಮಾತ್ರ ಒಳಗೊಳಗೇ ಬಹಳ ಗಾಸಿಯಾದ.

ಸುಧಾಕರ ಮನೆಯಲ್ಲಿ ಕಾಲಿಟ್ಟಾಗ ಪಡಸಾಲೆಯಲ್ಲ ಯಾರೂ ಕಾಣಿಸಲಿಲ್ಲ. ಗಣಪತರಾಯರು ಸಾಯಂಕಾಲದ ವರೆಗೆ ಬರುವದಾಗಲಿಕ್ಕಿಲ್ಲೆಂದು ಹೇಳಿ ಕಳುಹಿ,'ವಸಂತೋತ್ಸವದ ವಿಶೇಷಾಂಕ'ದ ಸಿದ್ಧತೆಯಲ್ಲಿ ತೊಡಗಿದ್ದರು. ಅದಕ್ಕಾಗಿಯೆ ಬೇಗನೆ ಆಫೀಸಿಗೆ ಹೋಗಿದ್ದರು.

ಅರುಣಾ ಮನೆಗೆಲಸದಲ್ಲಿ ತೊಡಗಿದ್ದಳು.

ಹಿಂದೆ ನಡೆದ ಪ್ರಸಂಗದಿಂದ ಸುರೇಶ ಕರುಣಳನ್ನು ಕಾಣುವದೇ ಸಾಧ್ಯವಾಗಿರಲಿಲ್ಲ. ಅಂದು ಬೆಳಿಗ್ಗೆ ಕರುಣಾ ಮನೆಯಲ್ಲಿ ಓಡಾಡುತ್ತಿರುವದನ್ನು ಗಮನಿಸಿ ನೆಗೆಯುತ್ತ ಬಂದ. ಆತನನ್ನು ಕಂಡು ಕರುಣಾ ಹಿಗ್ಗಿದ್ದಳು. ಆತನಿಗೆ ತನ್ನ ಕೋಣೆಯಲ್ಲಿರಲು ಹೇಳಿ ಸ್ನಾನಕ್ಕೆ ಹೋಗಿದ್ದಳು.

ಸುರೇಶ ಸುಮ್ಮನೆ ಕೂಡಲಾರದೆ ಕೋಣೆಯನ್ನು ಶುಚಿಯಾಗಿರಿಸಿ, ಅಲಂಕರಿಸಿ ಗೋಡೆಯಲ್ಲಿ ಊದಿನಕಡ್ಡಿಗಳನ್ನು ಚುಚ್ಚುವ ಸಾಹಸದಲ್ಲಿ ನಿರತನಾಗಿದ್ದ. ಬಾಗಿಲ ಸದ್ದನ್ನು ಕೇಳಿ ಕರುಣಳೇ ಬಂದಳೆಂದು ತಿಳಿದು "ನೋಡು ಕರುಣಾ...."ಎನ್ನುತ್ತ ಮುಖ ತಿರುವಿ ತಾನು ನಿಂತ ಸ್ಟೂಲಿನ ಮೇಲಿಂದ ಜಿಗಿದ.

ಅಪರಿಚಿತರನ್ನು ಕಂಡು, ಮೊದಲು ಮಾತು ಬರಲಿಲ್ಲ ಆತನಿಗೆ.

"ಕರುಣಾ ಎಲ್ಲಿದ್ದಾಳೆ?" ಎಂದು ಸುಧಾಕರ ಕೇಳಿದ.

"ಸ್ನಾನದ ಮನೆಯಲ್ಲಿ." ಎಂದು ಉತ್ತರಿಸಿದವನೇ ಒಳಗೆ ಓಡಿಹೋಗಿ ಅರುಣಳಿಗೆ ಸಂದೇಶ ಮುಟ್ಟಿಸಿದ.

ಸುಧಾಕರ ಒಳಗೆ ಕಾಲಿಡಬೇಕೆನ್ನುವಷ್ಟರಲ್ಲಿ ಒಳಗಿನಿಂದ ಸುರೇಶ ಬಂದು, "ಅರುಣಕ್ಕ ನಿಮ್ಮನ್ನು ಒಳಗೇ ಕರೆಯುತ್ತಾರೆ" ಎಂದು ತಿಳಿಸಿದ.

ಇದು ಸ್ವಾಭಾವಿಕವಾಗಿದ್ದರೂ ಸುಧಾಕರ ಇದನ್ನು ನಿರೀಕ್ಷಿಸಿರಲಿಲ್ಲ. ಸುರೇಶನನ್ನು ಹಿಂಬಾಲಿಸಿ ಅಡುಗೆಮನೆಗೆ ನಡೆದ. ತುಂಟ ಸುರೇಶ ಮತ್ತೆ ಹೊರಗೆ ನೆಗೆದ.

ಮಣೆ ಹಾಕುತ್ತ "ಕುಳಿತುಕೊಳ್ಳಿರಿ." ಎಂದು ಸ್ವಾಗತಿಸಿದಳು ಅರುಣಾ. ಸುಧಾಕರ ಸುಮ್ಮನೆ ಕುಳಿತುದನ್ನು ಕಂಡು "ಇವರಿಗೆ ಆಫೀಸಿನಲ್ಲಿ ಹೆಚ್ಚು ಕೆಲಸ ಈ ದಿನ. ಸಾಯಂಕಾಲ ಬರುತ್ತೇವೆಂದು ಹೇಳಿಹೋಗಿದ್ದಾರೆ." ಎಂದು ತಾನೇ ಮಾತಿಗಾರಂಭಿಸಿದಳು.

"ಪತ್ರಿಕೆಯ ವ್ಯವಸಾಯವೇ ಹೀಗೆ." ಎಂದು ಸುಧಾಕರ ಉತ್ತರಿಸಿದ. ಆ ಉತ್ತರ ಯೋಗ್ಯ ಇಲ್ಲವೆ ಸಮಯೋಚಿತವೆಂಬ ಪ್ರಶ್ನೆ ಆತನಿಗಿರಲಿಲ್ಲ.

ಅರುಣಾ ಚಹದ ಕಪ್ಪು ತಂದು ಮುಂದಿರಿಸಿ, ದೇವರ ಕಟ್ಟಿಗೆ ಆತು ನಿಂತುಕೊಂಡಳು. ಆ ವಿಲಕ್ಷಣ ಘಟನೆ ನಡೆದಂದಿನಿಂದ ಸುಧಾಕರನನ್ನು ಒಂದುಬಾರಿ ಮಾತನಾಡಿಸಬೇಕೆಂಬ ಹಂಬಲ ಒಳಗೇ ಪ್ರಬಲವಾಗಿ ಅವಳನ್ನು ಕಾಡುತ್ತಿತ್ತು.

ಆದರೆ ಅದಕ್ಕೆ ತಕ್ಕ ವೇಳೆ, ಸನ್ನಿವೇಶ ಈ ವರೆಗೆ ಒದಗಿ ಬಂದಿರಲಿಲ್ಲ. ಈ ನಾಲ್ಕಾರು ದಿನಗಳಲ್ಲಿ ಕರುಣಾ ಸುಧಾಕರರಲ್ಲಿ ನಡೆಯುತ್ತಿದ್ದ ಮಾತುಕತೆ, ಆತ ನೀಡುತ್ತಿದ್ದ ಉಪಚಾರ, ಆರೈಕೆಗಳನ್ನು ನೋಡಿ ಅವಳಿಗೆ ಹಿಗ್ಗಾಗಿತ್ತು."ತಂಗಿಯ ಬದುಕನ್ನು ಉದ್ಧರಿಸಿದ ದೇವರು." ಎಂದು ಸುಧಾಕರನನ್ನು ತಿಳಿದಿದ್ದಳು, ನಂಬಿದ್ದಳು. ಸ್ತ್ರೀಸಹಜ ಸಂಕೋಚವನ್ನು ಕೊನೆಗೊಂದು ಬಾರಿ ಮೀರಿ "ಕ್ಷಮಿಸಿರಿ, ನಿಮಗೊಂದು ಮಾತು ಹೇಳಬೇಕೆಂದಿದ್ದೇನೆ...." ಎಂದು ಅಂದಳು.

ಸುಧಾಕರ ಅವಳೆಡೆಗೆ ಒಮ್ಮೆ ನೋಡಿದ. ಸಾತ್ವಿಕ ಕಳೆಯ ಅವಳ ಮುಖದಲ್ಲಿ ಯಾಚನೆಯಿತ್ತು. "ತಂಗಿಯ ಕೈ ಬಿಡಬೇಡಿ" ಎನ್ನುವ ಸೂಚನೆಯಿತ್ತು ಕಂಣಲ್ಲಿ. ಗಂಟಲು ಸರಿಪಡಿಸಿಕೊಂಡು "ಕರುಣಳ ವಿಷಯ ನಿಮಗೆ ತಿಳಿದೇ ಇದೆ. ನಿಮ್ಮಿಂದ ಅವಳು ಬದುಕಿದಳು. ಅವಳಿಗಾಗಿ ನಿಮಗೆ ಬಹಳ ತೊಂದರೆ ಕೊಟ್ಟೆವು ನಾವು. ನನ್ನ ಒಂದೇ ಒಂದು ಸ್ವಾರ್ಥದ ಪ್ರಾರ್ಥನೆ...." ಎನ್ನುವಾಗ ಅರುಣಳಿಗೆ ಹಿಂದಿನ ದುಃಖವೆಲ್ಲ ತುಂಬಿಬಂದಿತ್ತು. "ನನಗೆ ಅವಳೊಬ್ಬಳೆ ಕರುಳಬಳ್ಳಿ. ತಾಯಿ ತಂದೆಗಳನ್ನು ಕಳೆದುಕೊಂಡು ಬೆಳೆದೆವು...." ಎಂದು ಹೇಳುತ್ತ ಹೇಳುತ್ತ ತಾವು ಸಣ್ಣವರಿದ್ದಾಗ ಕಳೆದ ಆ ದಾರುಣ ವರುಷಗಳ ಕಲ್ಪನೆಯನ್ನು ಸುಧಾಕರನಿಗೆ ತಂದುಕೊಟ್ಟಳು.

ಸುಧಾಕರನ ಮನ ಕಲಕಿಹೋಯಿತು. ಕರುಣಳ ಕರುಣಾಪೂರ್ಣ ಕತೆಯನ್ನು ಕೇಳಿ ಮರುಗಿದ.

ಕೊನೆಗೆ ಅರುಣಾ "ಅವಳ ಕೈ ಬಿಡಬೇಡಿರಿ. ನೀವಿಲ್ಲದೆ ಅವಳು ಬದುಕಲಾರಳು...." ಎಂದು ಹೇಳಿ ಮುಗಿಸುವಷ್ಟರಲ್ಲಿ ಅಳು ಬಂದುಬಿಟ್ಟಿತು. ಸೆರಗಿನ ಚುಂಗಿನಿಂದ ಕಣ್ಣೊತ್ತಿಕೊಂಡಳು.

ಅರುಣಳ ಕಂಬನಿ ಸುಧಾಕರನ ಮನದಲ್ಲಿ ಹೊಯ್ದಾಟವನ್ನೆಬ್ಬಿಸಿತು. ಅವಳು ಹೇಳುವಾಗಿನ ಅವಳ ನುಡಿಯಲ್ಲಿಯ ದುಃಖಾರ್ದ್ರ ಮಾರ್ದವ, ಕೊರಗು, ದೀನ ಯಾಚನೆಗಳು ಸುಧಾಕರನ ಮನವನ್ನೇ ಬಂಧಿಸಿದ್ದವು. ಒಮ್ಮೆಲೆ "ನಾನವಳ ಕೈ ಬಿಡಲಾರೆ." ಎಂದು ಹೇಳಿಬಿಡಬೇಕೆನ್ನುವಷ್ಟು ಆತನ ಮನಸ್ಸು ಸಿದ್ಧವಾಗಿತ್ತು. ಆದರೆ ಆಗ ಆತ ಏನನ್ನೂ ಹೇಳಲಿಲ್ಲ. ಹಾಗೆಯೇ ಎದ್ದುಬಿಟ್ಟ. ಅವನಿಗೆ ಕರುಣಳ ಕೋಣೆಯಲ್ಲಿ ಕಾಲಿಡಲು ಏಕೋ ಮನಸ್ಸಾಗಲಿಲ್ಲ. ಆದರೆ ಕೈಯಲ್ಲಿ ಹಿಡಿದಿದ್ದ ಗುಲಾಬಿಯ ನೆನಪಾಯ್ತು. ಏನೋ ನೆನೆದು ಒಳಗೆ

ಕೀಲಿಟ್ಟ. ಶುಭ್ರಸ್ನಾನಮಾಡಿ ಶ್ವೇತವಸನದಲ್ಲಿ ಮಲಗಿದ್ದ ಕರುಣಳನ್ನು ಕಂಡಾಗ ಆತನ ಮೊದಲಿನ ನಿರ್ಧಾರ ಕುಸಿಯಿತು. ಅವಳ ಬಳಿ ಬಂದು ಗುಲಾಬಿಯನ್ನು ಅವಳ ಕೈಗಿರಿಸಿದ.

ಕರುಣಾ ಅದನ್ನು ಮೂಸಿ ನೋಡುತ್ತ "ಮುಡಿದುಕೊಳ್ಳಲಾ?" ಎಂದು ಅರ್ಥಪೂರ್ಣವಾಗಿ ಕೇಳಿದಳು.

"ನಾನೇನು ಹೇಳಲಿ?" ಎಂದುತ್ತರಿಸಿದ ಸುಧಾಕರ.

ಕರುಣಳ ಎದುರಿಗೆ ಕುಳಿತಾಗೆಲ್ಲ ಸುಧಾಕರನ ವರ್ತನೆಯ ರೀತಿಯೇ ಬೇರೆಯಾಗಿಬಿಡುತ್ತಿತ್ತು. ಬಹುಶಃ ಅವಳಂತೆ ಆತನೂ ಕನಸಿಗನಾಗುತ್ತಿರಬೇಕು. ಅಲ್ಲಿಂದ ಹೊರಗೆ ಬಂದಾಗ ಮಾತ್ರ ತನ್ನದಾರುಣ ಬದುಕಿನ ಚಿತ್ರವನ್ನು ನೆನೆದು ಕೇಳಿಕೊಳ್ಳಬಾರದ ಅನೇಕ ಭಯಾನಕ ಪ್ರಶ್ನೆಗಳನ್ನು ತಾನೇ ಕೇಳಿಕೊಳ್ಳುತ್ತಿದ್ದ. ಅವುಗಳಿಗೆ ಸಮರ್ಪಕ ಉತ್ತರ ಕೊಡಲಾರದೆ ಜರ್ಜರಿತನಾಗುತ್ತಿದ್ದ. ಈ ರೀತಿಯಾದ ವಿಚಿತ್ರ ಘಟನೆ ತನ್ನ ಜೀವನದಲ್ಲೇ ಏಕೆ ಸಂಭವಿಸಬೇಕೆಂದು ಕೇಳಿಕೊಂಡ. ಉತ್ತರವೇನೂ ಬಾರದ್ದಕ್ಕೆ ಮೂಕನಾಗಿ ಅವಳೆದುರೇ ಕುಳಿತಿರುವಾಗ ಈ ಸ್ನೇಹ, ಸಲಿಗೆ, ಮನೆಗೆ ಬರುವದು, ಇವುಗಳನ್ನೆಲ್ಲ ನಿಲ್ಲಿಸದಿದ್ದರೆ ಮುಂದೆ ತನ್ನ ಸ್ಪಷ್ಟ ಅಭಿಪ್ರಾಯವನ್ನು ತಿಳಿದ ಮೇಲೆ ಕರುಣಳಿಗೆ ಇವಕ್ಕೂ ಹೆಚ್ಚಿನ ಆಘಾತವಾದೀತೆಂದು ವಿಚಾರಿಸಿ ನಡುಗಿದ. ತಾನು ಇಲ್ಲಿಯವರೆಗೆ ತನ್ನನ್ನು ನಂಬಿದ ಮುಗ್ಧ ಹುಡಿಗೆಯನ್ನು ವಂಚಿಸುತ್ತಿರುವಂತೆ ಅವನಿಗೆ ಭಾಸವಾಯಿತು. ಅವಳ ಭವಿಷ್ಯವನ್ನು ನೆನೆದು ಬೆದರಿದ.

ಕರುಣಳ ಕಲ್ಪನೆಯೇ ಬೇರೆಯಾಗಿತ್ತು. 'ಹೃದ್ಯವಾಗಿದ್ದ ಪ್ರೇಮವನ್ನು ಯಾವ ಶಬ್ದಗಳಲ್ಲಿ ಅಭಿವ್ಯಕ್ತಗೊಳಿಸಲಿ?' ಎಂದು ಆಲೋಚಿಸುತ್ತ ಮಧುರ ನೆನಹಿನಲ್ಲಿ ಸುಧಾಕರ ಮುಳುಗಿರಬಹುದೆಂದುಕೊಂಡಳು. ತನ್ನ ಇಷ್ಟದೇವತೆ ತೃಪ್ತಿಯಾಗುವಂತೆ ಕಣ್ತುಂಬ ನೋಡುತ್ತ ಕುಳಿತವಳು ಆತನ ಗಮನವನ್ನು ತೀವ್ರವಾಗಿ ಸೆಳೆಯಲು ಒಮ್ಮೆಲೆ ನರಳಿದಳು.

ಬೆಚ್ಚಿದ ಸುಧಾಕರ "ಯಾಕೆ ಕರುಣಾ?" ಎಂದು ಆರ್ತನಾಗಿ ಕೇಳಿದ. ಈ ಆರ್ತ ನುಡಿ ಅವಳಿಗೆ ಬಹು ಪ್ರಿಯವಾಗಿತ್ತು. ಸದಾ ರೋಗಿಯಾಗಿಯೇ ಬಿದ್ದುಕೊಂಡಿರಬೇಕೆಂದು ಬಯಸುತ್ತಿದ್ದಳವಳು.

ಮನದ ಬಯಕೆಯನ್ನು ತೃಪ್ತಿಗೊಳಿಸಲು ಎಂತಹ ವಿಚಿತ್ರ ದಾರಿ!

"ತಲೆಶೂಲೆ!" ಎಂದು ಮುಖ ಹೊರಳಿಸಿದಳು.

ಸುಧಾಕರನ ಸಮಸ್ಯೆ ಇನ್ನೂ ಆತನನ್ನು ಬಿಟ್ಟಿರಲಿಲ್ಲ. ಅವಳಿಂದುದರ ಕಡೆಗೆ ಗಮನವಿತ್ತಾದರೂ ಮನಸ್ಸು ವಿಹ್ವಲವಾಗಿತ್ತು.

"ಮತ್ತೆ ಜ್ವರ ಬಂದಿದೆಯೇನೋ, ಹಣೆ ಮುಟ್ಟಿ ನೋಡಿರಿ!" ಎಂದಳು.

ಅವಳ ಕಡೆಗೆ ನೋಡಿದ; ಹಣೆಯ ಮೇಲೆ ಕೈಯಿಟ್ಟ.

ಇಬ್ಬರಿಗೂ ಅದು ಮೊದಲ ಸ್ಪರ್ಶ.

ಕರುಣಳ ಬಹುದಿನದ ಬಯಕೆ ಅದು. ಅದಕ್ಕಾಗಿ ಇಷ್ಟೆಲ್ಲ ಯಾತನೆ ಅನುಭವಿಸಿದ್ದಳು. ಒಂದು ಕ್ಷಣ ಅವಳು ಸುಖಮೂರ್ಛನಕ್ಕೊಳಗಾದಳು. ಸುಖ ಸಂವೇದನೆಯಿಂದ ಒಂದು ಸಲ ಕ್ಷೀಣವಾಗಿ ಉಸಿರೆಳೆದಳು.

ಅವಳ ಕಂಗಳು ಮುಚ್ಚಿದ್ದವು. ಸಾವಕಾಶವಾಗಿ ಹಣೆಯ ಮೇಲಿದ್ದ ಸುಧಾಕರನ ಮುಂಗೈಯ ಮೇಲೆ ಕೈಯಿಟ್ಟಳು; ಹಿಡಿದಳು; ಪುಷ್ಟವಾಗಿ ತುಂಬಿಕೊಂಡ ಆತನ ಮುಂಗೈಯನ್ನು ತನ್ನ ಕೃಶವಾದ ಕೋಮಲ ಕೈಗಳಿಂದ ಅಪ್ಪಿದಳು. ಹಗುರಾಗಿ ಆತನ ಕೈಯನ್ನು ಕೆಳಗೆ ಸರಿಸಿದಳು. ಮತ್ತೆ ತೆಗೆದುಕೊಂಡು ತನ್ನ ಕೆನ್ನೆಗೊತ್ತಿಕೊಂಡಳು.

ಸುಧಾಕರನಿಗೆ ತಡೆಯಲಾಗಲಿಲ್ಲ. ಕೈಯನ್ನು ಕಿತ್ತಿಕೊಳ್ಳಬೇಕೆಂದು ಎನಿಸಿತು. 'ಪಾಪ!' ಎನ್ನುತ್ತ ಅವಳ ಮುಖ ನೋಡಿ ಮುಗುಳ್ನಕ್ಕ ಸುಮ್ಮನಾದ.

ಕರುಣಳ ಮೈಯೆಲ್ಲ ಕರಗಿದಂತಾಗಿತ್ತು. ಆತನ ಕೈಯನ್ನು ಸಾವಕಾಶವಾಗಿ ತನ್ನ ತುಟಿಗೊತ್ತಿಕೊಂಡಳು.

ಹೊರಗೆ ಬರಲಾರದ ಕಿಚ್ಚಿನಲ್ಲಿ ಬಿದ್ದಂತಾಗಿದ್ದ ಸುಧಾಕರ.

ಅವಳ ಕೈಬಿಗಿತ ಸಾವಕಾಶವಾಗಿ ಸಡಿಲಾಯಿತು. ಆತ ಮೆಲ್ಲಗೆ ಕೈಯನ್ನು ಹಿಂತೆಗೆದುಕೊಳ್ಳಹತ್ತಿದ. ಒಂದು ನಿಮಿಷ ತಡೆದ. ಕರುಣಾ ನಿದ್ದೆ ಹೋಗುವಂತೆ ಕಂಡಿತು. ನಿಧಾನವಾಗಿ ಕೈ ಬಿಡಿಸಿಕೊಳ್ಳಹತ್ತಿದ, ಅವಳಿಗೆ ಎಚ್ಚರವಾಗದಂತೆ. ಕಂಣು ಮುಚ್ಚಿದ್ದರೂ ಅವಳಿಗೆ ಇದೆಲ್ಲ ಅರ್ಥವಾಗುತ್ತಿತ್ತು. ಹಿಂದೆ ಸರಿಯುತ್ತಿರುವ ಆತನ ಕೈಯನ್ನು ಕಂಡು ಸುಧಾಕರನ ಮನದಲ್ಲಿಯ ಭಾವನೆ ವಿಚಾರಗಳನ್ನು ಅವಳು ಅರ್ಥಮಾಡಿಕೊಂಡಳು.

ಅವನ ಕೈಯನ್ನು ಮುದ್ದಿಸಿ "ತುಂಟ ಹುಡುಗ!" ಎಂದು ಮುಖ ಮುಚ್ಚಿಕೊಂಡರೂ ಬೆರಳ ಸಂದಿನಿಂದ ಆತನನ್ನು ನೋಡುತ್ತಿದ್ದಳು. ಸುಧಾಕರನ ದೇಹ

ದಲ್ಲಿಯ ರಕ್ತವೆಲ್ಲ ಅಂಗೈಯಲ್ಲಿ ಹರಿದು ಬಂದು ತುಂಬಿ ನಿಂತಿತ್ತು. ಕರುಣಳ ತುಟಿ ಸೋಂಕಿದ ಭಾಗ ತುಸು ತೇವವಾಗಿತ್ತು. ಕೈಯನ್ನು ಹಿಂತೆಗೆದುಕೊಳ್ಳ ಬೇಕೆನಿಸಲಿಲ್ಲ. ಕರುಣಾ ಕಣ್ಣು ಮುಚ್ಚಿಕೊಂಡಳು.

"ಕರುಣಾ!...." ಎಂದು ಸುಧಾಕರ ಅಂದಂತಾಯಿತು.

ವೇಗವಾಗಿ ಉಸಿರಾಡಿಸುತ್ತ ಆತನ ಕೈಯನ್ನೆತ್ತಿಕೊಂಡು ತನ್ನ ಕೊರಳ ಲ್ಲಿಟ್ಟುಕೊಂಡು ಮಲಗಿದಳು. ಕಣ್ಣು ತೆರೆಯಬೇಕೆಂದೆನಿಸಲಿಲ್ಲ.

ಸುಧಾಕರನ ಕಂಣಲ್ಲಿ ಕಂಬನಿ ಕಾಣಸಿಕೊಳ್ಳಲಿಲ್ಲ. ಆದುದರಿಂದಲೆ ಅವಳ ಹೃದಯದಲ್ಲಿ ವಿಕಾರವಾಗಿ ಭೋರಿಡುವ ಸಂಕಟ ಕರುಣಳಿಗೆ ಕಾಣಲಿಲ್ಲ. ಕೊನೆಗೆ ಹೊಯ್ದಾಟವನ್ನು ಮೆಟ್ಟಿ "ಹೊತ್ತಾಯ್ತು ಕರುಣಾ, ನಾನು ಹೋಗು ತ್ತೇನೆ." ಎಂದು ಧೈರ್ಯ ತಂದುಕೊಂಡು ಹೇಳಿದ.

ಕರುಣಳನ್ನು ರಸಲೋಕದಿಂದ ಕೆಳಗೊಗೆದಂತಾಯ್ತು. ಕಣ್ಣೆವೆ ತೆರೆದಳು. ಒಂದೆರಡು ಕಂಬನಿಯ ಹನಿಗಳು ಪಳಕ್ಕನೆ ಉರುಳಿದವು. ಅಲ್ಪೋರವ ಧ್ವನಿ ಯಲ್ಲಿ "ಸಾಯಂಕಾಲ ಬರುವದಿಲ್ಲವೇ?" ಎಂದು ನಿರಾಸೆಯಿಂದ ಕೇಳಿದಳು.

"ಸಾಧ್ಯವಾಗಲಿಕ್ಕಿಲ್ಲ." ಎಂದು ವಿಷಾದಪೂರ್ಣವಾಗಿ ಹೇಳಿದ.

"ನಾಳೆ ಬರುವದಿಲ್ಲವೇ ?"

ಆತ ಮಾತನಾಡಲಿಲ್ಲ.

"ನಾಳೆ ಬರುವದಿಲ್ಲವೇ ?"

ಇದ್ದ ಸಂಗತಿಯನ್ನು ಹೇಳಿಬಿಡಬೇಕೆಂದೆನಿಸಿತು ಸುಧಾಕರನಿಗೆ. ಆದರೂ ತಡೆಹಿಡಿದ.

"ನಾಳೆ ಮನೆಯಲ್ಲಿ ಸತ್ಯನಾರಾಯಣ ಪೂಜೆಯಿದೆ. ನೀವು ಬರಲಿಲ್ಲವಾ ದರೆ ನಾನು ಉಣ್ಣುವದೇ ಇಲ್ಲ."

ಕರುಣಾ ಹೆದರಿಸುವದಕ್ಕೆ ಹಾಗೆ ಹೇಳುವವಳಲ್ಲವೆಂಬುದರ ಅನುಭವ ಆತನಿಗಿತ್ತು.

"ಯಾಕೆ ಮಾತನಾಡುವದಿಲ್ಲವೇ ?"

ಸುಧಾಕರನ ಹೃದಯ ಪುಡಿಪುಡಿಯಾಗಿತ್ತು. "ಆಂ ?" ಎಂದು ಎಚ್ಚತ್ತ ವನಂತೆ ಕೇಳಿದ ನಂತರ ಅವಳು ಕೇಳಿದ ಪ್ರಶ್ನೆ ನೆನಪಾಗಿ "ತಂದೆಯವರಿಂದ ಕಾಗದ ಬಂದಿದೆ. ಅವಶ್ಯ ಹೋಗಲೇಬೇಕಾಗಿದೆ. ಇಂದು ಮಧ್ಯಾಹ್ನ...."

"ಬೇಗ ಬರುವಿರಲ್ಲವೇ ?"

"ನಾಳೆ ಸಾಯಂಕಾಲ ಬಂದುಬಿಡುತ್ತೇನೆ." ತಾನಾಡುತ್ತಿರುವ ಮಾತಿನ ಅರ್ಥವೇ ಆತನಿಗಾಗುತ್ತಿರಲಿಲ್ಲ.

"ಹಾಗಾದರೆ ನಾಳೆ ಸಾಯಂಕಾಲದ ವರೆಗೆ ನಾನು ಕಾಯ್ದುಕೊಂಡು ಕುಳಿತಿರುತ್ತೇನೆ. ನೀವು ಬಾರದಿದ್ದರೇನು ಮಾಡುತ್ತೇನೆ ಗೊತ್ತೇ?"

"ಏನು?" ಎಂದು ಭಾರವಾಗಿ ಅವಳೆಡೆ ನೋಡಿದ.

"ಎಲ್ಲಿಯಾದರೂ ಬಿದ್ದು ಪ್ರಾಣಕೊಡುತ್ತೇನೆ." ಎಂದು ಹೇಳುವಾಗ ಕಂಣೀರು ಚಿಮ್ಮಿತು.

ಮತ್ತೆ ರೋಗ ಮರುಕಳಿಸಿತೇನೋ ಎಂದು ಸುಧಾಕರ ಬೆದರಿ "ಹಾಗೇನು ಇಲ್ಲ" ಎಂದು ತನ್ನ ಮನದಲ್ಲಿಯ ವಿಚಾರಗಳನ್ನು ಮರೆಮಾಜುತ್ತ ಹೇಳಿದ. ಹೇಳಿ ಬಹುಪ್ರಯಾಸದಿಂದ ಅಲ್ಲಿಂದೆದ್ದ.

* * *

ತಿರುಗಿ ಹಾಸ್ಟೆಲಿಗೆ ಬಂದ. ಆ ದಿನ ಕಾಲೇಜಿಗೆ ಹೋಗಲಿಲ್ಲ. ಹೊಯ್ದಾಡಿ ಹೊಯ್ದಾಡಿ ಯಾವುದನ್ನೂ ನಿರ್ಧರಿಸಲಾರದಾದ.

ಕೊನೆಗೆ ಗಣಪತರಾಯರಿಗೊಂದು ಕಾಗದ ಬರೆದ:

ಶ್ರೀ. ಗಣಪತರಾಯರಿಗೆ, ದಿನಾಂಕ......

"ನಾನು ದುರ್ದೈವಿ. ಕರುಣಳ ಆರೋಗ್ಯಕ್ಕಾಗಿ ನಾಟಕವನ್ನಾಡಿದೆ. ಅವಳ ಎದುರು ನನ್ನ ವಿಚಾರಗಳನ್ನು ಹೇಳುವ ಧೈರ್ಯ ನನಗೆ ಆಗಲಿಲ್ಲ. ಈಗೂ ಆ ಧೈರ್ಯ ನನಗಿಲ್ಲ. ಅವಳು ಕಟ್ಟಿಕೊಂಡ ಆಸೆಯುನ್ನೆಲ್ಲ ನಾನು ಈಗ ಸುಟ್ಟು ಹಾಕುತ್ತಿದ್ದೇನೆ. ತುಂಬ ಯೋಚಿಸಿ ಹೀಗೆ ಮಾತನಾಡುತ್ತಿದ್ದೇನೆ. ಇನ್ನು ನಾನು ನಿಮ್ಮ ಮನೆಗೆ ಬರುವದೆಂದರೆ ಅವಳನ್ನು ವಂಚಿಸಿದಂತೆ. ಈಗ ನಾನು ಬಾರದಿದ್ದರೆ ಅವಳಿಗೆ ಹೇಳಲಾಗದ ವ್ಯಥೆಯಾಗುತ್ತದೆ. ಅವಳ ಪವಿತ್ರ ಪ್ರೇಮವನ್ನು ನಾನು ನಿರಾಕರಿಸಿದುದಕ್ಕೆ ಅವಳು ಗೋಳಿಡಬಹುದು.

ಆದರೆ ವಾಸ್ತವದ ದಾರುಣ ಚಿತ್ರ ಬಹು ಭೀಕರ. ವಾಸ್ತವ ಬದುಕನ್ನು ಅದು ಹೇಗಿದ್ದರೂ ವಿಚಾರಿಸಿ ನಡೆಯಬೇಕಲ್ಲವೇ ?

ನನ್ನ ದಾರಿದ್ರ್ಯ, ಕಷ್ಟಪರಂಪರೆಗಳನ್ನು ನಿಮ್ಮೆದುರು ತೋದಿಕೊಳ್ಳಬಯಸುವದಿಲ್ಲ ನಾನು. ಒಂದೇ ಒಂದು ನನ್ನ ಕೊನೆಯ ಮಾತು:

ಕರುಣಳ ಬಗೆಗೆ ನನಗೆ ಅನುತಾಪವಿದೆ, ಕನಿಕರವಿದೆ. ಅವಳ ಸ್ಥಿತಿಗಾಗಿ, ಅವಳು ಅನುಭವಿಸಿದುದಕ್ಕಾಗಿ ನಾನು ಮರುಗಿದ್ದೇನೆ ಅನುಕಂಪದಿಂದ.

ಈ ಜೀವನದಲ್ಲಿ ಅವಳನ್ನು ನಾನು ಒಬ್ಬ ಒಳ್ಳೆ ಸ್ನೇಹಿತೆಯಂತೆ ಕಾಣುವದಕ್ಕಿಂತ ಹೆಚ್ಚಿಗೇನು ಮಾಡಲಾರೆ. ನಾನು ನಿರಾಕರಿಸುವದರಿಂದ ಅವಳು ಒಂದೇ ಬಾರಿ ಕೊರಗುತ್ತಾಳೆ. ಅವಳನ್ನು ಮದುವೆಯಾಗಿ, ಎರಡು ಹೊತ್ತು ಸರಿಯಾಗಿ ಅನ್ನಕೊಡಲು ಅಸಮರ್ಥನಾದ ನಾನು, ಬಾಳಿನುದ್ದಕ್ಕೂ ಅವಳನ್ನು ಕೊರಗಿಸಲಾರೆ.

ದಾರಿದ್ರ್ಯ ನಾನು ಪಡೆದು ಬಂದ ಫಲ. ಅದನ್ನು ನಾನೊಬ್ಬನೆ ಉಣ್ಣುತ್ತೇನೆ. ಭಾವಜೀವಿಯಾದ ಅವಳಿಗೆ ನನ್ನ ಬದುಕಿನ ಕಹಿಯುಣ್ಣಿಸುವ ಪಾತಕವನ್ನು ನಾನು ಮಾಡಲಾರೆ.

ಇತಿ ನಿಮ್ಮ
—ಸುಧಾಕರ

ವಿಚಾರಘರ್ಷಣೆಗೆ ಸಿಲುಕಿ ಕಾಗದವನ್ನೇನೊ ಬರೆದ. ಒಂದು ರೀತಿಯಲ್ಲಿ ಸಮಸ್ಯೆ ಪರಿಹಾರವಾಯಿತೆಂದು ನೆಮ್ಮದಿ ತಂದುಕೊಂಡ.

ರಾತ್ರಿ ಊಟಕ್ಕೆ ಹೋಗಿ ಬಂದ. ಯಾರೊಡನೆಯೂ ಹೆಚ್ಚು ಮಾತನಾಡದೆ ಬಂದು ಮಲಗಿಬಿಟ್ಟ. ಮನಸ್ಸು ತೆರವಾಗಿತ್ತು.

ಆ ಮನದ ತೆರವು ಬರಲಿರುವ ಬಿರುಗಾಳಿಯ ಸಂಕೇತವಾಗಿತ್ತು.

ಕರುಣಳ ಹೃದಯವನ್ನು ಹೊಕ್ಕು ನೋಡಿದಂತೆಲ್ಲ ತಾನೆಂತಹ ಕಲ್ಲು ಮನಸ್ಸಿನವನೆಂದುಕೊಂಡ. ಅವಳ ಬಗೆಗೆ ಅಂಕುರಿಸಿ ಚಿಗುರಿದ ಅನುಕಂಪ, ಸ್ನೇಹ, ಸಹಾನುಭೂತಿಗಳ ಅರ್ಥವೇನು? ಎಂದು ವಿಚಾರಿಸಹತ್ತಿದ. ಈ ವಿಚಾರ ಇನ್ನೊಂದು ವಿಚಾರದ ಕೈಗೆ ಇವನನ್ನು ಕೊಟ್ಟು ಹಿಂದೆ ಸರಿಯಿತು.

ಆತ ಎದುರಿಸುತ್ತಿದ್ದ ಬಡತನದ ಕಷ್ಟಸ್ಥಿತಿ ಆತನನ್ನು ಅಸಹಾಯನನ್ನಾಗಿ ಮಾಡಿತ್ತು. ಸಾವಿನ ಛಾಯೆಯಂತೆ ಕಾಣುತ್ತಿರುವ ತಂದೆ, ಚಿಕ್ಕ ತಮ್ಮಂದಿರು, ತಂದೆಯ ಅರೆಹೊಟ್ಟೆಗೂ ಸಾಲದ ಗಳಿಕೆ, ಹೀಗೆ ತನ್ನ ಪ್ರಪಂಚವಿನ್ನೂ ಕುದಿಯುವ ಪಾತ್ರೆಯಲ್ಲಿರುವಾಗ ಕರುಣಳನ್ನು ಮದುವೆಯಾಗುವದು ಉಚಿತವೇ ? ಸಾಧ್ಯವೇ ? ಎಂಬ ನಿಚ್ಚಳ ಪ್ರಶ್ನೆ ಆತನೆದುರಿಗೆ ನಿಂತಿತ್ತು.

ಈ ಪ್ರಶ್ನೆಯನ್ನು ಆತ ಕೇವಲ ಭಾವನೆಗಳ ಬಣ್ಣಗಳೊಳಗಿಂದ ನೋಡಲಿಲ್ಲ. ಜೀವನ ಕೊಡುತ್ತಿರುವ ಪೆಟ್ಟು, ಒಡ್ಡುತ್ತಿರುವ ಪರಿಸ್ಥಿತಿ, ಇವುಗಳ ಅನುಭವದಿಂದ ವಿಚಾರಶೀಲನಾಗಿ ನೋಡುತ್ತಿದ್ದ. ಕರುಣಾ ಕಟ್ಟಿಕೊಂಡ ಕನಸಿನ ಲೋಕ ಉರಿದು ಅದರ ಜ್ವಾಲೆಗೆ ಅವಳೂ ಆಹುತಿಯಾಗಬಹುದು. ಆದರೆ

ಅದಕ್ಕೆ ಯಾರು ಹೊಣೆ?

ತಾನಂತೂ ಎಂದಿಗೂ ಆಗಲಾರನೆಂದುಕೊಂಡ.

ಈ ಪ್ರಶ್ನೆಯನ್ನು ಕರುಣಳ ಹೃದಯವನ್ನು ನೋಡಿ ಎದುರಿಸಬೇಕೋ ಇಲ್ಲವೆ ತನ್ನ ಪ್ರತ್ಯಕ್ಷ ಜೀವನ ಸ್ಥಿತಿಯನ್ನು ನೋಡಿ ನಿರ್ಧರಿಸಬೇಕೋ ಎಂಬ ಎರಡೇ ದಾರಿಗಳಲ್ಲಿ ಆತ ಎರಡನೆಯದನ್ನೆ ಆಯ್ದುಕೊಂಡ. ಯಾಕೆಂದರೆ ಅವನು ಹುಟ್ಟಿ ಬೆಳೆದು ಬಂದ ಕಷ್ಟಪರಿಸ್ಥಿತಿ ಆತನನ್ನು ಹೆಚ್ಚಾಗಿ ವಿಚಾರಶೀಲನನ್ನಾಗಿ ಮಾಡಿತ್ತು.

ಇಷ್ಟಾದರೂ ಕರುಣಳ ಮುಖ ಅವನೆದೆಗೊರಗಿ ಕಂಬನಿ ಸುರಿಸುತ್ತಲಿತ್ತು.

* * *

ಹೊಯ್ದಾಟದ ರಾತ್ರಿ ಕಳೆಯಿತು. ಮರುದಿನ ಸಂಜೆಯ ನಾಲ್ಕುಗಂಟೆಯ ವರೆಗೂ ನಿರುದ್ವಿಗ್ನನಾಗಿದ್ದ. ರೂಢಿಯ ಬಲದಿಂದ ಸ್ವಾಭಾವಿಕವಾಗಿ ಕರುಣಳ ಮನೆ ನೆನಪಾಯ್ತು.

ಅವಳ ಮುಖ ಕಣ್ಣೆದುರು ಕಟ್ಟಿತು.

ಅವಳ ಕೊರಗು, ಹಂಬಲ, ಅವನ ಮನದಲ್ಲಿ ಹೊಸೆದಾಡಿದವು.

ಅವಳ ಕರಸ್ಪರ್ಶದ ನೆನಹಿನ ಪುಲಕವಾಯಿತು. ಆಗ ಕಿಚ್ಚಿನಲ್ಲಿ ಕೈ ಇಟ್ಟಂತೆ ಅನುಭವವಾಗಿತ್ತಲ್ಲವೇ? ಈಗ ಆ ಕಿಚ್ಚನ್ನೆ ಮನಸ್ಸು ಬಯಸಿತು.

ತಾನು ಹೋಗದಿದ್ದರೆ ಕರುಣಳ ಗತಿಯೇನಾದೀತೆಂಬುದನ್ನು ಯೋಚಿಸಿದ.

ಯೋಚಿಸಿದನೇನು? ತಾನೇ ಅನುಭವಿಸಿದ. ಆಗ, ಅವಳ ಎದೆಯುರಿ ಇವನನ್ನೆ ದಹಿಸಹತ್ತಿತ್ತು. ಬದುಕು ಕೊಟ್ಟ ಅನುಭವದಿಂದ ವಿಚಾರಿಸಬೇಕೆನ್ನುತ್ತಿದ್ದ ಸುಧಾಕರನ ತಲೆ ಕೆಳಗಾಯಿತು. ಕೂಲಿ ಮಾಡಿ ಹೊಟ್ಟೆ ತುಂಬಿಕೊಳ್ಳುವವರನ್ನು ನೆನೆದ. ಅವರಿಗಿಂತ ತಾನು ಅಲ್ಪನೇ? ಎಂದು ಕೇಳಿಕೊಂಡ.

ಈ ಜಗ್ಗಾಟದಲ್ಲಿಯೇ ನುಗ್ಗಾಗಿ ಹೋದ.

ಸಂಜೆ ಸಮೀಪಿಸುತ್ತ ಬಂದಿತು. ಭೀಕರ ಬಿರುಗಾಳಿಗೆ ಸಿಕ್ಕುಬಿಟ್ಟ. ಎತ್ತಲೂ ಅಟ್ಟಿಕೊಂಡು ಹೋಗುವ ರಭಸವೇ ರಭಸ. ತೂರಿ ಬರುವ ಮಣ್ಣು ಧೂಳುಗಳಲ್ಲಿ ದಾರಿಯೇ ಸಿಗದಂತಾಯಿತು. ಕಣ್ಣಲ್ಲಿ ಉಸುಕು ತುಂಬಿದಂತಾಯಿತು.

ಮಾಧವನ ಕೋಣೆಗೆ ಓಡಿದ.

ಅತ್ಯಂತ ಗೌಪ್ಯವಾದ, ರಹಸ್ಯವಾದ, ವೈಯಕ್ತಿಕವಾಗಿರುವ ಸಮಸ್ಯೆಯನ್ನು ನಿರ್ಧರಿಸಬೇಕಾದಾಗೆಲ್ಲ ನಾವು ಬೇರೆಯವರ ಅಭಿಪ್ರಾಯ, ಸೂಚನೆಗಳನ್ನೆ ಸ್ವೀಕರಿಸುತ್ತೇವೆ, ಹಿಂದು ಮುಂದು ನೋಡದೆಯೇ.

ಮಾಧವನೊಂದಿಗೆ ಸುಧಾಕರ ಉದ್ವಿಗ್ನನಾಗಿ, ಬಹು ಗಂಭೀರವಾಗಿ ಚರ್ಚಿಸಿದ.

ಮಾಧವ ಆತ ಹೇಳುವದನ್ನೆಲ್ಲ ಕೇಳಿ, ಕೊನೆಗೆ "ಇಲ್ಲಿ ಕೇಳು. ಬದುಕಿನ ಕೆಲವು ಸಮಸ್ಯೆಗಳು ಹೃದಯಕ್ಕೆ ಸಂಬಂಧಿಸಿರುತ್ತವೆ. ಅವುಗಳನ್ನು ನಾವು ಕೇವಲ ಶುದ್ಧ ತರ್ಕ, ವಿಚಾರಗಳಿಂದ ಬಿಡಿಸಲೆತ್ನಿಸುವದು ಅಸಮಂಜಸ. ಈ ಪ್ರಶ್ನೆಯನ್ನು ನೀನು ಹೃದಯದಿಂದ ನೋಡಬೇಕು. ಕರುಣಳ ಬಗೆಗೆ ನಿನಗೆ ಸಹಾನುಭೂತಿ, ಅಂತಃಕರುಣ, ಕನಿಕರ – ಇವೆಯೆಂದು ನೀನೇ ಹೇಳುತ್ತೀ. ನಾನು ಕೇಳುವ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡು. ಅವಳಲ್ಲಿ ನಿನಗೆ – ಪ್ರೇಮ ಹೋಗಲಿ, ಈ ಕಾವ್ಯದಲ್ಲಿಯ ಶಬ್ದ ಬಹುಜನರು ಅರ್ಥವಾಗದೆ ಬಳಸುವ ಶಬ್ದವನ್ನುಬಿಡು – ಆಕರ್ಷಣೆ, ಬಯಕೆ ಇವೆಯುಷ್ಟೆ?" ಎಂದು ಕೇಳಿದ.

ಈ ಪ್ರಶ್ನೆ ನೇರವಾಗಿ ಸುಧಾಕರನ ಎದೆಯ ಗುಂಡಿಗೆಯನ್ನೆ ಭೇದಿಸಿತು.

ಸುಧಾಕರ ಸುಮ್ಮನಿದ್ದುಬಿಟ್ಟ.

ಮಾಧವ ಮುಂದುವರಿಸುತ್ತ "ನೀನವಳನ್ನು ಬಯಸುತ್ತಿದ್ದರೆ ಅವಳನ್ನು ವಂಚಿಸಬೇಡ. ನಿನ್ನನ್ನೂ ವಂಚಿಸಿಕೊಳ್ಳಬೇಡ. ಇನ್ನು ನೀನವಳನ್ನು ಬಯಸಿರಲಿಲ್ಲವಾದರೆ ಮೊದಲ ದಿನನೇ ಹಾಗೆ ಸ್ಪಷ್ಟವಾಗಿ ಹೇಳಿಬಿಡಬೇಕಿತ್ತು." ಎಂದು ಸ್ಪಷ್ಟವಾಗಿಯೇ ಹೇಳಿದ.

"ಆಗ ಹೇಳಿದ್ದರೆ ಅವಳ ಸ್ಥಿತಿ...."

"ಏನಾಗುತ್ತಿತ್ತು? ಸಾಯುತ್ತಿದ್ದಳು, ಅಷ್ಟೆ? ಅದಕ್ಕಾಗಿ ನಿನಗೇಕೆ ವ್ಯಥೆ?"

ಈ ವ್ಯಂಗ್ಯ ಸುಧಾಕರನನ್ನು ಸಹಸ್ರಮುಖವಾಗಿ ಭೇದಿಸಿತು. ಆದರೂ ಹೇಳಿದ: "ನಾನು ಹೋಗುವವರಿಂದ ಅವಳು ಸುಧಾರಿಸುವಳೆಂದು ಗಣಪತರಾಯರು ಅಂಮುದಕ್ಕೆ ಕನಿಕರದಿಂದ ಹೋನೆ. ಅವಳಿಗೆ ನೆಟ್ಟಗಾಗುವ ವರೆಗೆ ನಾಲ್ಕೈದು ದಿನ ಹೋಗುತ್ತಿದ್ದೆ...."

ಮಾಧವ ಸಿಟ್ಟಿಗೆದ್ದುಬಿಟ್ಟ. "ಈ ಮಾತುಗಳ ಸಿಹಿ ಲೇಪನನ್ನು ಅಳಿಸಿ

ಹಾಕು. ಹೇಳು, ಆಗ ನೀನು ಕನಿಕರದಿಂದ ಅವಳ ಬಳಿ ಕೂಡುತ್ತಿದ್ದಿಯೋ, ಇಲ್ಲವೆ ಅವಳನ್ನು ಬಯಸಿ ಕೂಡುತ್ತಿದ್ದೆಯೋ ಎಂಬುದನ್ನು? ”

ಸುಧಾಕರನ ಸ್ವಾಭಿಮಾನ ಮುಸುಗುಟ್ಟಿತು. “ನಾನು ಲಾಲಸಿಯಲ್ಲ, ವಿಲಾಸಿಯೂ ಅಲ್ಲ ಮಾಧವ!”ಎಂದು ಉಕ್ಕಿನ ಠಣತ್ಕಾರದಂತೆ ಉತ್ತರವನ್ನೆಸೆದ.

“ನಾನು ಹಾಗೆ ಆರೋಪಿಸಲಿಲ್ಲ ಸುಧಾಕರ. ಪರಿಚಯ, ಸಾಮೀಪ್ಯ, ಒಬ್ಬರೊಬ್ಬರಿಗಾಗಿ ತೋರುವ ಅನುಕಂಪ, ದಯೆ, ಸಹಾನುಭೂತಿ ಇವುಗಳ ಫಲವಾಗಿ ಹುಟ್ಟುವದೇ ಸಹಜ ಆಕರ್ಷಣೆ, ಸಹವಾಸದಾಸೆ. ಇಷ್ಟೇಕೆ ಸಿಟ್ಟಿಗೆ ಏಳುತ್ತಿ? ಪ್ರಪಂಚ ಬೆಳೆಯುವದು, ವಿಕಾಸವಾಗುವದು ಇವುಗಳ ಮೇಲೆಯೇ.” ಎಂದು ಸೌಮ್ಯನಾಗಿ ಹೇಳಿ ಇನ್ನೂ ಹೊಯ್ದಾಡುತ್ತಿದ್ದ ಸುಧಾಕರನನ್ನು ನೋಡಿ ಕನಿಕರದಿಂದ “ಇದು ಚರ್ಚೆಯಿಂದ ನಿರ್ಧರಿಸುವ ವಿಷಯವೇ ಅಲ್ಲ. ಈಗ ಹೋಗಿ ಒಬ್ಬನೆ ಎಲ್ಲಿಯಾದರೂ ಕುಳಿತುಕೊಂಡು ನಿನ್ನ ಹೃದಯವನ್ನೇ ಬಿಚ್ಚಿ ಪರೀಕ್ಷಿಸು. ಆಮೇಲೆ ತೋಚಿದಂತೆ ಮಾಡು. ಸ್ನೇಹಿತನೆಂಬ ಸಲಿಗೆಯಿಂದ ಬಿರುಸಾಗಿ ನಾನು ಮಾತನಾಡಿದುದಕ್ಕೆ ತಪ್ಪು ತಿಳಿಯಬೇಡ. ಒಂದೇ ಒಂದು ಮಾತನ್ನು ನೆನಪಿನಲ್ಲಿಡು. ಅವಳ ಬೇನೆಯನ್ನು ಗುಣಪಡಿಸಲು ಆಗ ನೀನು ಹೋದರೆ, ಈಗ ಅವಳನ್ನು ಬದುಕಿಸಲು ನೀನವಳನ್ನು ಮದುವೆಯಾಗಬೇಕು. ಸಂಸಾರದ ಕಷ್ಟನಷ್ಟ, ವೆಚ್ಚ ಆದಾಯ, ಹುಟ್ಟುವ ಮಕ್ಕಳ ಎಣಿಕೆ, ಬರುವ ಅನಿರೀಕ್ಷಿತ ತೊಂದರೆ ಇವೆಲ್ಲವುಗಳ ಲೆಕ್ಕಾಚಾರದ ಯಾದಿಯನ್ನು ಮೊದಲು ತಯಾರಿಸಿ ಯಾರೂ ಜೀವನ ಸಾಗಿಸಲಾರರು. ಹಾಗೆ ಮಾಡಬಯಸಿದರೆ, ಒಂದೊಂದು ದಿನವನ್ನು ಕಳೆಯುವದೂ ದುರ್ಧರವಾದೀತು. ಈಗ ನೀನು ಅವಳಿಂದ ದೂರ ಸರಿದರೆ ಅವಳ ಸಾವನ್ನು ಕೆಲ ದಿನ ಮುಂದೆ ಹಾಕಿದ ಪುಣ್ಯ ಕಟ್ಟಿಕೊಳ್ಳಬಹುದು.” ಇಷ್ಟು ಹೇಳಿ ಮಾಧವ ಭರ್ರನೆ ಹೊರಗೆ ಹೋದದ್ದು, ಸರಿಯಾದ ರೀತಿಯಲ್ಲಿ ಸಮಸ್ಯೆಯನ್ನೆದುರಿಸುವಂತೆ ಸುಧಾಕರನ ವಿಚಾರಗಳನ್ನು ಕೆಣಕಿ, ಅವನೊಬ್ಬನೆ ಕುಳಿತು ಆಲೋಚಿಸಲಿ ಎಂಬ ಉದ್ದೇಶಪೂರ್ವಕವಾಗಿಯೇ.

ಒಂದೆರಡು ವ್ಯಗ್ರ ನಿಮಿಷಗಳು ಸುಧಾಕರನ ಮನವನ್ನು ಚುಚ್ಚಿ ಚುಚ್ಚಿ ಹೋದವು.

ಮಿಂದುಳು ತಲೆಯನ್ನು ಸೀಳಿ ಬರುವಂತಾಯಿತು. ಕೆಲ ಹೊತ್ತು ಮಿದು

ಳನ್ನು ಎಲ್ಲಿಯಾದರೂ ಹೊರಗೆ ತೆಗೆದಿಡಬೇಕೆನ್ನುವಷ್ಟು ಸಂಕಟವಾಯಿತು ಸುಧಾಕರನಿಗೆ.

ಕುರ್ಚಿಯಲ್ಲಿ ಕುಸಿದ ಮುಖವನ್ನು ಸಾವಕಾಶವಾಗಿ ಮೇಲೆತ್ತಿದ. ಬಾಗಿಲ ಕಡೆಗೆ ನೋಡಿದ. ಸಂಜೆಯ ಮಬ್ಬು ಕಪ್ಪುಕರಾಳವಾಗುತ್ತ ನಡೆದಿತ್ತು. ದೂರದಲ್ಲಿ ವಿದ್ಯುದ್ದೀಪಗಳು ಬೆಳಗುತ್ತಿದ್ದವು.

ಮೇಜಿನ ಮೇಲಿರಿಸಿದ ಗಡಿಯಾರದಲ್ಲಿ ಏಳು ಗಂಟೆಗೆ ಸಮೀಪಿಸಿತ್ತು.

ಜಾರುವ ಒಂದೊಂದು ನಿಮಿಷ ಆತನನ್ನು ಇರಿಯುತ್ತಿತ್ತು. 'ನಾನೆಂಥ ಹೇಡಿ!' ಅಂದುಕೊಂಡ. ತನ್ನೆದೆಯ ಬಟ್ಟೆಲನ್ನೊಮ್ಮೆ ನೋಡಿಕೊಂಡ; ಅದು ಕರುಣಾ ಸುರಿಸಿದ ಬಿಸಿ ಕಂಬನಿಯಿಂದ ತುಂಬಿತ್ತು! ಅವಳು ಒಂದೇ ಒಂದು ಸಲ ಆಶಾಪೂರಿತಳಾಗಿ ನಿರಂತರ ಪ್ರತೀಕ್ಷಾಭಾವದಿಂದ ಅವನೆಡೆಗೆ ನೋಡಿದಂತಾಯಿತು. "ಕರುಣಾಽಽ...." ಎಂದು ತುಟಿ ಕಚ್ಚಿಕೊಂಡು ಉಸುರಿದ.

ಕೋಣೆಯ ಹೊರಗೆ ಬಂದ. ಇದ್ದಕ್ಕಿದ್ದಂತೆ ಹಾಗೆಯೇ ಕರುಣಳತ್ತ ಧಾವಿಸಿದ. ನಿಮಿಷಾರ್ಧದಲ್ಲಿ ಗೇಟು ದಾಟಿದ. ಅವನ ವೇಗದ ನಡಿಗೆ, ದೃಢನಿರತ ಮುಖಮುದ್ರೆಗಳನ್ನು ಮರೆಯಲ್ಲಿ ನಿಂತಿದ್ದ ಮಾಧವ ನೋಡಿದ. ಆಗ ಅವನಿಗೆ ಸಮಾಧಾನವಾಯಿತು. ಸುಧಾಕರ ಹೋದ ದಾರಿಯನ್ನೇ ನೋಡುತ್ತ ನಿಂತ.

*　　　*　　　*

ಸುಧಾಕರ ದಾರಿಯಲ್ಲಿಯ ಜನ, ವಾಹನಗಳ ಗದ್ದಲದಲ್ಲಿ ನುಗ್ಗಿ ನಡೆದಿದ್ದ. ಪ್ರಪಂಚದ ಪರಿವೆಯಿಲ್ಲದೆ ಹುಚ್ಚನಂತೆ ವಿಕಾರನಾಗಿ ಧಾವಿಸಹತ್ತಿದ. ಅವನೆದೆ 'ಕರುಣಾ' ಎಂದು ಹಲುಬುತ್ತಿತ್ತು.

'ಬರುತ್ತಿದ್ದೇನೆ....ಬಂದೆ....ನೋಡು ಕರುಣಾ...." ಎಂದು ಆತನ ಪ್ರತಿ ಹೆಜ್ಜೆ ಹೇಳುತ್ತಿತ್ತು. ಕರುಣಾಮಯವಾಗಿ ಆತನೆದೆಯ ರುದ್ರವೀಣೆ ನುಡಿಯುತ್ತಿತ್ತು. ಹೊರಗಿನ ಯಾವ ಸಿಡಿಲ ಸಪ್ಪಳವೂ ಅವನೊಳಗಿನ ಅವಳಿಗೆ ಕೇಳಿಸುತ್ತಿತ್ತು.

"ನಿಲ್ಲು" ಎಂದು ಬೆನ್ನು ಹತ್ತಿ ಬಂದ ಕರ್ಕಶವಾದ ಕೂಗು ಆತನಿಗೆ ಕೇಳಿಸಲೇ ಇಲ್ಲ. ಆತ ಹಾಗೇ ಮುಂದೆ ನಡೆದಿದ್ದ.

ಹಿಂದಿನಿಂದ ರಭಸವಾಗಿ ಬರುವ ಸೈಕಲ್ಲು ಸುಧಾಕರನನ್ನು ದಬ್ಬಿದಾಗಲೇ ಆತನಿಗೆ ಎಚ್ಚರ ಬಂದಿತು. ಕುಳಿತ ಸೈಕಲ್ಲೂ ಒಂದು ಕಡೆ ಹೋಗಿ ಬಿತ್ತು.

ತೊಟ್ಟ ಅಂಗಿಯೆಲ್ಲ ಬೆವರಿನಿಂದ ತೊಯ್ದಿತ್ತು. ಗಂಟಲೊಣಗಿ ಮಾತ ನಾಡಲು ಬಾರದೆ ತೇಕುತ್ತ ಬರಿ ಕೈಸನ್ನೆ ಮಾಡುತ್ತ ನಿಂತ ಮಾಧವನನ್ನು ನೋಡಿದಾಗ ಸುಧಾಕರ ಹೌಹಾರಿದ.

ಮಾಧವನಿಗೆ ಮಾತಾಡುವ ತ್ರಾಣವೇ ಉಳಿದಿದ್ದಿಲ್ಲ. ಬಿದ್ದ ಸೈಕಲ್ಲಿನ ಕಡೆಗೆ ಲಕ್ಷ್ಯವಿಲ್ಲದೆ, ಅಲ್ಲಿಯೇ ಹೊರಟದ್ದ ಟಾಂಗೆಯನ್ನು ನಿಲ್ಲಿಸಿ ಸುಧಾಕರ ನಿಗೆ ಅದರಲ್ಲಿ ಹತ್ತಿ ಹಾಸ್ಟೆಲ್ಲಿಗೆ ನಡೆಯಲು ಹೇಳಿ, ತಾನು ಸೈಕಲ್ ತೆಗೆದು ಕೊಂಡು ಹತ್ತಿ ಟಾಂಗಾದ ಹಿಂದಿನಿಂದ ನಡೆದ.

ದಾರಿಯಲ್ಲಿ, ತಡೆಯಲಾಗದೆ "ಏನಾಗಿದೆ ಮಾಧವ?" ಎಂದು ಗಾಬರಿ ಯಾಗಿ ಸುಧಾಕರ ಕೇಳಿದ.

ಮಾಧವ ಹಾಸ್ಟೆಲ್ಲಿನತ್ತ ಕೈಮಾಡಿ ತೋರಿಸಿದ. ಮಾತನಾಡಲಿಲ್ಲ.

ಗೇಟಿನ ಬಾಗಿಲ ಬಳಿಯ ದೀಪದ ಕಂಬದ ಕೆಳಗೆ ನಿಂತಿದ್ದ ಅಂಚೆ ಯಾಳನ್ನು ಮೊದಲು ಸುಧಾಕರ ನೋಡಿರಲಿಲ್ಲ. ಮಾಧವ ತೋರಿಸಿದ ಮೇಲೆ ನೋಡಿದ. ಟಾಂಗಾದಿಂದ ಇಳಿದ ಮೇಲೆ 'Telegram' ಕೈಗೆ ಬಂದಿತು. ಸುಧಾಕರ ಮಾಧವನ ಕೈಗೇ ಒಡೆಯಲು ಕೊಟ್ಟ. ಮಾಧವ ಒಡೆದು ನೋಡಿ "Father Serious Start Immediately" ಎಂದು ಓದಿದ. ಕೇಳಿ ಸುಧಾ-ಕರನ ಪ್ರಜ್ಞೆ ತಪ್ಪಿದಂತಾಯಿತ್ತು.

* * *

ವೇಗವಾಗಿ ಊರ ಕಡೆಗೆ ಓಡುವ ಮೋಟಾರಿನ ಕಿಟಕಿಯಿಂದ ಸೀಳಿ ಬರುವ ತಂಪುಗಾಳಿಯ ಹೊಡೆತಕ್ಕೆ ಸುಧಾಕರ ಕಣ್ಣು ತೆರೆದ. ಮಾಧವ ಆತ ನನ್ನು ಬಿಗಿಯಾಗಿ ಹಿಡಿದುಕೊಂಡೇ ಕುಳಿತಿದ್ದ. ಶೂನ್ಯದೃಷ್ಟಿಯಿಂದ ಮಾಧವ ನೆಡೆಗೆ ನೋಡಿದ. ನೋಡುತ್ತಲೆ ಇಬ್ಬರ ಕಣ್ಣುಗಳಿಂದ ನೀರು ಸದ್ದಿಲ್ಲದೆ ಹರಿಯತೊಡಗಿದವು.

ಪ್ರಯಾಸದಿಂದ ಮನೆಯ ಬಾಗಿಲು ತಲುಪಿದರು. ಸುಧಾಕರ ಕುಸಿದು ಬಿದ್ದುಬಿಟ್ಟ. "ಅಣ್ಣಾ!" ಎನ್ನುತ್ತ ತಮ್ಮಂದಿರಿಬ್ಬರು ಬಂದು ತೆಕ್ಕೆ ಬಿದ್ದು ಅಳ ಹತ್ತಿದರು.

ಮಾಧವ ಅವರನ್ನೂ ಸುಧಾಕರನನ್ನೂ ಸಮಾಧಾನಮಾಡಿ ಸಂಬಾಳಿಸಿ

ಕೊಂಡು ಮನೆಯೊಳಗೆ ಕರೆದುಕೊಂಡು ಹೋದ. ನೆರೆಹೊರೆಯವರೊಬ್ಬರು ಕುಳಿತಿದ್ದರು. ಸುಧಾಕರನಿಗೆ ತಂದೆಯ ಕೋಣೆಗೆ ಕಾಲಿಡಲಾಗಲಿಲ್ಲ. ಅಲ್ಲಿಯೇ ಒಂದು ಕಡೆ ಉಬ್ಬಸಪಡುತ್ತ ನಿಂತುಬಿಟ್ಟ.

ಒಳಗಿನಿಂದ ಬಂದ ಡಾಕ್ಟರರು ಸುಧಾಕರನನ್ನು ನೋಡಿ, ತಮ್ಮ ಹಣೆಯ ಬೆವರನ್ನೊರೆಸಿಕೊಳ್ಳುತ್ತ "ಸಮಾಧಾನ ಮಾಡಿಕೊ ಸುಧಾಕರ. ಗಾಬರಿಯಾಗ ಬೇಡ. ತೀಕ್ಷ್ಣರೂಪದ ಅಸ್ಥಮಾ ಇದೆ ಅವರಿಗೆ. ಅವರು ಉಳಿದದ್ದೇ ಹೆಚ್ಚಿನದು. ಇನ್ನು ಅವರು ಯಾವ ಕೆಲಸವನ್ನೂ ಮಾಡಕೂಡದು...." ಎಂದು ಅವರಿನ್ನೂ ಮಾತನಾಡುತ್ತಿರುವಾಗಲೆ ಸುಧಾಕರ ಗಟ್ಟಿಯಾಗಿ ಅವರ ಪಾದಗಳನ್ನು ಹಿಡಿದುಕೊಂಡು "ಡಾಕ್ಟರ್....ಡಾಕ್ಟರ್....!" ಎಂದು ದೈನಾಸಪಡಹತ್ತಿದ.

ಆತನನ್ನು ಸಮಾಧಾನಪಡಿಸುತ್ತ ಡಾಕ್ಟರರು "ನೀನು ಅವರ ದೇಹ ಸ್ಥಿತಿಯ ಬಗ್ಗೆ ಹೆಚ್ಚು ಲಕ್ಷ್ಯಕೊಡಬೇಕು ಇನ್ನುಮೇಲೆ. ಪಾಪ, ಆ ಹಸು ಗೂಸುಗಳೇನು ಮಾಡಿಯಾವು ? ನಿನ್ನ ತಂದೆಯವರೀಗ ಬಹಳೇ ನವೆದಿದ್ದಾರೆ. ಅವರಿಗೆ ಒಳ್ಳೆ ಆರೈಕೆ, ವಿಶ್ರಾಂತಿ ಅವಶ್ಯ." ಎಂದು ಎಚ್ಚರಿಕೆ ಕೊಟ್ಟು ಔಷಧಕ್ಕೆ ಸಲಹೆ ಸೂಚನೆ ಕೊಟ್ಟು, ಧೈರ್ಯ ಸಮಾಧಾನ ಹೇಳಿ ಹೊರಟುಹೋದರು.

ಸುಧಾಕರ ತಂದೆಯ ಬಳಿ ಹೋದ. ಹತ್ತಿರ ಕುಳಿತುಕೊಂಡ. ಅವರ ಕಣ್ಣಿನ ಕೆಳಗಿನ ಕಂದಕಗಳೆರಡೂ ತುಂಬಿ ನಿಂತಿದ್ದವು. ಮಗನತ್ತ ನೋಡಿದರು.

ಎದ್ದುಕೂಡಲು ಹೊಯ್ದಾಡಿದರು. ಮಾಧವ ಅವರನ್ನು ಸಮಾಧಾನ ದಿಂದ ಮಲಗಿಸಿದ.

ಮರುದಿನ ಮಧ್ಯಾಹ್ನ ಸ್ನೇಹಿತರಿಬ್ಬರೂ ಮೂಕರಾಗಿ, ಹೊರಗಿನ ಅಂಗಳ ದಲ್ಲಿ ಕುಳಿತಿದ್ದರು. ಯಾವುದನ್ನು ಆಲೋಚಿಸಬೇಕು ? ಏನೆಂದು ಆಲೋಚಿಸ ಬೇಕು ? ಎಷ್ಟೆಂದು ಚಿಂತಿಸಬೇಕು ? ಯಾವುದಕ್ಕೆ ಕೊರಗಬೇಕು ? ಹೀಗೆ ಅವರ ಅಂತರಂಗದ ಅವಸ್ಥೆಯಾಗಿತ್ತು.

ಆಗ ಅನುಮಾನದ ಹೆಜ್ಜೆಯನ್ನಿಡುತ್ತ ಒಳಗೆ ಬಂದ ವ್ಯಕ್ತಿ ಸುಧಾಕರ ನನ್ನು ಪಿಸುಮಾತಿನಲ್ಲಿ ಹೊರಗೆ ಕರೆದ. ಮಾಧವನೂ ಜೊತೆಯಲ್ಲಿಯೇ ಹೋದ.

ಬದಿಯಲ್ಲಿಯ ಚಹದಂಗಡಿಯ ಒಳಗಿನ ಕೋಣೆಗೆ ಕರೆದೊಯ್ದು ಆ ವ್ಯಕ್ತಿ ಅತಿ ರಹಸ್ಯವಾಗಿ ಮಾತನಾಡಹತ್ತಿದ. ಮೊದಲು ಸುಧಾಕರನ ತಂದೆಯ ಸ್ಥಿತಿಯ ಬಗೆಗೆ ಸಂತಾಪ, ಕನಿಕರ, ತೋರಿ ನಿದಾನವಾಗಿ ಮೂಲ ಉದ್ದೇಶವ

ಕಡೆಗೆ ಹೊರಳಿದ. "ನಿಮಗೆ ಗೊತ್ತಿರಬಹದು....ನಿಮ್ಮ ತಂಪೆ ನನ್ನಿಂದ ೨೦೦೦ ಸಾಲ ತೆಗೆದಿದ್ದಾರೆ....ಆಪತ್ತು, ಅಡಚಣೆ ಎಲ್ಲರಿಗೂ ಬರತಕ್ಕುವೇ....ಆದರೂ ....ನನ್ನ ಹಣಕ್ಕೆ ಭದ್ರತೆಯೇನೋ ಇದೆ....ಮನೆಯನ್ನೆ 'ಒತ್ತೆ' ಬರೆದುಕೊಟ್ಟಿದ್ದಾರೆ....ಆದರೂ ನಿಮಗೊಂದು ಮಾತು ಹೇಳಬೇಕೆಂದು....ನೀವೂ ಕಲಿತವರಿದ್ದೀರಿ....ನಿಮ್ಮ ಮನೆ ನಿಮಗೆ ಉಳಿಯಬೇಕು ಅಷ್ಟೆ?....ಹೀಗೆಯೇ ದಿನ ತಳ್ಳುತ್ತ ಹೋದರೆ, ಅನಿವಾರ್ಯವಾಗಿ....ನೋಡಿರಿ....ನನಗೂ...." ಹೀಗೆ ಅರ್ಧ ಮರ್ಧ ವಾಕ್ಯಗಳಲ್ಲಿಯೇ ಮುಖ್ಯ ಹೇಳಬೇಕಾದುದನ್ನು ಹೇಳಿದ.

ಇಬ್ಬರೂ ತಿರುಗಿ ಮನೆಗೆ ಬಂದರು. ಅಂದು ಸಾಯಂಕಾಲ ಮಾಧವ ಹೊರಟು ನಿಂತ. ಬಸ್ಸು ಬಿಡುವವರೆಗೆ ಇಬ್ಬರೂ ಮಾತನಾಡಲಿಲ್ಲ. ಸ್ತಿಮಿತ ತಂದುಕೊಂಡು ಸುಧಾಕರನೇ "ಕಾಲೇಜಿನ ಋಣ ತೀರಿತು. ಜಾ:ನಿ, ಶಶಿ, ರಾಮನಾಥ ಅವರಿಗೆಲ್ಲ ನನ್ನ ನಮಸ್ಕಾರ ಹೇಳು....ಹರೀಶನಿಗೆ ನನ್ನ ದಾರುಣ ಕತೆ ಹೇಳು." ನಿರ್ವಿಕಾರನಾಗಿ ಹೇಳಲೆತ್ನಿಸಿದಷ್ಟು ಎದೆಯ ಸಂಕಟ ಹೆಚ್ಚಿತು. ಸುರಿವ ಕಂಬನಿಯನ್ನು ನಿಗ್ರಹಿಸುತ್ತ ಮತ್ತೆ "ನನ್ನನ್ನು ಈ ಜನ್ಮದಲ್ಲಿ ಕ್ಷಮಿಸಿರೆಂದು ಗಣಪತರಾಯರಿಗೆ ಹೇಳು...." ಎನ್ನುವಾಗ ಮೋಟಾರು ಹೊರಡುವ ಸೂಚನೆ ತೋರಿಸಿತು. ಎದೆಯಲ್ಲಿ ಗೋಳಿಡುತ್ತಿದ್ದ ಮಾತು ತಾಳಲಾರದೆ ಹೊರ ಬಂದಿತು : "ಕ ರು ಣ ಳಿ ಗೆ....ನಾನು . . ." ಎನ್ನುವದರಲ್ಲಿ ಆತನ ಬಾಯಿ ಕಟ್ಟಿತು.

ಮೋಟಾರು ಮುಂದೆ ಸರಿಯಿತು.

ಸುಧಾಕರನೊಬ್ಬನೆ ಹಿಂತಿರುಗಿದ.

* * *

ಕರುಣಾಳ ಸ್ಥಿತಿ ಕರುಣಾಜನಕವಾಯಿತು. ಪ್ರೀತಿ ಇಂಥ ದುಃಖ ತರುವದೆಂದು ಅವಳೆಂದೂ ನಂಬಿರಲಿಲ್ಲ. ಸುಧಾಕರ ತಿರುಗಿ ಬರಲಿಲ್ಲ. ಅವನಿಂದ ಪತ್ರವೂ ಬರಲಿಲ್ಲ. ನಿರಾಶೆಯ ಮೋಡ ಕವಿದು ಬಂದವು. ಆದರೂ ಇಂದಿಲ್ಲ ನಾಳೆ ಬರಬಹುದೆಂದು, ಆಶೆಯ ಮಿಂಚೊಂದು ಆಗಾಗ ಹೊಳೆಯುತ್ತಿತ್ತು.

ಮಾಧವ ಒಂದು ದಿನ ವಿಷಣ್ಣವದನನಾಗಿಯೇ ಮನೆಗೆ ಬಂದ. ಸುಧಾಕರನಿಲ್ಲದೆ ಬಂದ ಅವನನ್ನು ನೋಡಲೂ ಮನಸ್ಸಾಗಲಿಲ್ಲ ಕರುಣಾಳಿಗೆ. ಆದರೆ ಅವನೇ ಸುಧಾಕರನ ಕತೆಯನ್ನೆಲ್ಲ ಹೇಳಿದ. ಸುಧಾಕರ ಇನ್ನು ಕಾಲೇಜು-

ಶಿಕ್ಷಣ ಮುಂದುವರಿಸಲು ಸಾಧ್ಯವಿಲ್ಲ. ಸುಧಾಕರ ಇನ್ನು ಊರಿಗೆ ತಿರುಗಿ ಬರಲು ಸಾಧ್ಯವಿಲ್ಲ! ಅವನು ಮನೆಯನ್ನು ನೋಡಿಕೊಳ್ಳಬೇಕು, ತಂದೆಯನ್ನು ತಮ್ಮಂದಿರನ್ನು ನೋಡಿಕೊಳ್ಳಬೇಕು. ಅರುಣಾಳ ಮುಖ ಗಂಭೀರವಾಯಿತು. ಗಣಪತರಾಯರ ಹುಬ್ಬು ಗಂಟಿಕ್ಕಿದವು. ಮಾಧವ ಸೋತು ಹೇಳುತ್ತಿದ್ದ. ಕರುಣಾ ಹಾಕಿದ ಮುಸುಕು ತೆರೆಯಲೇ ಇಲ್ಲ. ಮುಸುಕಿನ ಕತ್ತಲೆಯಲ್ಲಿಯೇ ಕಣ್ಣೀರು ಸುರಿಸುತ್ತಿದ್ದಳು.

ಆ ರಾತ್ರಿ ರೌದ್ರವಾಗಿತ್ತು. ಮುಂಗಾರಿಯ ಮೋಡ ಸಿಡಿಲು ಗುಡುಗುಗಳ ಮದ್ದಳೆಯನ್ನು ನುಡಿಸುತ್ತ ಯಾವ ಉತ್ಸವಕ್ಕೋ ಎಂಬಂತೆ ಕೂಡಿದ್ದವು. ಬೆಳಕು ಕೊಟ್ಟು ಕೊಟ್ಟು ಮಿಂಚು ಸೋತುಹೋಗಿತ್ತು. ಬಿರುಗಾಳಿಯ ಅಬ್ಬರ ಹುಚ್ಚುಹುಚ್ಚಾಗಿ ನಡೆದಿತ್ತು. ಪ್ರಕೃತಿ ಕೋಪಗೊಂಡಂತೆ ಉನ್ಮಾದಿನಿಯಾಗಿದ್ದಳು. ಬಹುಶಃ ಅವಳಿಗೂ ಪ್ರಣಯಭಂಗವಾಗಿರಬೇಕು.

ಕರುಣಾಳ ಕನವರಿಕೆ ಪ್ರಾರಂಭವಾಯಿತು. ಕೈಯಿಟ್ಟರೆ ಜ್ವರ ಸುಡುತ್ತಿತ್ತು. ಹಣೆಗೆ ತಣ್ಣೀರಿನ ಪಟ್ಟಿಯನ್ನು ಕ್ಷಣಕ್ಕೊಮ್ಮೆ ಬದಲಿಸುತ್ತ ಅರುಣಾ ಕುಳಿತಿದ್ದಳು. ಗಣಪತರಾಯರು ಆರಾಮಕುರ್ಚಿಯಲ್ಲಿ ಅಸ್ವಸ್ಥಚಿತ್ತದಿಂದ ಅಡ್ಡಾಗಿದ್ದರು.

"ಅಕ್ಕಾ" ಎಂದಳು ಕರುಣಾ.

"ಏನು ಬೇಕು ಕರುಣಾ?" ಅರುಣಾಳ ದನಿ ದುಃಖದಿಂದ ಭಾರವಾಗಿತ್ತು. ತಂಗಿಯ ಜ್ವರತಪ್ತ ಮುಖವನ್ನು ನೋಡನೋಡುತ್ತ ಅವಳಿಗೆ ಪ್ರಾಣಾಂತಿಕ ವೇದನೆಯಾಗಿತ್ತು.

"ಅಕ್ಕಾ ತಂಬೂರಿಯನ್ನು ನುಡಿಸು" ಕರುಣಾಳ ಮಾತಿನಲ್ಲಿ ಅಧಿಕಾರವಿತ್ತು; ದೈನ್ಯವಿತ್ತು; ದೃಢತೆಯಿತ್ತು.

ಅರುಣಾ ತಂಬೂರಿಯನ್ನು ಕೈಗೆತ್ತಿಕೊಂಡು, ಶ್ರುತಿಗೊಳಿಸಿ ಮಿಡಿದಳು. ನಾದಪ್ರವಾಹ ಅವಿರತವಾಗಿ ಹರಿಯಿತು. ಹೊರಗಿನ ಮಳೆಯ ಸಪ್ಪಳ ಕೇಳಿಸದಿರಲೆಂದು ಗಣಪತರಾಯರು ಕಿಡಿಕಿಗಳನ್ನು ಮುಚ್ಚಿದರು. ಕರುಣಾಳಿಗೆ ಎಲ್ಲಿಂದ ತ್ರಾಣ ಬಂತೋ ಹಾಸಿಗೆಯ ಮೇಲೆ ಎದ್ದು ಕುಳಿತಳು. ಯಾರಿಗೂ ಬೇಡವೆನ್ನುವ ಪ್ರಜ್ಞೆ ಇರಲಿಲ್ಲ. ಕರುಣಾ ಸ್ವರ ಹಚ್ಚಿದಳು. ಜ್ವರದಿಂದಲೋ ಏನೋ ದನಿ ಕಾದುಹೋಗಿತ್ತು. ಭೈರವಿಯ ಆಲಾಪನೆ ಕೋಣೆಯಲ್ಲೆಲ್ಲ ವ್ಯಾಪಿಸಿತು.

ವಿಶ್ವದ ಅಪಾರವೇದನೆಯೇ ನಾದವಾಗಿ ಹೊರಹೊಮ್ಮಿತು. ಜಗತ್ತಿನ ದುಃಖ ಸಂಕಟಗಳೆಲ್ಲ ಒಂದೊಂದಾಗಿ ಮೂಡಿ ಬಂದವು. ಬಾಳು ಕಣ್ಣೀರಿನ ಸಮುದ್ರ ವಾಯಿತು. ಕೂಸಿನ ಸಂಕಟ, ಪ್ರೌಢನ ಯಾತನೆ, ತಾಯಿಯ ದುಗುಡ, ತಂದೆಯ ಚಿಂತೆ, ಕವಿಯ ಕರುಣೆ, ತತ್ವಜ್ಞಾನಿಯ ಅನುಕಂಪ ಇವೆಲ್ಲ ನಾದ ಚಿತ್ರದಲ್ಲಿ ಬಣ್ಣವಡೆಯಿತು.

ಸಂಗೀತ ನಡೆದೇ ಇತ್ತು. ಹಾಡುವವಳೂ ಕೇಳುವವರೂ ಸಂಗೀತದಲ್ಲಿ ಒಂದಾಗಿದ್ದರು. ಮೂವರೂ ಚಿತ್ರಾರ್ಪಿತರಾಗಿದ್ದರು.

ಅರುಣಾಳ ಬೆರಳು ನಡುಗಿತು. ಬಿಗಿದ ತಂತಿ ಒಮ್ಮೆಲೇ ಹರಿಯಿತು. ನಾದ ಬರೆದ ಸುಕುಮಾರ ಚಿತ್ರವನ್ನು ಒಂದು ಅಪಸ್ವರ ಅಳಿಸಿಬಿಟ್ಟಿತು. ಎಲ್ಲರೂ ಅಪ್ರತಿಭರಾದರು.

ಅದೇ ಹೊತ್ತಿಗೆ ಸಿಡಿಲೊಂದು ಎರಗಿತು. ಮಿಂಚು ಪಡಸಾಲೆಯನ್ನೆಲ್ಲ ಬೆಳಗಿತು.

ಕರುಣಾ ಕುಳಿತಲ್ಲಿಯೇ ಬಿದ್ದುಬಿಟ್ಟಳು. ಗಣಪತರಾಯರು ಧಾವಿಸಿ ಬಂದು ಹಿಡಿದರು.

ಮಳೆ ನಿಂತಿತ್ತು. ಆದರೆ ಅರುಣಾಳ ಬಿಕ್ಕು ನಿಲ್ಲಲಿಲ್ಲ. "ಕರುಣಾ".... "ಕರುಣಾ...." ಗಣಪತರಾಯರು ಕೂಗಿದರು. ಕರುಣಾಳಿಗೆ ಆ ಕೂಗು ಕೇಳಿಸಲಿಲ್ಲ.

ತಾ..........೧೯...
ರಾತ್ರಿ ಹತ್ತು ಗಂಟೆ

ಮುಗಿದುದು

---

## ೧೦ : ಸರದೇಸಾಯಿಯ ಪತ್ರ

ಕಾದಂಬರಿಯನ್ನು ಬರೆದು ಮುಗಿಸಿದ ನಾನಿಗೆ ಧನ್ಯತೆ ಎನಿಸಿತು. ಹಿಡಿದ ಕಾರ್ಯವೊಂದು ಒಮ್ಮೆ ಮುಗಿಯಿತಲ್ಲ ಎಂದು ಅವನಿಗೆ ಅಪೂರ್ವ ಸಮಾಧಾನವೆನಿಸಿತು. ಮತ್ತೊಮ್ಮೆ ಇಡೀ ಕಾದಂಬರಿಯನ್ನು ಓದಿದ. ಅಲ್ಲಲ್ಲಿ ಮಾರ್ಪಾಟು ಅವಶ್ಯವೆನಿಸಿತು. ಇನ್ನೊಮ್ಮೆ ಬರೆಯ ಬೇಕೆಂದುಕೊಂಡ. ಆದರೆ ಅದಕ್ಕಿಂತ ಮೊದಲು ಇನ್ನೊಂದು ಕೆಲಸ ಮಾಡಬೇಕೆನ್ನಿಸಿತು. ಸರದೇಸಾಯಿಯಂತೂ ಪತ್ರವನ್ನು ಬರೆಯಲೇ ಇಲ್ಲ. ಆದರೆ ಸ್ವತಂತ್ರನಾಗಿಯೇ, ತನ್ನ ಕಲ್ಪಕಶಕ್ತಿಯಿಂದ ಒಂದು ಕೃತಿ ಯನ್ನು ಮುಗಿಸಿದೆನಲ್ಲ, ಎಂಬ ಸಂಭ್ರಮ ನಾನಿಗೆ. ಅದಕ್ಕಾಗಿ ಅಭಿ ಮಾನವೂ ಉಂಟಾಗಿತ್ತು. ಆದ್ದರಿಂದ ಕಾದಂಬರಿಯನ್ನು ಸರದೇಸಾಯಿಗೆ ಕಳಿಸಬೇಕೆಂದೆನಿಸಿತು. ಈಗಾದರೂ ಅವನಿಗೆ ಎಚ್ಚರಿಕೆ ಬರಲಿ, ತನ್ನ ಪ್ರತಿಭೆಯನ್ನು ಅವನು ಮೆಚ್ಚಲಿ ಎಂದು ನಾನಿಗೆ ಒಳಗಿನ ಆಸೆ. ಆಮೇಲೆ ಅದನ್ನು ಪ್ರಕಟಗೊಳಿಸುವ ಆಸೆಯೂ ಮೆಲ್ಲಗೆ ಜಾಗೃತವಾಗತೊಡಗಿತ್ತು. ನಾನಿ ಕಾದಂಬರಿಯನ್ನೂ, ಅದರ ಜೊತೆಗೆ ಒಂದು ಪತ್ರವನ್ನೂ ಬರೆದು ಸರದೇಸಾಯಿಗೆ ಕಳಿಸಿಕೊಟ್ಟ. ಪತ್ರದಲ್ಲಿ 'ಕಾದಂಬರಿಯ ಬಗ್ಗೆ ವಿಸ್ತೃತ ವಾಗಿ ಅಭಿಪ್ರಾಯವನ್ನು ಬರೆದು ತಿಳಿಸಬೇಕು; ನನಗೆ ನಿನ್ನ ಸಲಹೆ ಅವಶ್ಯ' ಎಂದೂ ಕಾಣಿಸಿದ್ದ. 'ನಿನ್ನ ಪತ್ರದ ಸಹಾಯವಿಲ್ಲದೆ ನಾನು ಬರೆದೆ' ಎಂಬ ಮಾತನ್ನೂ ಸೂಚ್ಯವಾಗಿ ಆಡಿತೋರಿಸಿದ್ದ.

ನಾನಿಗೆ ದಿನದಿನಕ್ಕೆ ಕುತೂಹಲ ಹೆಚ್ಚಾಗತೊಡಗಿತು. ತನ್ನ ಕಾದಂಬರಿಯ ಬಗ್ಗೆ ಇನ್ನೂ ಅನೇಕ ಹೊಸ ವಿಚಾರಗಳು ತಲೆಯಲ್ಲಿ ಸುಳಿಯತೊಡಗಿದವು. ಬರೆದು ಮುಗಿಸಿದ ಮೇಲೆಯೂ, ಕೃತಿ ಬೆಳೆಯು ತ್ತಿರುತ್ತದೆ. ನಾನಿಯ ಕೃತಿಯ ಪರಿಸ್ಥಿತಿಯೂ ಹಾಗೇ ಆಗಿತ್ತು. ಇನ್ನೂ ವರೆಗೆ ಅವನು ತನ್ನ ಕಾದಂಬರಿಯ ಬಗ್ಗೆ ಯಾರೆದುರಿಗೂ ಒಂದು ಚಕಾರ ಶಬ್ದವನ್ನು ಆಡಿರಲಿಲ್ಲ. ಈಗ ಮಾತ್ರ ತನ್ನ ಸ್ನೇಹಿತರಲ್ಲಿ ಕೆಲವ ರಿಗೆ ತೋರಿಸಬೇಕೆಂದು ಬಯಕೆಯಾಯಿತು. ಅದರ ಬಗ್ಗೆ ಸುತ್ತು ಸುತ್ತಾಡಿ ಕೆಲವು ಮಾತುಗಳನ್ನೂ ಆಡುತ್ತಿದ್ದ.

ಈ ನಡುವೆ ಸುನೀತಳ ಮದುವೆಯೊಂದು ನಡೆಯಿತು. ಅದಕ್ಕಾಗಿ ನಾನಿ ನಾಲ್ಕುದಿನ ಊರು ಬಿಡಬೇಕಾಯಿತು. ಮದುವೆ ವರನ ಊರ

ಲ್ಲಿಯೇ ಆಯಿತು. ಮದುವೆಯ ಕಾಲಕ್ಕೆ ನಾನಿಯ ತಂದೆ ಏನೂ ರಾಮಾಯಣ ಮಾಡಲಿಲ್ಲ. ಮದುವೆ ಸುಸೂತ್ರವಾಗಿ ನೆರವೇರಿದ್ದರಿಂದ ಕಕ್ಕಿಗೂ ಸಮಾಧಾನವಾಗಿತ್ತು.

ನಾನಿ ಊರಿನಿಂದ ತಿರುಗಿ ಬರುವದರೊಳಗಾಗಿ ಅವನಿಗೆ ಒಂದು ಟಪಾಲು ಕಾದಿತ್ತು. ಸರದೇಸಾಯಿ ಕಾದಂಬರಿಯ ಹಸ್ತಪ್ರತಿಯನ್ನು ತಿರುಗಿ ಕಳಿಸಿದ್ದ. ಅದಲ್ಲದೆ ಅದರ ಜೊತೆಗೆ ಒಂದು ದೀರ್ಘವಾದ ಪತ್ರವೂ ಇತ್ತು. ನಾನಿಯ ಹೃದಯ ಕಾತರದಿಂದ ಬಡಿದುಕೊಳ್ಳಲಾರಂಭಿಸಿತು. ಅವನ ಪಾಲಿಗೆ ಸರದೇಸಾಯಿಯ ಅಭಿಪ್ರಾಯಕ್ಕೆ ಅಮೂಲ್ಯ ಬೆಲೆಯಿತ್ತು. ಸರದೇಸಾಯಿ ಅವನ ಕಾದಂಬರಿಯ ನಿರ್ಣಾಯಕ ದೇವತೆಯಾಗಿದ್ದ. ಕುತೂಹಲ, ಭಯ, ಆಸೆ ಮೊದಲಾದ ಸಂಕೀರ್ಣಭಾವನೆಗಳಲ್ಲಿ ನಾನಿ ಪತ್ರವನ್ನು ಒಡೆದು ನೋಡಿದ.

ಪುಣೆ

ತಾ. . . . . .

ಪ್ರಿಯ ನಾನಿ,

ಇಲ್ಲಿಯ ವರೆಗೆ ನಿನಗೆ ಪತ್ರ ಬರೆಯದಿದ್ದದ್ದಕ್ಕಾಗಿ ಕ್ಷಮೆ ಕೇಳಿಕೊಳ್ಳುತ್ತೇನೆ ನಂಬಿದವರನ್ನು ನಡುನೀರಿನಲ್ಲಿ ಕೈಬಿಡುವದು ನನ್ನಲ್ಲಿ ಹುಟ್ಟಿದಾಗಿನಿಂದಲೇ ಬೆಳೆದು ಬಂದ ನನ್ನ ಸ್ವಭಾವ. ಇನ್ನೊಬ್ಬರಲ್ಲಿ ಆಸೆಯನ್ನು ಹುಟ್ಟಿಸಿ, ಅದು ಸಫಲವಾಗದಂತೆ ಸಾಕಷ್ಟು ಎಚ್ಚರಿಕೆಯನ್ನು ವಹಿಸುತ್ತೇನೆ. ಈ ಕತೆಯನ್ನು ನಿನಗೆ ಹೇಳಿದವ ನಾನು, ಮುಂದೇಕೆ ನೆರವು ನೀಡಲಿಲ್ಲ ಎಂದು ನಿನಗೆ ಸಿಟ್ಟು ಬಂದಿರಬಹುದು. ಆದರೆ ನಾನಿ, ನನ್ನ ಇನ್ನೊಂದು ದೋಷವೂ ನಿನಗೇನೂ ಅಪರಿಚಿತವಲ್ಲ. ನನಗೆ ಬರೆಯುವದೆಂದರೆ ಬೇಸರವಷ್ಟೇ ಅಲ್ಲ, ತಿರಸ್ಕಾರವೂ ಇದೆ. ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ಕಾಗದದಲ್ಲಿ ಮೂಡಿಸಿದರೆ ನಿಮಗೇನು ತೃಪ್ತಿಯಾಗುತ್ತದೋ ದೇವರೇ ಬಲ್ಲ! ಮೇಲಾಗಿ ಬರೆಯುವಷ್ಟು ತಾಳ್ಮೆಯೂ ನನ್ನಲ್ಲಿ ಇಲ್ಲ. ಭಾವನೆ ಮನಸ್ಸಿನಲ್ಲಿ ಮೂಡಿದಾಕ್ಷಣವೇ ಮಾತನಾಡಿ ಮುಗಿಸಿಬಿಡುತ್ತೇನೆ. ಆದರೆ ನಿನ್ನ ಕಾದಂಬರಿ, ಹಾಗೂ ನಿನ್ನ ಕೆರಳಿಸುವ ಪತ್ರ ಇವೆರಡರಿಂದಲೂ ಜರ್ಜರಿತನಾಗಿ, ಜನ್ಮದಲ್ಲಿ ಮೊದಲನೆಯ ಸಾರೆ ಬರೆಯುವ ನಿಶ್ಚಯ ಮಾಡಿದೆ. ಈ ಪತ್ರವನ್ನು ಹತ್ತು ಸಾರೆ ಬರೆದು ತೆಗೆಯ

ಬೇಕಾಯಿತು. ಆದರೂ ನಿನ್ನ ಸಲುವಾಗಿ ಇಷ್ಟು ತೊಂದರೆ ಬಹಳವೇನಲ್ಲ.

ನಿನ್ನ ಕಾದಂಬರಿಯನ್ನು ಓದಿ ಮುಗಿಸಿದೆ. ಶೈಲಿಯ ವಿಷಯವಾಗಿ ಹೇಳಲು ನನಗೆ ಅಧಿಕಾರವಿಲ್ಲ. ಆದರೆ ನನ್ನ ಮಟ್ಟಿಗೆ ಮಾತ್ರ ಅದು ಆಕರ್ಷಕವಾಗಿಯೇ ಕಂಡಿತು. ಇಷ್ಟು ಒಳ್ಳೆಯ ರೀತಿಯಿಂದ ನೀನು ಭಾಷೆಯನ್ನು ಬಳಸಿಕೊಳ್ಳುವಿಯೆಂದು ನನಗನಿಸಿರಲಿಲ್ಲ. ವರ್ಣನೆಯ ಭಾಗದಲ್ಲಿಯಂತೂ ಭಾಷೆಗೆ ಕಾವ್ಯದ ಅಪೂರ್ವ ಕಾಂತಿ ಬಂದಿದೆ. ಆದರೆ ಸುಕುಮಾರವಾದ ಭಾಷಾಶೈಲಿ ಐತಿಹಾಸಿಕ ಅಥವಾ ಪೌರಾಣಿಕ ಕತೆಗಳಿಗೆ ಹೆಚ್ಚು ಯೋಗ್ಯವಾಗುತ್ತಿತ್ತೇನೋ ಎಂದೆನಿಸುತ್ತದೆ. ಕೋಮಲ ಶಬ್ದಗಳ ಮಧುರ ಆವರಣದಲ್ಲಿ ನಿನ್ನ ಕರುಣಾ ಶಕುಂತಲೆಯಂತೆ, ಮಹಾಶ್ವೇತೆಯಂತೆ ಕಾಣುತ್ತಾಳೆ; ಸುಧಾಕರ ಉದಯನನಂತೆ ಕಾಣುತ್ತಾನೆ.

ಇನ್ನು ನಾನು ಹೇಳಿದ ಕತೆಗೂ ನೀನು ಬರೆದದ್ದಕ್ಕೂ ಬಹಳ ವ್ಯತ್ಯಾಸ ಕಂಡಿತು. ವ್ಯತ್ಯಾಸವಿರಬಾರದೆಂದಲ್ಲ. ಆದರೆ ನಿನ್ನ ಕಾದಂಬರಿಗೆ ನಾನು ಹೇಳಿದ ಕತೆಯೇ ಸ್ಫೂರ್ತಿಯನ್ನು ನೀಡಿದೆಯಾದ್ದರಿಂದ ಹೇಳಬೇಕಾಗಿ ಬಂದಿದೆ. ನನ್ನ ಕತೆಯ ನಾಯಿಕೆ ಗಾಯಕಿಯಲ್ಲ. ಅವಳ ಪ್ರಿಯಕರನಿಗೆ ಸಂಗೀತದ ಮೇಲೆ ಆಸ್ಥೆಯೂ ಇಲ್ಲ. ನಾಯಕ ಹಾಸ್ಟೆಲ್ಲಿನಲ್ಲಿರುತ್ತಿದ್ದ. ಅವನು ಆಟಗಾರನಾದ್ದರಿಂದ ಅವನ ಮೈಮಾಟ ಆಕರ್ಷಕವಾಗಿಯೇ ಇತ್ತು. ಈ ಹುಡಿಗೆ ಅವನಲ್ಲಿ ಪ್ರಣಯಭಿಕ್ಷೆಗಳನ್ನು ಬೇಡಿ ಮೂರು ಪತ್ರಗಳನ್ನು ಬರೆದಳು. ಅವನಿಗೆ ಇದೆಲ್ಲ ಹುಡುಗಾಟವಾಗಿ ಕಂಡು, ಉತ್ತರವನ್ನು ಬರೆಯುವ ಗೋಜಿಗೆ ಹೋಗಲಿಲ್ಲ. ಅವಳಿಗೆ ಉನ್ಮಾದವಾದಂತಾಗಿ, ಅವಳು ಹಾಸಿಗೆ ಹಿಡಿದಳು. ಅವಳ ಅಣ್ಣನಿಗೆ ಕಾರಣ ಗೊತ್ತಾಗಿ ಈ ಹುಡುಗನನ್ನು ಕರೆಯಲು ಬಂದ. ಇವನಿಗೆ ಸಿಟ್ಟು ಬಂತು. ಹುಡುಗಾಟ ದೀರ್ಘಕ್ಕೆ ಹೋದಂತೆನಿಸಿತು. ಆದರೂ ಜಡ್ಡಾಗಿದೆಯೆಂದು ಕೇಳಿ ಹೋದ. ಅವಳ ಹಾಸಿಗೆಯ ಬಳಿ ನಿಂತು "ನಾವಿಬ್ಬರೂ ಸ್ನೇಹಿತರಾಗಿರೋಣ" ಎಂದು ಹೇಳಿ ಹೊರಟು ಬಂದ. ಆ ಮಾತನ್ನು ಹೇಳುವಾಗಲೂ ಅವನ ಎದೆ ಭಯದಿಂದ ನಡುಗಿತ್ತು. ಎಂಥ ಪೇಚಿನಲ್ಲಿ ತಾನು ಸಿಕ್ಕೆನಲ್ಲ ಎಂದು ಸಿಟ್ಟೂ ಬಂದಿತ್ತು. ಮುಂದೆ ಕೆಲವು ದಿನಗಳಾದ ಮೇಲೆ ಆ ಹುಡುಗಿ ಕಾಲೇಜು ಬಿಟ್ಟಳು. ಈಗ ಮದುವೆ ಮಾಡಿಕೊಂಡು ಸುಖವಾಗಿದ್ದಾಳೆ.

ನಾನಿ, ಈ ನಡೆದ ಸಂಗತಿಯೆಲ್ಲ ನಿನ್ನ ಕೃತಿಯ ನಿಮ್ಮರ್ಶೆಯಂತೆ

ಇಲ್ಲವೆ ? ನಾನು ಬಿ.ಎ.ದಲ್ಲಿದ್ದಾಗ 'Matthew Arnold'ನ ಒಂದು ವಾಕ್ಯ ವನ್ನು ಕಲಿತಿದ್ದೆ, ಪೇಪರಿನಲ್ಲಿ ಎಲ್ಲಿಯಾದರೂ ತುರುಕಿಬಿಡಬೇಕೆಂದು. " Poetry is the constructive criticism of life " ಎಂದು ಹೇಳಿ ಲ್ಲವೇ ಆತ? ಆದರೆ ಈಗ ಅದನ್ನು ಬದಲಿಸಿ, "Life is the destructive criticism of poetry" ಎಂದು ಮಾಡಿದರೆ ಒಪ್ಪುವದಿಲ್ಲವೇ ? ನಮ್ಮ ಕಲ್ಪನೆಯನ್ನು ಜೀವನ ಕ್ಷಣಕ್ಷಣಕ್ಕೂ ಸೋಲಿಸುತ್ತದೆ. ಆದ್ದರಿಂದ ಲೇಖಕರಿಗೆ ಉಳಿದಿರುವದು ಎರಡೇ ಹಾದಿ. ಒಂದು, ಜೀವನವನ್ನೇ ತಿರಸ್ಕರಿಸಿ ಕಲ್ಪನೆಯ ಬೆನ್ನು ಹತ್ತಬೇಕು. ಇಲ್ಲದಿದ್ದರೆ ಜೀವನವನ್ನೇ ಸಂಪೂರ್ಣವಾಗಿ ಅನುಸರಿಸಬೇಕು. ಇದರಲ್ಲಿ ನೀನು ಎರಡನೆಯ ಮಾರ್ಗ ವನ್ನು ಪ್ರಮುಖವಾಗಿ ಅನುಸರಿಸಿದ್ದೀ. ನಿಮ್ಮ ಸಾಹಿತ್ಯದ ಮಾತಿನಲ್ಲಿ ಹೇಳುವದಾದರೆ ನೀನು ವಾಸ್ತವವಾದಿ. ಆದರೆ ವಾಸ್ತವವಾದಿಗೆ ಇರಬೇ ಕಾದ ಧೈರ್ಯ ನಿನ್ನಲ್ಲಿ ಇಲ್ಲ. ಹುಬ್ಬುಗಂಟು ಹಾಕಬೇಡ. ಒಂದೊಂದಾಗಿ ಹೇಳುತ್ತೇನೆ ಕೇಳು.

ನಿತ್ಯಜೀವನದಿಂದಲೇ ವಸ್ತುವನ್ನು ಎತ್ತಿಕೊಳ್ಳುವಾಗಿನ ಒಂದು ಗಂಡಾಂತರವನ್ನು ನೀನು ಮೊದಲೇ ಅರಿಯಬೇಕಾಗಿತ್ತು. ಜೀವನದಲ್ಲಿಯ ಸಂಗತಿಗಳು ಯಾವಾಗಲೂ ದಾರಿ ತಪ್ಪಿಸುತ್ತವೆ. ಅವುಗಳ ಪರಿಣಾಮ ಹೀಗೇ ಆಗುತ್ತದೆಂದು ಎದೆ ತಟ್ಟಿ ಯಾರು ಹೇಳಬಲ್ಲರು? ಕಾದಂಬರಿಯ ಲ್ಲಿಯ ಘಟನೆಗಳಿಗೆ ಒಂದು ನಿಶ್ಚಿತವಾದ ಕೊನೆ ಇರುವಂತೆ, ಜೀವನದಲ್ಲಿ ಇರುವದಿಲ್ಲ. ಜೀವನ ಪ್ರತಿಕ್ಷಣಕ್ಕೂ ಬದಲಾಗುತ್ತಿರುವಾಗ, ವ್ಯಕ್ತಿಗಳ ಮನೋಭೂಮಿಕೆ ಅದಕ್ಕಿಂತ ಚಂಚಲವಾಗಿರುವಾಗ ಪರಿಣಾಮದ ಬಗ್ಗೆ ನಿಶ್ಚಿತ ಅಭಿಪ್ರಾಯ ಹೇಳುವದು ಅಸಾಧ್ಯ. ಆದ್ದರಿಂದ ವಾಸ್ತವವಾದಿ ಲೇಖಕ ಒಂದು ಮಾತನ್ನು ಲಕ್ಷ್ಯದಲ್ಲಿಡಬೇಕು. ಯಥಾರ್ಥ ಜೀವನದ ಘಟನೆಗಳನ್ನೇ ಎತ್ತಿಕೊಂಡಾಗ, ಅವುಗಳ ಫಲಶ್ರುತಿಯ ಬಗ್ಗೆಯೂ ಹೊಣೆ ವಹಿಸಬೇಕು. ಇಲ್ಲದಿದ್ದರೆ ಅಸಹಜತೆ ತಲೆದೋರುತ್ತದೆ. ಒಂದು ಘಟನೆಗೆ ಇನ್ನಾವುದೋ ಸಂಗತಿಯ ಪರಿಣಾಮವನ್ನು ಜೋಡಿಸಿಬಿಟ್ಟರೆ ಹೇಗೆ? ನುರಿತ ಸಾಹಿತಿ ಜೀವನದ ವಿಶಿಷ್ಟ ನಿಯಮಗಳನ್ನು ಅರಿತು ಕೊಳ್ಳಬೇಕು. ನಿನ್ನ ಕಾದಂಬರಿಯಲ್ಲಿ ಸುಧಾಕರ ಬಿಟ್ಟು ಹೋದ ಮೇಲೆ ಕರುಣಾ ಸಾಯುತ್ತಾಳೆ. ಸಾಯಲು ನಾನೇನೂ ಬೇಡವೆನ್ನುವದಿಲ್ಲ. ನಿತ್ಯಜೀವನದಲ್ಲಿಯಂತೆ ಅದು ಆಕಸ್ಮಿಕವಾಗಿ ಬಂದರೆ ನನ್ನ ಆಕ್ಷೇಪಣೆ

ಇಲ್ಲ. ಅವಳು 'ಟಾಯ್‌ಫಾಯಿಡ್'ನಿಂದ ಸಾಯಬಹುದು. ಆದರೆ ಅವಳ ಮರಣಕ್ಕೆ ಪ್ರೇಮಭಂಗವೇ ಕಾರಣ ಎಂಬ ಮಾತನ್ನು ನಾನೊಪ್ಪಲಾರೆ. ಗಾಲ್ಸವರ್ದಿಯ 'Forsyte Saga' ಓದಿಲ್ಲವೇ ನೀನು? ಅದರಲ್ಲಿ ಶಿಲ್ಪಕಾರ ನಾದ 'ಬಾ:ಸಿನಿ'ಯ ಮರಣ ಎಷ್ಟು ಅನಿರೀಕ್ಷಿತವಾಗಿ ಬಂದೆರಗುತ್ತದೆ!

ಇನ್ನು ಪಾತ್ರಸೃಷ್ಟಿಯ ವಿಷಯ. ನಾವೆಷ್ಟು ಸಂಪ್ರದಾಯಗಳನ್ನು ಬಿಟ್ಟಿದ್ದೇವೆಂದರೂ, ಸೂಕ್ಷ್ಮವಾಗಿ, ನಮಗರಿಯದಂತೆಯೇ ಅವುಗಳ ಆಳಾಗಿದ್ದೇವೆ. ನಾನೇನೂ ಬಹಳ ಓದಿದವನಲ್ಲ. ಆದರೆ ಇತ್ತೀಚೆಗೆ ಕೆಲವು ಕಾದಂಬರಿಗಳನ್ನು ಓದಿದ್ದೇನೆ. (ಮಹಾರಾಷ್ಟ್ರದಲ್ಲಿ ಕರ್ನಾಟಕದ ನೆನಪು) ಅವುಗಳನ್ನು ಓದಿದ್ದರಿಂದ, ನೀನೇನೂ ಅಷ್ಟು ದೊಡ್ಡ ತಪ್ಪುಗಾರ ಅಲ್ಲ ಎಂದೆನಿಸಿತು. ನಾನೋದಿದ ಪ್ರತಿ ಕಾದಂಬರಿಯ ನಾಯಿಕೆಯೂ ನಿನ್ನ ಕರುಣಾಳಂತೆ ಉತ್ತಮ ಗಾಯಿಕೆಯಾಗಿದ್ದಾಳೆ; ಕರುಣಾಳಂತೆಯೇ ಪ್ರೀತಿಯ ತೊಡಕಿನಲ್ಲಿ ಸಿಗುತ್ತಾಳೆ. ಜೀವನವನ್ನು ನಾವು ಕುರುಡು ಕಣ್ಣಿನಿಂದಲೇ ನೋಡುತ್ತಿದ್ದೇವೆ. ಅದರಲ್ಲಿ ಪ್ರೀತಿ, ಮೋಹಕವಾದ ಶೈಲಿ ಇವೆರಡರ ಬಣ್ಣ ಸವರಿ ಎಂಥ ಸುಳ್ಳನ್ನೂ ಮಾರಾಟ ಮಾಡಬಹುದಲ್ಲವೆ? ನಿನ್ನ ಕರುಣಾಳಿಗೆ ಸಂಗೀತ, ಪ್ರೀತಿ ಇವೆರಡನ್ನು ಬಿಟ್ಟರೆ ಬೇರೆ ಕೆಲಸವೇ ಇಲ್ಲವೆ? ಸುಧಾಕರನೂ ಹಾಗೆಯೇ. ತಂದೆಯ ಎದುರು ಅಷ್ಟೇಕೆ ಆದರ್ಶದ ವಿಚಾರಗಳು ಅವನಿಗೆ ಬರುತ್ತವೆ? ನಾನು ಹೀಗೆ ಕೇಳುತ್ತೇನೆ ಎಂದು ಸಿಟ್ಟಿಗೇಳಬೇಡ. ಆದರೆ ಜೀವನದ ಯಥಾರ್ಥಚಿತ್ರ ಯಥಾರ್ಥ ವಾಗಿದೆಯೇ? ಮನುಷ್ಯನಂತೆಯೇ ಒಂದು ಪಾತ್ರವೂ ಹುಟ್ಟಿ ಬೆಳೆಯುತ್ತ ದೆಂದು ನನ್ನ ದೃಢವಾದ ನಂಬಿಕೆ. ಇಲ್ಲದಿದ್ದರೆ ರಾಮ ಸೀತೆಯರಂಥ ಪಾತ್ರಗಳು ಸಾವಿರ ವರ್ಷದ ವರೆಗೂ ಉಳಿಯುತ್ತಿದ್ದವೇ? ನೀವೆಲ್ಲ ಕತೆಗಾರರು, ನೀವು ನೋಡಿದ ವ್ಯಕ್ತಿಗಳ ವ್ಯಕ್ತಿತ್ವವನ್ನು ನಿಮ್ಮ ಪಾತ್ರ ಗಳಿಗೆ ಆರೋಪಿಸುತ್ತೀರಿ. ಆದ್ದರಿಂದ ಅವು ಸ್ವಾತಂತ್ರ್ಯವನ್ನು ಕಳೆದು ಕೊಂಡು ಸಪ್ಪಗಾಗಿ ಬಿಡುತ್ತವೆ. ಇದನ್ನು ಬರೆಯುತ್ತಿರುವಾಗಲೇ ನನ-ಗೊಂದು ವಿಚಾರ ಹೊಳೆದಿದೆ. ಕಾದಂಬರಿಯಲ್ಲಿಯ ಪಾತ್ರಗಳಿಗೂ, ನಿಜ ಜೀವನದ ವ್ಯಕ್ತಿಗಳಿಗೂ ಏನು ಅಂತರ? ವಾಸ್ತವವಾದಿ ಲೇಖಕರಂತೂ ಮೊದಲು ಈ ಪ್ರಶ್ನೆಯನ್ನು ಬಿಡಿಸಿಕೊಳ್ಳಲೇಬೇಕು. ಜೀವನದಲ್ಲಿ ತೀರ ಹತ್ತಿರದವರ ಬಗ್ಗೆಯೂ ನಮಗೆ ಪೂರ್ಣ ಪರಿಚಯವಿರಲಾರದು. ಕೂಡಿ ಬಾಳಬೇಕಾದ ಸಂದರ್ಭದಲ್ಲಿಯೂ ಕೂಡ ಮನುಷ್ಯ ಸ್ವತಂತ್ರವಾಗಿ ತನ್ನ

ಅಂತರಂಗದ ರಹಸ್ಯವನ್ನು ಕಾಪಾಡಿಕೊಂಡು ಬರುತ್ತಾನೆ. ಅವನ ಸ್ವಭಾವವನ್ನು ನಾವು ಊಹಿಸಿಯೇ ತಿಳಿದುಕೊಳ್ಳಬೇಕು. ನಮ್ಮ ಊಹೆ ಕೆಲವು ಸಂದರ್ಭಗಳಲ್ಲಿ ಮಾತ್ರ ಸತ್ಯವಾಗಬಹುದು. ಆದರೆ ಕಾದಂಬರಿಯಲ್ಲಿಯ ಪಾತ್ರಗಳು ತಮ್ಮ ಅಂತರಂಗವನ್ನೇ ತೆರೆದು ತೋರಿಸುತ್ತವೆ. ಅಥವಾ ಅವುಗಳ ರಹಸ್ಯ ತಿಳಿದಿರುವಂತೆ ನೀವು ಬರೆಯುತ್ತೀರಿ. ಏನು ಮಾಡಿದರೂ ಕಾದಂಬರಿ ಜೀವನದ ಸಮಗ್ರಚಿತ್ರವಾಗಲಾರದು. ಪಾತ್ರಗಳು ತಮ್ಮ ವ್ಯಕ್ತಿತ್ವವನ್ನು ತಾವೇ ಬೆಳೆಸಿಕೊಳ್ಳುವಂತೆ ನೀವು ಅವಕಾಶ ಕೊಡಬೇಕು. ಮಾನವನ ಅಂತರಂಗ ದೇವರಿಗೆ ವಿದಿತವಾಗಿರುವಂತೆ, ಪಾತ್ರಗಳ ಅಂತರಂಗ ಲೇಖಕನಿಗೆ ತಿಳಿದಿರುವದು ಅವಶ್ಯವಾಗಿದೆ.

ಅಲ್ಲದೆ ವಿವರಣೆಗಳ ಬಗ್ಗೆಯೂ ನೀನು ಲಕ್ಷ್ಯವಹಿಸಬೇಕಾಗಿತ್ತು. ನಿನ್ನ ಕಾದಂಬರಿಯನ್ನೋದಿದಾಗ ಯಾವ ಪಾತ್ರಗಳೂ ಸ್ಪಷ್ಟವಾಗಿ ಕಣ್ಣೆದುರು ನಿಲ್ಲುವದಿಲ್ಲ. ಆಟವಾಡುವಾಗ ಸುಧಾಕರ ಹೇಗೆ ಕಾಣುತ್ತಿದ್ದ? ಯಾವ ಬಣ್ಣದ ಶರ್ಟು ಹಾಕಿದ್ದ? ಗಣಪತರಾಯರ ಮನೆಯ ಆವರಣ ಹೇಗಿತ್ತು? ಕರುಣಾ ಪತ್ರವನ್ನು ಪೋಸ್ಟ್ ಮಾಡಿದಳೇ? ಇಲ್ಲವೆ ಯಾರ ಕಡೆಯಿಂದಲಾದರೂ ಕೊಟ್ಟು ಕಳಿಸಿದಳೇ? ಇವೆಲ್ಲ ಬಾಹ್ಯವಿವರಣೆಗಳೆಂದು ನೀನು ಮೂಗು ಮುರಿಯಬಹುದು. ಆದರೆ ಅವುಗಳ ಮೂಲಕವಾಗಿಯೇ ನಮಗೆ ಅಂತರಂಗದ ದರ್ಶನವಾಗುತ್ತದೆ. ನಿನ್ನ ಪಾತ್ರಗಳೆಲ್ಲ ಅಮೂರ್ತವಾಗಿವೆ; ಸೂತ್ರದ ಗೊಂಬೆಗಳಂತೆ ನಿಯಂತ್ರಿತವಾಗಿವೆ. ಯಾವ ಜೀವರೇಖೆಯಿಂದ ಪಾತ್ರದವ್ಯಕ್ತಿತ್ವದ ದರ್ಶನವಾಗುವದೋ ಹೇಳಬಲ್ಲವರಾರು? ಮೊನ್ನೆ ಮುಂಬಯಿಗೆ ಹೋಗುವಾಗ Knut Hamsonನ "Growth of the soil!" ಎಂಬ ಕಾದಂಬರಿಯನ್ನು ಗಾಡಿಯಲ್ಲಿ ಓದಿದೆ. ಅದರಲ್ಲಿಯ ಕಥಾನಾಯಕ ನಿರ್ಜನ ಪ್ರದೇಶವೊಂದರಲ್ಲಿ ತನ್ನ ಬಾಳನ್ನು ಪ್ರಾರಂಭಿಸಲು ಬರುತ್ತಾನೆ. ಆಕಸ್ಮಿಕವಾಗಿ ಒಬ್ಬ ಮೂಸೆ ಬಂದ ಹುಡುಗಿಯನ್ನು ಭೆಟ್ಟಿಯಾಗಿ ಮದುವೆಯಾಗುತ್ತಾನೆ. ಯಾಕೆ ಹೇಸಿಗೆಯೆನಿಸಿತೇ? ಆದರೆ ಅದೊಂದು ಸಣ್ಣ ವಿವರದಿಂದಲೇ ಅವಳ ವ್ಯಕ್ತಿತ್ವ ಮರೆಯಲಾರದ ಪ್ರಭಾವವನ್ನು ಉಂಟುಮಾಡುತ್ತದೆ. ಇಂಥ ಜೀವರೇಖೆಯನ್ನು ಗುರುತಿಸದಿದ್ದರೆ ಪುಟಗಟ್ಟಲೆ ವರ್ಣನೆಯನ್ನು ಸೇರಿಸಿದರೂ ವ್ಯರ್ಥ. ಇನ್ನೊಂದು ಮಾತೆಂದರೆ, ನಿನ್ನ ಕಾದಂಬರಿಯ ವ್ಯಕ್ತಿಗಳಿಗೆ ಅಡ್ಡಹೆಸರು ಇಲ್ಲವೆ? ಇವೆಲ್ಲ ಸಣ್ಣಮಾತು ನಿಜ. ಆದರೆ ಇವುಗಳಿಂದಲೆ

ಕಾದಂಬರಿಯಲ್ಲಿಯ ಜೀವನ ಹೆಚ್ಚು ಸ್ಪಷ್ಟವಾಗುತ್ತದೆ.

ಇನ್ನು ಪ್ರೀತಿಯ ಸಮಸ್ಯೆ. ಪ್ರೀತಿ ನಮ್ಮ ಸಾಮಾನ್ಯ ಊಹೆಗೆ ನಿಲುಕದ ಒಂದು ಉದಾತ್ತಭಾವನೆ. ಜಗತ್ತಿನಲ್ಲಿ ಎಲ್ಲರೂ ಪ್ರಣಯಿಗಳಾಗಲಾರರು. ಅದಕ್ಕಾಗಿ ಜೀವನವನ್ನೇ ಅರ್ಪಿಸುವ ಧೈರ್ಯ ಅವರಲ್ಲಿ ಇರಬೇಕಾಗುತ್ತದೆ. ವ್ಯಕ್ತಿಯಲ್ಲಿ ಆ ಯೋಗ್ಯತೆಯಿಲ್ಲದಿದ್ದರೆ, ಆ ಭಾವನೆಯನ್ನು ಅವರಲ್ಲಿ ಆರೋಪಿಸಬಾರದು. ರೋಮಿಯೋ ಒಬ್ಬನೇ ನಿಜವಾದ ಪ್ರಣಯಿ ಎಂದು ನನಗನಿಸಿದೆ. ಪುಂಡರೀಕ-ಮಹಾಶ್ವೇತೆಯರಂಥ ಶ್ರೇಷ್ಠ ವ್ಯಕ್ತಿತ್ವ ಕರುಣಾ-ಸುಧಾಕರರಲ್ಲಿ ಇದೆಯೇ ? ವಿಚಾರಣೀಯವಾದ ಪ್ರಶ್ನೆ.

ಆದರೆ ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬೇಡ. ಕಾದಂಬರಿಯ ಮುಗಿತಾಯವನ್ನು ಸಾಧ್ಯವಾದರೆ ಬದಲಿಸಿ ಬರೆ. ನಾನೇನೂ ಸಾಹಿತ್ಯವನ್ನು ಅಭ್ಯಾಸ ಮಾಡಿದವನಲ್ಲ. ವಿಮರ್ಶಕನಲ್ಲ. ನಾನೊಬ್ಬ ಓದುಗ. ನನ್ನ ಕ್ಷೇತ್ರ ವ್ಯವಹಾರದ ಅನಿವಾರ್ಯ ಜೀವನ. ಆದರೆ ಜೀವನದಲ್ಲಿಯಂತೆಯೇ ಕಾದಂಬರಿಯಲ್ಲಿಯೂ ವ್ಯಕ್ತಿಗಳನ್ನು ಗುರುತಿಸಬಲ್ಲೆ. ಈ ನಾಡೀಪರೀಕ್ಷೆಯಿಲ್ಲದಿದ್ದರೆ ನಮ್ಮ ವಕೀಲಿವೃತ್ತಿಯಲ್ಲಿ ಏನೂ ಹಾಸಲಿಲ್ಲ. ಅಲ್ಲಿ ದೊರೆತ ತಿಳುವಳಿಕೆಯಿಂದಲೇ ಇಷ್ಟು ಬರೆದಿದ್ದೇನೆ. ನನ್ನ ಒಂದು ಕತೆ, ಕಾದಂಬರಿಯ ಸ್ವರೂಪದಲ್ಲಿ ಅರಳಿದ್ದು ಅಭಿನಂದನೀಯವಾದ ವಿಷಯ. ಏನೋ ನನ್ನದೆಂಬುವ ಅಭಿಮಾನದಿಂದ, ಸ್ವಲ್ಪ ನಿಷ್ಠುರವಾಗಿ ನನ್ನ ಅಭಿಪ್ರಾಯ ಹೇಳಿದ್ದೇನೆ. ಕೊನೆಗೆ ನಾನು ನಿನಗೆ ಹೇಳುವದು ಇಷ್ಟೇ: "ಯದ್ರೋಚತೇ ತದ್ಗ್ರಾಹ್ಯಂ, ಯನ್ನ ರೋಚತೇ ತತ್ ತ್ಯಾಜ್ಯಂ."

ನಮಸ್ಕಾರ
ನಿನ್ನ
—ಸರದೇಸಾಯಿ.

---

# ೧೧: ನಾನಿಯ ದಿನಚರಿಯಿಂದ

ತಾ. . . . . . . ೧೯

ಇಂದು ಸರದೇಸಾಯಿಯಿಂದ ಪತ್ರ ಬಂದಿತು. ಅದರ ಪರಿಣಾಮ ಮಾತ್ರ ಕ್ರಾಂತಿಕಾರಕವಾಗಿದೆ. ಅವನ ಮೇಲೆ ಸಿಟ್ಟೂ ಬಂದಿತು. ಆ ನನ್ನ ಕಾದಂಬರಿಯನ್ನೇ ಸುಟ್ಟುಬಿಡಲೇ ಎಂದು ಸಂತಾಪವಾಯಿತು. ಇನ್ನೊಮ್ಮೆ ಸರದೇಸಾಯಿಯ ಅಭಿಪ್ರಾಯಕ್ಕೆ ನಾವೇಕೆ ಹೆದರಬೇಕು ಎಂದೆನಿಸಿತು. ಯಾರಾದರೂ ರಸಿಕವಿಮರ್ಶಕರಿಗೆ ತೋರಿಸಬೇಕಾಗಿತ್ತೇನೋ!

ಆದರೆ ವಿಚಾರ ಮಾಡಿದಂತೆಲ್ಲ ಸರದೇಸಾಯಿಯ ಮಾತು ನಿಜವೆಂದೆನಿಸುತ್ತದೆ. ಸುಳ್ಳು ಕತೆಯನ್ನೇ ಬರೆಯುವದಿದ್ದರೆ, ಬರೆಯದಿರುವದೇ ಒಳ್ಳೆಯದಲ್ಲವೇ? ನನಗೆ ಸಾಹಿತ್ಯ ಕೇವಲ ಒಂದು ಕುತೂಹಲದ ಆಟವಾಗಿದೆ. ಈಗ ನನ್ನ ವಿಚಾರಗಳೇ ಬದಲಾಗಿವೆ. ಕಾದಂಬರಿ ಜೀವನದ ಚಿತ್ರವಲ್ಲ; ಕಲ್ಪನೆಯ ನೇಯ್ಗೆಯಲ್ಲ; ಸ್ವಂತ ಅನುಭವದ ಎರಕವೂ ಅಲ್ಲ. ಇಷ್ಟೇ ಇದ್ದರೆ, ಅದರ ಉಪಯುಕ್ತತೆಯೂ ಅಷ್ಟೇ ಪರಿಮಿತವಾಗಿದೆ. ಸಾಹಿತ್ಯ ಮಾನವವ್ಯಾಪಾರಗಳಲ್ಲಿಯೇ ಅತ್ಯಂತ ಉತ್ಕಟವಾದ ಒಂದು ವ್ಯಾಪಾರ. ಬರೆಯುವದು, ಜೀವಿಸುವದರಂತೆಯೇ ಒಂದು ಜೀವಂತ ಕ್ರಿಯೆ. ಹಾಗಾದರೆ ಮಾತ್ರ ಜಗತ್ತು ಅದನ್ನು ಸ್ವಾಗತಿಸುತ್ತದೆ.

ಮನಸ್ಸು ನಿರಾಸೆಗೊಂಡಿದೆ. ಆದರೂ ಸರದೇಸಾಯಿಯ ಪತ್ರದಲ್ಲಿಯೇ ಪರಿಹಾರದ ಒಂದು ಸೂಚನೆ ಇದೆ. ಕಾದಂಬರಿಯ ಮುಗಿತಾಯವನ್ನು ಬದಲು ಮಾಡಬೇಕು. ಇಡೀ ಕಾದಂಬರಿಯನ್ನು ಇನ್ನೊಮ್ಮೆ ಬರೆಯಬೇಕು. ಅಮೂರ್ತ ಪಾತ್ರಗಳಿಗೆ ಮೂರ್ತತೆಯನ್ನು ತಂದುಕೊಡಬೇಕು. ಏನೇ ಆದರೂ ಮೊದಲ ಕೃತಿ. ಈ ಅಪಯಶಸ್ಸಿನಲ್ಲಿಯೂ ಒಂದು ಯಶಸ್ಸಿನ ಬೀಜವನ್ನು ಕಾಣಬೇಕು. ಕಾದಂಬರಿಯನ್ನು ಬರೆಯುವಾಗಿನಿಂದ ಇಲ್ಲಿಯ ವರೆಗೆ ನಾನು ಕಲಿತ ಪಾಠಗಳ ನೆನಪಿಗಾಗಿ ಈ ಕಾದಂಬರಿಯನ್ನು ಪ್ರಕಟಗೊಳಿಸಬೇಕಾಗಿದೆ. ನನ್ನ ತಪ್ಪನ್ನು ಪ್ರಕಟವಾಗಿಯೇ ಒಪ್ಪಿಕೊಳ್ಳುತ್ತೇನೆ. ಆ ಎಚ್ಚರ ಕೊನೆಯುವರೆಗೆ ನನಗೆ ಬೆಳಕು ನೀಡೀತು.

---

## ಪ್ರಕರಣ : ೧೧

# ಇನ್ನೊಂದು ಕೊನೆ

ಉಂಡ ನೋವು, ದುಃಖಗಳನ್ನು ಕುಟ್ಟಿ ಕುಟ್ಟಿ ಎದೆಯಲ್ಲಿ ಜಿರೆಸಿ, ಬರುವ ನೋವು ದುಃಖಗಳನ್ನು ಅನುಭವಿಸಲು ಎದೆಯನ್ನು ಹವಗೊಳಿಸುತ್ತ ಒಂದು ವರುಷ ಉರುಳಿತು.

ಹೊಸ ಜನ, ಹೊಸ ಗೆಳೆತನ, ಹೊಸ ವಾತಾವರಣಗಳಲ್ಲಿ ಬದುಕಿನ ಚಿತ್ರ ಬೇರೆಬೇರೆ ಬಂಣಕ್ಕೆ ತಿರುಗುತ್ತ ನಡೆದಿತ್ತು. ಹೊಸ ಅನುಭವಗಳಿಗೆ ಹಳೆ ಅನುಭವಗಳು ಅನುವುಮಾಡಿಕೊಟ್ಟು ಎದೆಯಾಳಕ್ಕೆ ಸರಿಯುತ್ತಿದ್ದವು.

ಹಳೆಯ ಅನುಭವಗಳತ್ತ ಹೊರಳಿ ನೋಡಿದಾಗ ಬೇರೆ ಒಂದು ನವೀನ ಅರ್ಥ ಆ ಅನುಭವಗಳಿಗೆ ಉಂಟಾಗುತ್ತಿತ್ತು.

ಸಾದಾ ಧೋತರ, ಅಂಗಿ, ಚಿಕ್ಕಿನ ಕೋಟು, ಕರಿ ಟೊಪ್ಪಿಗೆಯಲ್ಲಿ, ಬದುಕಿನ ಬಿಸಿಲಿಗೆ ಕಂದುಬಣ್ಣಕ್ಕೆ ತಿರುಗಿದ ಸುಧಾಕರ ಮಾಧವನ ಕೋಣೆಯಲ್ಲಿ ಕಾಲಿಟ್ಟಾಗ ಆತ ಸ್ತಂಭಿತನಾದ. ಓಡಿ ಆತನನ್ನೆಳೆದುಕೊಂಡು ಬಂದು ಕುಳಿತ. ನಡೆದು ಬಂದ ದಾರಿಯನ್ನಳೆಯುವಂತೆ ಇಬ್ಬರೂ ಒಬ್ಬರೊಬ್ಬರ ಮುಖ ನೋಡಿಕೊಂಡರು.

ಸುಧಾಕರನನ್ನು ಅಗಲಿದಂದಿನಿಂದ ಆತನ ಸಮಾಚಾರ ಮಾಧವನಿಗೆ ತಿಳಿದಿರಲಿಲ್ಲ. ಹತ್ತಾರು ಕಾಗದ ಬರೆದು ನಿರಾಶನಾಗಿದ್ದ. ಒಬ್ಬಿಬ್ಬ ಪರಿಚಿತರನ್ನು ವಿಚಾರಿಸಿದಾಗ "ಅವರು ಊರು ಬಿಟ್ಟಿದ್ದಾರೆ. ಎಲ್ಲಿಯೋ ನೌಕರಿ ಮಾಡುತ್ತಿದ್ದಾರೆ." ಎಂದಿಷ್ಟೇ ತಿಳಿದಿತ್ತು. ಮಾಧವ ಬಹಳ ವ್ಯಸನಪಟ್ಟಿದ್ದ ಸುಧಾಕರನ ಶಿಕ್ಷಣ ಅಲ್ಲಿಗೇ ನಿಂತದ್ದಕ್ಕೆ. ಸುಧಾಕರನ ಜೊತೆಗೆ ಕಳೆದ ದಿನಗಳ ನೆನಹುಗಳನ್ನು ಮೆಲುಕಾಡಿಸುತ್ತಲೆ ಕಾಲ ನೂಕುತ್ತಿದ್ದ.

ಸುಧಾಕರ ಕೆಲಹೊತ್ತು ವಿಶ್ರಮಿಸಿದ.

"ಒಂದು ಕಾಗದವನ್ನಾದರೂ ಬರೆಯಬಾರದೇ?" ಮಾಧವನ ಪ್ರಶ್ನೆಯಲ್ಲಿ ನೋವು ತುಂಬಿತ್ತು.

"ಯಾವ ಸುಖದಲ್ಲಿದ್ದೆನೆಂದು ಕಾಗದ ಬರೆಯಬೇಕು ನಾನು?"

"ಅಷ್ಟು ದೂರವಾಗಿಬಿಟ್ಟೆನೇನು ನಾನು?" ಇಲ್ಲದ ನಗೆ ತಂದುಕೊಂಡು ಮಾಧವ ಕೇಳಿದ.

ಆ ಮಾತು ಸುಧಾಕರನ ಮೇಲೆ ವಿಚಿತ್ರಪರಿಣಾಮವನ್ನುಂಟುಮಾಡಿತು. ಪಶ್ಚಾತ್ತಾಪವೆನಿಸಿತು.

"ಈಗೆಲ್ಲಿ ಇರುತ್ತೀ?" ಮಾಧವ ಕೇಳಿದ.

ಕಾಲೇಜು ಬಿಟ್ಟಂದಿನಿಂದ ನಡೆದ ತನ್ನ ಬಾಳಿನ ವಿಷಣ್ಣಕತೆಯನ್ನು ಹೇಳುತ್ತ "....ಮುಂದೆ ಬ್ಯಾಂಕಿನಲ್ಲಿ ಕಾರಕೂನನಾಗಿ ಕೆಲಸಕ್ಕೆ ಸೇರಿದೆ." ಎಂದು ಬಹಳ ಹತಾಶಗೊಂಡವನಂತೆ ಮುಗಿಸಿದ.

ತಸು ಹೊತ್ತು ಇಬ್ಬರೂ ತಮ್ಮ ತಮ್ಮ ಮನದೊಳಗೆ ಆಗುತ್ತಿರುವ ಹೇಳಲಾಗದ ಸೌಮ್ಯಸಂವೇದನೆಯಲ್ಲಿ ಮಾತನಾಡದೆ ಕುಳಿತರು.

"ತಂದೆಯವರು ಹೇಗಿದ್ದಾರೆ?" ಎಂದು ಮಾತು ಮುಗಿಯುವ ಮುನ್ನವೆ ಹಿಂದಿನ ನೆನಪಾಗಿ "ಕೇಳಬಾರದಿತ್ತು." ಎಂದುಕೊಂಡು ಮಾಧವ ಸಂಕಟಪಟ್ಟ.

ಸುಧಾಕರ ಉಸಿರುಗರೆಯುತ್ತ, "ಇದ್ದಾರೆ.... ಅವರು ಬದುಕಿದ್ದಾರೆಂಬುದೊಂದೇ ನನಗೆ ಸಮಾಧಾನ" ಎಂದು ನುಡಿದ ಮಾಧವನ ಮನಸ್ಸಿಗೆ ಆಗ ನೆಮ್ಮದಿಯಾಯಿತು.

ಪರಸ್ಪರರು ಬಹಳ ಹೊತ್ತಿನ ವರೆಗೆ ಮಾತನಾಡಿದರು. ಒಂದು ವರುಷದ ಬದುಕನ್ನೆಲ್ಲ ಮತ್ತೊಂದು ಬಾರಿ ಅನುಭವಿಸಿದಂತಾಯ್ತು.

ಇಬ್ಬರಿಗೂ ಎದೆಯ ಭಾರ ಇಳಿದಂತಾಯಿತು. ತಿರುಗಾಡಿಕೊಂಡು ಬರಲು ಹೊರಗೆ ಹೊರಟರು. ಹೋಗುವಾಗ ಸುಧಾಕರನ ದೃಷ್ಟಿ ಸ್ವಾಭಾವಿಕವಾಗಿ ತಾನಿದ್ದ ಕೋಣೆಯ ಕಡೆಗೆ ಹರಿಯಿತು. ಬಾಗಿಲ ಮೇಲೆ ಬರೆದ ಆತನ ಹೆಸರು ಇನ್ನೂ ಅಳಿಸಿರಲಿಲ್ಲ. ಅದನ್ನೊಂದು ನಿಮಿಷ ನೋಡಿದ. ಕಾಲೇಜು, ಸ್ನೇಹಿತರು, ಹಾಸ್ಟೆಲಿನ ಜೀವನ, ಹೀಗೆ ನೂರಾರು ಋಣಾನುಬಂಧಗಳ ನೆನಪುಗಳು ಅವನನ್ನು ನೋಯಿಸಿದವು. ಗೆಳೆಯರೆಲ್ಲರ ವಿಷಯವಾಗಿ ಕೇಳಿದ. ಇನ್ನೂ ಒಂದು ಮಾತು ಉಳಿದಿತ್ತು ಕೇಳುವದು. ಬೇಕೆಂತಲೇ ಅದುಮಿಟ್ಟದ್ದರಿಂದ ಅದು ಈ ವರೆಗೂ ಮೇಲಕ್ಕೆ ಬರದೆ ಒಳಗೇ ಉಳಿದಿತ್ತು. ಈಗ ಮಿಕ್ಕಿತು. "ಕರುಣಾ ಹೇಗಿದ್ದಾಳೆ?" ಎಂದು ಅನುಕಂಪದ ಧ್ವನಿಯಲ್ಲಿ ಕೇಳಿದ.

ಆ ಅನುಕಂಪದ ಹಿಂದೆ ಆಸೆಯ ಛಾಯೆಯೂ ಇತ್ತು.

ಆತನ ಪ್ರಶ್ನೆಗೆ ಮಾಧವ "....ಅವಳ ದೇಹಸ್ಥಿತಿ ಸುಧಾರಿಸಿತಾದರೂ ಮೊದಲಿನ ಕರುಣಾ ಆಗಲಿಲ್ಲ ಅವಳು. ಕಲಿಯುವದನ್ನು ನಿಲ್ಲಿಸಿದಳು. ಮನೆಯನ್ನು ಬಿಟ್ಟು ಹೊರಗೆ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿರಲಿಲ್ಲ. ದಿನದಿನಕ್ಕೆ ಹೆಚ್ಚು ಅಂತರ್ಮುಖಿಯಾದಳು. ವಾತಾವರಣ ಬದಲಾದರೆ ಒಳ್ಳೆಯದಾದೀತು ಎಂದು ಕೆಲವು ದಿನ ಸೋದರಮಾವನ ಮನೆಗಾದರೂ ಕಳಿಸಬೇಕೆಂದು ಗಣಪತರಾಯರು ವಿಚಾರಿಸಿದರು. ಅದಕ್ಕೆ ಅವಳು ಒಪ್ಪಲಿಲ್ಲ. ಅರುಣಳಿಗೆ ಅವಳದೇ ಚಿಂತೆ, ಕೊರಗು...." ಎಂದು ಹೇಳುತ್ತಿರುವಾಗ ಸುಧಾಕರ ಏಕಾಗ್ರತೆಯಿಂದ, ಆಸ್ಥೆಯಿಂದ, ಯಾವುದೋ ಹುಚ್ಚು ಬಯಕೆಯಿಂದ ಕೇಳುತ್ತಿದ್ದ.

ಮಾಧವ ಮುಂದುವರಿಯುತ್ತ, "....ಮುಂದೆರಡು ತಿಂಗಳಲ್ಲಿ ಅವಳ ಮದುವೆ ಮಾಡಿದರು. ಅವಳ ಗಂಡ ಡಾಕ್ಟರನಿದ್ದಾನೆ. ಈಗ ಅವಳು ಸಂಸಾರಿಯಾಗಿ ಸುಖಿಯಾಗಿದ್ದಾಳೆ." ಎಂದು ಹೇಳಿದ.

ಸುಧಾಕರ ಬಿಸಿಯುಸಿರು ಬಿಟ್ಟ. ಅದೇಕೋ ಕಣ್ಣಲ್ಲಿ ನೀರು ಬಂದವು. ಆತನಲ್ಲಿ ಸುಖದುಃಖ ಎರಡೂ ಸಮಸಮಾನವಾಗಿ ಬೆರೆತ ಒಂದು ಭಾವನೆಯು ಹುಟ್ಟಿತು. ಅಲ್ಲಿ ಇನ್ನು ನಿಲ್ಲಬಾರದು ಎನಿಸಿತು. ಒಮ್ಮೆಲೆ "ಮಾಧವ, ನಾನು ಈ ದಿನವೇ ಮಧ್ಯಾಹ್ನ ಊರಿಗೆ ತಿರುಗುತ್ತೇನೆ." ಎಂದು ಹೇಳಿಬಿಟ್ಟ.

ಅದರ ಕಾರಣ ಮಾಧವನಿಗೆ ತಿಳಿಯಲಿಲ್ಲ. ಬೇಕೆಂತಲೆ "ಗಣಪತರಾಯರನ್ನು ಕಂಡು ಹೋಗುವದು ಬೇಡವೇ? ಅವರೂ ಈಗ ತಂದೆಯಾಗುವವರಿದ್ದಾರೆ. ನಿನ್ನೆಯ ದಿನವೇ ಕರುಣಾ ಬರುವವಳಿದ್ದಳೆಂದು ಹೇಳಿದ್ದರು. ನಿನ್ನೆ ಬರಲಿಲ್ಲ. ಈ ದಿನ ಬರಬಹುದು." ಎಂದು ಹೇಳುತ್ತ ಸುಧಾಕರನನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದ.

"ಸಾಧ್ಯವಿಲ್ಲ. ನನಗೆ ರಜೆಯಿಲ್ಲ. ನಿನ್ನ ಭೆಟ್ಟಿಗಾಗಿ ಬಂದಿದ್ದೆ. ಆಯ್ತಲ್ಲ?" ಎಂದು ತನ್ನ ಆ ಕ್ಷಣದ ವ್ಯಥೆಯನ್ನು ಮರೆಮಾಡುತ್ತ ಹೇಳಿದ.

ಮಾಧವ ಹೆಚ್ಚು ಒತ್ತಾಯಪಡಿಸಲಿಲ್ಲ.

ಮಧ್ಯಾಹ್ನ ಸುಧಾಕರನನ್ನು ಊರಿಗೆ ಬೀಳ್ಕೊಟ್ಟು ಬಂದ.

ಗಾಡಿ ಬಿಡುತ್ತಿತ್ತು. ಸುಧಾಕರ ಕಣ್ಮರೆಯಾಗುತ್ತಿರುವ ಆ ಊರಿನೆಡೆಗೆ ನೋಡುತ್ತಲೆ ಕುಳಿತಿದ್ದ. ಸಮಯ ಸವೆಯುತ್ತಲೆ ಇತ್ತು. ಸುಧಾಕರನ

ವಿಚಾರಗಳೂ ನಡೆದೇ ಇದ್ದವು. ಕರುಣಳೊಂದಿಗೆ ತಾನು ಆಡಿದ ಮಾತು, ನಡೆದ ಕತೆಯೆಲ್ಲ ನೆನಪಾದವು. "ನನ್ನದೆಂತಹ ಹುಚ್ಚು ಆಸೆ ಈಗ!....ಒಟ್ಟಾರೆ ದೈವ ಬೇಕು!" ಎಂದು ಅಂದುಕೊಂಡ ಮನದಲ್ಲಿ. ಆಗ ಮೂಡಿದ ನಗೆಯಲ್ಲಿ ಮನದ ಮಾತೆಲ್ಲ ತುಂಬಿ ನಿಂತಿತ್ತು.

ನಿಲ್ದಾಣಗಳು ಒಂದಾದ ಮೇಲೊಂದು ಸಾಗುತ್ತಿದ್ದವು.

ಮತ್ತೊಂದು ನಿಲ್ದಾಣ ಬಂದಿತು. ಗಾಡಿ ಎದುರಿನಿಂದ ಬರುವ ಇನ್ನೊಂದು ಗಾಡಿಗಾಗಿ ದಾರಿಕಾಯುತ್ತ ನಿಂತಿತ್ತು. ಕಿಟಕಿಯಲ್ಲಿ ಮುಖವಿಟ್ಟು ಕೊಂಡು ಕುಳಿತಿದ್ದ ಸುಧಾಕರನಿಗೆ ಎಲ್ಲಿಲ್ಲದ ಬೇಸರ ಬಂದಿತ್ತು. ಡಬ್ಬಿಯಲ್ಲಿದ್ದವ ರನೇಕರು ಉಪಹಾರ ಚಹಕ್ಕಾಗಿ ಕೆಳಗಿಳಿದು ನಡೆದರು. ಸುಧಾಕರ ಮಾತ್ರ ಕುಳಿತ ಜಾಗ ಬಿಟ್ಟು ಕದಲಿಲ್ಲ.

ದೂರದಲ್ಲಿ ಗಾಡಿಯ ಸಿಳ್ಳು ಕೇಳಿಸಿತು. ಕೆಲಕ್ಷಣಗಳಲ್ಲಿ ಗಾಡಿ ಬಂದಿತು. ಸುಧಾಕರ ಕುಳಿತ ಡಬ್ಬಿಯ ಎದುರಿಗೆ ಎರಡನೇ ವರ್ಗದ ಡಬ್ಬಿ ಬಂದು ನಿಂತಿತು. ಸುಧಾಕರ ಸಹಜಕುತೂಹಲದಿಂದ ಎದುರಿಗಿನ ಡಬ್ಬಿಯಲ್ಲಿ ನೋಡಿದ. ಅದೇ ಡಬ್ಬಿಯಲ್ಲಿ ಕುಳಿತಿದ್ದ ಕರುಣಳನ್ನು ನೋಡಿದ. ಕಸಿವಿಸಿಗೊಂಡ ಎನಬೇಕೇ? ಉಹುಂ. ಏನೋ ತನ್ನದು ತನಗೇ ತಿಳಿಯದಂತಾಯ್ತು. ಒಮ್ಮೆಲೆ ತನ್ನ ಗಾಡಿ ಯಿಂದ ಕೆಳಗಿಳಿದು ಹೋದ. ಹೇಗೆ ಮಾತಾಡಿಸಬೇಕು? ಏನೆಂದು ಮಾತಾಡಿಸ ಬೇಕು? ಎಂದು ವಿಚಾರಿಸುತ್ತಿರುವಾಗಲೆ ಆ ಡಬ್ಬಿಯ ಹತ್ತಿರ ಹೋದ. ಮತ್ತೆ ನೋಡಿದ. ಅಹುದು. ಕರುಣಾ! ಅವಳೇ! ಅದೇ ಕರುಣಾ?

ಸುಧಾಕರ ಸಮೀಪ ಬಂದಾಗ ಅಕಸ್ಮಾತ್ತಾಗಿ ಅವಳೂ ಮುಖ ಹೊರಳಿಸಿ ಇತ್ತ ನೋಡಿದಳು.

"ಕರುಣಾ!" ಎಂದಿಷ್ಟೇ ನುಡಿದ ಸುಧಾಕರ.

"ಗುರುತು ಸಿಕ್ಕಿತೇ?" ಎಂದಿಷ್ಟೇ ಕೇಳಿ ಮುಗುಳುನಗೆ ನಕ್ಕಳು ಅವಳೂ.

ಸುಧಾಕರ ದೃಷ್ಟಿಯನ್ನು ಮೇಲಕ್ಕೆತ್ತಲಿಲ್ಲ. ಹೆಚ್ಚಿನ ಮಾತನಾಡಲಿಲ್ಲ.

ಅವಳೂ ಮಾತನಾಡದೆ ಮಡಿಲಲ್ಲಿದ್ದ ತನ್ನ ಮಗುವಿನ ತಲೆಗೂದಲನ್ನು ತೀಡುತ್ತ ಕುಳಿತಳು.

"ಮಗನೋ? ಮಗಳೋ?" ಎಂದು ಕೊನೆಗೆ ಸೋಣೆತ್ತಿ ನೋಡಿ ಕೇಳಿದ.

"ಮಗ." ಎಂದು ಎತ್ತಿ ಕಿಟಕಿಗೆ ಹಿಡಿದು ತೋರಿಸಿದಳು.

"ಹೆಸರೇನಿಟ್ಟಿದ್ದೀರಿ?" ಎಂದು ಕಿಟಕಿಯ ಹೊರಗೆ ಮುಖ ಚಾಚಿ "ಗಾತ ಗೂಕ" ಎಂದು ಕೈಕಾಲು ಆಡಿಸುತ್ತಿದ್ದ ಮುದ್ದು ಮಗುವಿನ ಕೈಬೆರಳನ್ನು ಹಿಡಿದು ಕೇಳಿದ.

"ಸುಧಾಕರ...." ಎಂದು ಹೇಳಿ ಏನೋ ಮುಂದೆ ಮಾತನಾಡಬೇಕೆನ್ನುವಷ್ಟರಲ್ಲಿ ಸುಧಾಕರನ ಗಾಡಿ ಕೂಗಿತು. ಗಡಿಬಿಡಿಯಿಂದ ಇನ್ನೊಂದು ಬಾರಿ ಕರುಣಳನ್ನು, ಅವಳ ಮಗುವನ್ನು ನೋಡಿ "ನಾನು ಹೋಗಿಬರುತ್ತೇನೆ....ನೆನಪಿರಲಿ....ನಮಸ್ಕಾರ...." ಎಂದು ಹೇಳಿ ತನ್ನ ಡಬ್ಬಿಗೆ ಓಡಿದ.

---

## ಮನೋಹರ ಗ್ರಂಥಮಾಲಾ, ಧಾರವಾಡ

ಈ ಗ್ರಂಥಮಾಲೆಯು ಹದಿನೈದನೆಯ **ಅಗಸ್ಟ** ೧೯೩೩ಕ್ಕೆ ಪ್ರಾರಂಭವಾಗಿದೆ.

ಕಾದಂಬರಿ, ಸಣ್ಣಕತೆ, ನಾಟಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೂ ಕಾವ್ಯ, ವಿಮರ್ಶೆ, ವೇದಾಂತ, ವಿಜ್ಞಾನ ಮೊದಲಾದ ವಿಚಾರಸಾಹಿತ್ಯವನ್ನೂ ಸಂಗೀತ, ನೃತ್ಯ, ಚಿತ್ರಕಲೆ, ಶಿಲ್ಪಕಲೆ, ಆರೋಗ್ಯ, ಗೃಹಜೀವನ, ಸೂಚಿಶಿಲ್ಪ, ಗೃಹಾಲಂಕಾರ, ಪ್ರವಾಸಪರಿಚಯ ಮೊದಲಾದ ಸರ್ವಜ್ಞಾನಪರಿಚಯವನ್ನು ಮಾಡಿಕೊಡುವ ಪ್ರಯೋಜಕ ಸಾಹಿತ್ಯವನ್ನೂ ಈ ಗ್ರಂಥಮಾಲೆಯು ಪ್ರಕಟಿಸುತ್ತದೆ.

ಈ ಕಾರ್ಯದಲ್ಲಿ ಶ್ರೀಯುತರಾದ **ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗುಳಿ** ಈ ಸಹೃದಯರು ಪ್ರಾರಂಭದಿಂದಲೂ ಈ ಗ್ರಂಥಮಾಲೆಗೆ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ಇಡಿ ಕನ್ನಡನಾಡಿನ ಸಿದ್ಧಹಸ್ತ ಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರದುಕೊಟ್ಟು ಅದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಗ್ರಂಥಮಾಲೆಯ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

ಗ್ರಂಥಮಾಲೆಯ ಹೊಸವರ್ಷಾರಂಭವು **ಅಗಷ್ಟ** ತಿಂಗಳಿಂದಾಗುತ್ತದೆ.

ಅಗಸ್ಟದಿಂದ ಜುಲೈವರೆಗಿನ ಒಂದು ವರ್ಷದ ಅವಧಿಯಲ್ಲಿ ಈ ಗ್ರಂಥಮಾಲೆಯು ತನ್ನ ಗ್ರಾಹಕರಿಗೆ, ಅವರಿಂದ ಸಂದ ಚಂದಾಹಣದಲ್ಲಿ **ಒಂದು ಸಾವಿರ ಪುಟಗಳ** ಸಾಹಿತ್ಯವನ್ನು ಸಲ್ಲಿಸುವುದು. ಅಂಚೆಯ ದರ ಮೊದಲಿಗಿಂತಲೂ ಹೆಚ್ಚೆಚ್ಚು ಏರುತ್ತ ಬಂದಿದ್ದರಿಂದ ಗ್ರಂಥಗಳನ್ನು **ಒಂದೇ ಕಂತಿನಲ್ಲಿ** ಮಾತ್ರ ಚಂದಾದಾರರಿಗೆ ರಜಿಸ್ಟರದಿಂದ ತಲುಪಿಸಲಾಗುತ್ತದೆ. ರಜಿಸ್ಟ್ರೇಶನ್ನಿಗಾಗಿ ತಗಲುವ ಎಂಟಾಣೆಯನ್ನು ಮಾತ್ರ ಈಗಿದ್ದ ಚಂದಾಹಣದಲ್ಲಿ ಕೂಡಿಸಲಾಗುವದು.

ಆಯಾ ವರ್ಷದಲ್ಲಿ ಪ್ರಕಟವಾಗುವ ಗ್ರಂಥಗಳ ಸಂಖ್ಯೆಯು ಅವುಗಳ ಪುಟಸಂಖ್ಯೆಯ ಪ್ರಮಾಣದ ಮೇಲಿಂದ ಹೆಚ್ಚುಕಡಿಮೆಯಾಗಬಹುದು.

ಗ್ರಂಥಮಾಲೆಯ ಸದ್ಯದ ವಾರ್ಷಿಕ ಚಂದಾ **ಆರು ರೂಪಾಯಿ ಐವತ್ತು ನಯೆಪೈಸೆ** ಮಾತ್ರ. ( ೬.೫೦ ) ಇದೆ.

[ಅಗಸ್ಟ ೧೯೫೪ರ ಹಿಂದೆ ಗ್ರಂಥಮಾಲೆಯ ವಾರ್ಷಿಕ ಚಂದಾ ಎಂಟು ರೂಪಾಯಿ ಇದ್ದುದನ್ನು, ಹೊಸವರ್ಷದಿಂದ - ಅಂದರೆ ಅಗಸ್ಟ ೧೯೫೪ರಿಂದ ಪ್ರಾರಂಭವಾಗುವ ಹೊಸ ವರ್ಷದಿಂದ - ಆರು ರೂಪಾಯಿ ಎಂಟಾಣೆಗೆ ಇಳಿಸಲಾಗಿದೆ.]

ಗ್ರಂಥಮಾಲೆಗೆ ಒಂದೇ ಸಲಕ್ಕೆ **೧೫೦ ರೂಪಾಯಿ** ಸಲ್ಲಿಸಿದವರನ್ನು ಆಜೀವ ಚಂದಾದಾರರನ್ನಾಗಿ ಮಾಡಿಕೊಂಡು, ಅವರಿಗೆ ಆ ವರ್ಷದಿಂದ ಪ್ರಾರಂಭಮಾಡಿಕೊಂಡು ಅವರ ಆಜನ್ಮಪರ್ಯಂತ ಮಾಲೆಯ ಗ್ರಂಥಗಳನ್ನು ಹಾಗೆಯೆ ಸಲ್ಲಿಸಲಾಗುವುದು. ಮತ್ತು ಬಿಡಿಮುತ್ತುಗಳನ್ನು ಅವರಿಗೆ ಅರ್ಧ ಬೆಲೆಗೆ ಕೊಡಲಾಗುವುದು.

ವರ್ಷದಲ್ಲಿ ಯಾವಾಗ ಬೇಕಾದರೂ ಹೊಸದಾಗಿ ಚಂದಾದಾರರಾಗಬಹುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಗ್ರಂಥಮಾಲೆಯ ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತು ಅನ್ವಯಿಸುವುದಿಲ್ಲ.

ಗ್ರಂಥಗಳಿಗಾಗಿ ಬೇಡಿಕೆ ಕಳಿಸಿಕೊಡುವವರು **"ಮಾರಾಟಕ್ಕೆ ದೊರೆಯುವ ಗ್ರಂಥಗಳ"** ಪಟ್ಟಿಯನ್ನು ದಯವಿಟ್ಟು ಗಮನಿಸಬೇಕು.

ಪುಸ್ತಕವ್ಯಾಪಾರಿಗಳಿಗೆ ಮುಖಬೆಲೆಯ ಮೇಲೆ ೨೫% ಕಮಿಶನ್ ಕೊಡಲಾಗುವದು. ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

ಸಂಪಾದಕ :

**ಮನೋಹರ ಗ್ರಂಥಮಾಲಾ, ಧಾರವಾಡ**

ಮನೋಹರ ಗ್ರಂಥಮಾಲೆ, ಧಾರವಾಡ

ಸಂಪಾದಕ :
ಜಿ. ಬಿ. ಜೋಶಿ

# ಪರಿಚಯ

# ಚಂದಾದಾರರಾದರೇನು ಲಾಭ?

- ಸುಮಾರು ೧೩ ರೂ. ಬೆಲೆಯ ಪುಸ್ತಕಗಳು ಕೇವಲ ಏಳೇ ರೂಪಾಯಿಗಳಲ್ಲಿ ನಿಮ್ಮ ಮನೆಯ ವರೆಗೆ ಬಂದು ತಲುಪುತ್ತವೆ.

**ಇದೇ ವರ್ಷ ೧೯೫೭-೫೮ಕ್ಕೆ ಚಂದಾದಾರರಾದರೆ<br>ಇನ್ನೂ ಹೆಚ್ಚಿನ ಲಾಭವಿದೆ.**

- ಹಿಂದಿನ ಮೂರು ವರ್ಷಗಳ ಗ್ರಂಥಗಳೂ ಚಂದಾ ಸವಲತ್ತಿನಿಂದ ದೊರೆಯುತ್ತವೆ. (೨೨, ೨೩, ೨೪)
- "ಸಮರಸವೇ ಜೀವನ" ೧೫ ರೂಪಾಯಿಯ ಕಾದಂಬರಿ ಕೇವಲ ಎಂಟೇ ರೂಪಾಯಿಗೆ ದೊರೆಯುತ್ತದೆ.
- "ನಡೆದು ಬಂದ ದಾರಿ" ಗ್ರಂಥಮಾಲೆಯ ೨೫ನೇ ವರ್ಷದ ಸಾಹಿತ್ಯ ಸಂಪುಟವು ಚಂದಾದಾರರಿಗೆ ಮಾತ್ರ ದೊರೆಯುತ್ತದೆ.
- ಗ್ರಂಥಮಾಲೆಯ ಕಾಣಿಕೆಗ್ರಂಥವೊಂದು ಹಾಗೇ ದೊರೆಯುತ್ತದೆ.

**ಇಂದೇ ಚಂದಾದಾರರಾಗಿರಿ!**

ಗ್ರಂಥಮಾಲೆಯ ೨೫ನೆಯ ವರ್ಷಕ್ಕಾಗಿ ತಮ್ಮ ಸದ್ಭಾವನೆಯ ಕುರುಹೆಂದು ಇದರೊಡನಿದ್ದ ಚಂದಾ ಬೇಡಿಕೆಯ ಫಾರ್ಮ ತುಂಬಿ ಕಳಿಸಿಕೊಡುವಿರಾ? ಅದೇ ತಮ್ಮ ಸದಿಚ್ಛಾಪತ್ರ.

**ವಾರ್ಷಿಕ ಚಂದಾ ಏಳು ರೂಪಾಯಿ ಮಾತ್ರ**

ಸಂಪಾದಕ :<br>**ಮನೋಹರ ಗ್ರಂಥಮಾಲಾ,<br>ಧಾರವಾಡ.**

# ಇಪ್ಪತ್ತೈದು ವರ್ಷದ ಮನೋಹರ ಗ್ರಂಥಮಾಲೆ

**ಹಿಂದಿರುಗಿ ನೋಡಿದಾಗ:**

ಸುಮಾರು ಮೂವತ್ತೈದು ವರ್ಷಗಳ ಹಿಂದೆ, ರಾಷ್ಟ್ರೀಯ ಜಾಗೃತಿಯ ಗಾಳಿ ಉತ್ತರದಿಂದ ಇತ್ತ ಆದೇ ಬೀಸುತ್ತಿದ್ದಾಗ, ಉತ್ತರ ಕರ್ನಾಟಕದಲ್ಲಿ, ಧಾರವಾಡದಲ್ಲಿ ಹೊಡೆಯೊಡೆಯಲು ಬೆಳೆದು ನಿಂತ ಬೆಳೆ, ಆ ಸೋಂಕು ತಾಕಿ ಹೊಡೆಯಲ್ಲಿಯೇ ಕಾಳು ಹಿಡಿಯಿತು. ಮುಂದೆ ಹೊಡೆಯೊಡೆದು ತೆನೆ ಬಂತು; ಅದೇ 'ಗೆಳೆಯರ ಗುಂಪು' ಆಯಿತು. ಮೊದಲ ಕಾಳು ಹಿಡಿದವರೇ ಈಗ ಕನ್ನಡ ನಾಡಿಗೇ ವರಕವಿಗಳಾಗಿ ನಿಂತ ಸಿದ್ಧಸಾಹಿತಿ ಶ್ರೀ. ದ. ರಾ. ಬೇಂದ್ರೆಯವರು. ಕಾಳಿಗೆ ಕಾಳು ಕೂಡಿಸಿಕೊಂಡರು. ಒಂದಕ್ಕೊಂದು ರಸ ಹರಿದಾಡುವಂತೆ ಮಾಡಿದರು. ಕಾಳು ತುಂಬಿದ ತೆನೆಯಾಗಿ ತಲೆಯೆತ್ತಿತು. ಅದೇ ಕನ್ನಡ ಹೊಸ ಸಾಹಿತ್ಯದ ಮೊದಲ ತೆನೆಯಾಯಿತು.

ಹೊಸ ಕಾಲಕ್ಕನುಗುಣವಾಗಿ ಹೊಸ ಸಾಹಿತ್ಯವನ್ನು ನಿರ್ಮಿಸಲು ಸಮಾನಧರ್ಮದ ಉತ್ಸಾಹಿ ಗೆಳೆಯರ ಗುಂಪೊಂದು ಶ್ರೀ. ಬೇಂದ್ರೆಯವರ ಮೂಲಸ್ಫೂರ್ತಿಯಿಂದ ಅವರ ಸುತ್ತು ನೆರೆಯಿತು. ಅವರೇ ಅದಕ್ಕೆ ಕೇಂದ್ರವಾಗಿ ನಿಂತರು. ಹೊಸಗನ್ನಡ ಸಾಹಿತ್ಯಕ್ಕೆ ನವೋದಯದ ಕಾಲ ಆಗಲೇ ಪ್ರಾರಂಭವಾಯಿತು. ಕೆಲ ಗೆಳೆಯರು ರವೀಂದ್ರರ ಶಾಂತಿನಿಕೇತನಕ್ಕೆ ಇವರ ಪ್ರೇರಣೆಯಿಂದಲೇ ಹೋಗಿ ಬಂದರು. ರವೀಂದ್ರರ ಆ ಶಾಂತಿನಿಕೇತನದ ಕಾವ್ಯಜೀವನ, ಪಾಂಡಿಚೆರಿಯ ಶ್ರೀ. ಅರವಿಂದರ ಆಧ್ಯಾತ್ಮಿಕಜೀವನ, "ಏ. ಈ." "ಮೆಟರಲಿಂಕ" ಮೊದಲಾದವರ ಗ್ರಂಥಗಳಲ್ಲಿಯ ಸ್ವಪ್ನಜೀವನ ಈ ಗುಂಪಿಗೆ ವಸಂತ ಪ್ರೇರಣೆಯಂತಿದ್ದವು. ಗುಂಪಿನ ಗೆಳೆಯರೆಲ್ಲ ಒಂದಿಲ್ಲ ಒಂದು ದೃಷ್ಟಿಯಿಂದ ಆದರ್ಶವಾದಿಗಳು, ಕನಸಿಗರು. ಹೊಸ ಸಾಹಿತ್ಯದ ರೂಪರೇಷೆಗಳು, ಅದರ ವಿವಿಧ ಛಂದೋವಿಲಾಸಗಳು, ಚಲುವು ನಿಲುವುಗಳು ಆಗಲೇ ಅವರ ಕನಸಿನ ಕಣ್ಣುಗಳಿಗೆ ಗೋಚರವಾಗಿದ್ದವು.

ಗುಂಪಿನ ಉದ್ದೇಶ, ಒಬ್ಬೊಬ್ಬರಲ್ಲಿಯೂ ಹುದುಗಿದ್ದ ಶಕ್ತಿವಿಲಾಸಕ್ಕೆ –ಅದು ಯಾವುದೇ ಇರಬಹುದು– ಅನುವು, ಅನುಕೂಲ ಒದಗಿಸಿಕೊಡುವುದೇ

ಆಗಿತ್ತು. ಸಾಹಿತ್ಯಸೃಷ್ಟಿ, ಸಾಹಿತ್ಯದ ಅಭ್ಯಾಸ, ಸಾಹಿತ್ಯ ವಿನೋದ, –ಬರೆಯುವದು, ಬರೆದದ್ದನ್ನು ಗೆಳೆಯ ರಸಿಕರಿಗೆ ಓದಿ ತೋರಿಸುವದು, ಪ್ರಕಟಗೊಳಿಸುವದು– ಇವು ಅವರ ದೈನಂದಿನ ಚಟುವಟಿಕೆಗಳಾಗಿದ್ದವು. ಆಗಿನ ಕಾಲ ಅಪೂರ್ವವಾದ ಸೃಷ್ಟಿಕಾಲ; ಹೊಸಗನ್ನಡ ಸಾಹಿತ್ಯದ ಚಾಂದ್ರಮಾನ. ಕನಸುಗಾರಿಕೆಯ ಬೆಳುದಿಂಗಳಲ್ಲಿ ಅರಳಿದ ಸಾಹಿತ್ಯಪುಷ್ಪಗಳಿಗೆ ಲೆಕ್ಕವೇ ಇಲ್ಲ. ಬೇಂದ್ರೆಯವರ ಗಾರುಡಿಗನ ಮೋಡಿಗೋ ಅಥವಾ ತರುಣಸಾಹಿತಿಗಳ ಅಂತರಂಗದ ಆಸೆಗಳ ಒತ್ತಡಕ್ಕೋ, ಹೊಸಸಾಹಿತ್ಯದ ದೈವ ಫಲವಾಗಿ ಬಂದದ್ದರಿಂದಲೋ ಸಾಹಿತ್ಯದ ಪೈರು ಹುಲಸಾಗಿ ಬೆಳೆಯಿತು. ಮೊದಲನೆಯ ಪ್ರತಿ ಕಾಳೂ ಒಂದೊಂದು ತೆನೆ ಬಿಟ್ಟಿತು.

ಸಾಹಿತ್ಯಸೃಷ್ಟಿ ಅವರಿಗೆ ಲೀಲೆಯಾಗಿತ್ತು. 'ಲೀಲೆಯಲಿ ಯಾವುದೂ ವಿಫಲವಲ್ಲ' ಎಂಬ ತಿಳುವಳಿಕೆಯೂ ಅವರಿಗಿತ್ತು. ಗೆಳೆಯರ ಗುಂಪಿನ ಪ್ರಥಮ ಕವನ ಸಂಕಲನ "ಹಕ್ಕಿಹಾರುತಿದೆ" ಹೊಸಗನ್ನಡ ಕಾವ್ಯದ ನಾಂದಿಯಾಗಿದೆ. ಆದರೂ ಗುಂಪಿನ ಸಿದ್ಧಿಗಳನ್ನೆಲ್ಲ ಇತಿಹಾಸವಾಗಿ ನಿರೂಪಿಸಲು ಒಂದು ಸಾಧನೆ ಬೇಕಾಗಿತ್ತು; ಗುಂಪಿನ ಗೆಳೆಯರ ಬರವಣಿಗೆಗಳನ್ನು ಪ್ರಕಟಗೊಳಿಸಲು ಒಂದು ಮಾಧ್ಯಮ ಬೇಕಾಗಿತ್ತು. ಅದಕ್ಕಾಗಿಯೇ "ಸ್ವಧರ್ಮ" "ಜಯಕರ್ನಾಟಕ" ಪತ್ರಿಕೆಗಳನ್ನು ತೆಗೆದುಕೊಂಡು ಕೆಲ ವರ್ಷ ನಡೆಸಿದರು. "ಜಯಕರ್ನಾಟಕ ಗ್ರಂಥಮಾಲೆ" ಹುಟ್ಟಿ ಗೆಳೆಯರ ಅದೆಷ್ಟೋ ಗ್ರಂಥಗಳು ಹೊರಕ್ಕೆ ಬಂದವು. ನಾಡಹಬ್ಬವನ್ನು ಪ್ರಾರಂಭಿಸಿ ಗೆಳೆಯರ ಗುಂಪು 'ಒಂದೇ ಒಂದೇ ಕರ್ನಾಟಕ ವಂದೇ' ಎಂಬ ಭಾವನೆ ಬೆಳೆಯಲು ದಾರಿಮಾಡಿಕೊಟ್ಟಿತು.

ಆದರೆ ಯಾವ ದೈವದ ಶಾಪವೋ ಗುಂಪು ಆಕಸ್ಮಿಕವಾಗಿ ಒಡೆಯಿತು. ಅನಿವಾರ್ಯವಾಗಿ 'ಗುಂಪಿಗೆ ಮಂಗಳವೆತ್ತಿದಾಗ' ಗೆಳೆಯರ ಮನಸ್ಸಿನಲ್ಲಿ ಉಳಿದದ್ದು ಶೂನ್ಯತೆಯೊಂದೇ. ಪ್ರಾರಂಭಿಕ ಸ್ಫೂರ್ತಿಪ್ರೇರಣೆಗಳಷ್ಟೇ ತನ್ನ ಕರ್ತವ್ಯವೆಂದು ತಿಳಿದೋ ಏನೋ ಗುಂಪು ಕರಗಿಹೋಯಿತು. ಸತ್ಯದರ್ಶನವನ್ನು ಮಾತ್ರ ಮಾಡಿ, ಕಂಡು ಮರೆಯಾಗುವ ಕನಸಿನಂತೆ ಗುಂಪು ತನ್ನ ಕ್ಷಣಿಕ ಆದರೂ ಪರಿಣಾಮದಲ್ಲಿ ದೀರ್ಘ ಜೀವನವನ್ನು ಮುಗಿಸಿತು.

ಆದರೆ ಎಲ್ಲಿಯೋ ಈ ಒಣಗಿದ ವೃಕ್ಷದ ರೆಂಬೆಯೊಂದು ಚಿಗುರುತ್ತಿತ್ತು. ಗುಂಪಿನ ಆದರ್ಶ ಸಾಧನೆಗಳು ಮುಂದುವರಿಯಬೇಕಾಗಿತ್ತು. ಅದರ ಫಲವೇ

ಈ ಮನೋಹರ ಗ್ರಂಥಮಾಲೆಯ ಸ್ಥಾಪನೆ.

ಮನೋಹರ ಗ್ರಂಥಮಾಲೆಯು ಆಗಸ್ಟ್ ೧೫, ೧೯೩೩ರಲ್ಲಿ ಜನ್ಮ ತಾಳಿತು. ಗೆಳೆಯರ ಗುಂಪಿನವರಾದ ಶ್ರೀ. ಶಂ. ಬಾ. ಜೋಶಿಯವರೇ ಇದಕ್ಕೆ ಪ್ರೇರಕರು. ಶ್ರೀ. ರಾಯದುರ್ಗ, ಶ್ರೀ. ಬೆಟಗೇರಿ ಕೃಷ್ಣಶರ್ಮ, ಶ್ರೀ. ಜಿ. ವಿ. ಚುಳಕಿ, ಶ್ರೀ. ಪ್ರಲ್ಹಾದ ನರೇಗಲ್ ಇವರು ಇದರ ಹೊಣೆ ಹೊತ್ತು ಪ್ರಾರಂಭದಲ್ಲಿ ಕೆಲಸ ಮಾಡಿದರು. ಮುರಿದು ಹೋದ ಗುಂಪನ್ನು ಬೇರೊಂದು ರೀತಿಯಲ್ಲಿ ಮತ್ತೆ ನಿರ್ಮಿಸುವದೇ ಗ್ರಂಥಮಾಲೆಯ ಉದ್ದೇಶವಾಗಿತ್ತು. ಅದೂ ಅಲ್ಲದೆ ಅಖಿಲ ಕರ್ನಾಟಕದ ಸಾಹಿತಿಗಳಿಗಾಗಿ ಒಂದು ಸಾಮಾನ್ಯವಾದ ವಿಶ್ರಾಮಸ್ಥಾನವನ್ನು ಕಲ್ಪಿಸಬೇಕಾಗಿತ್ತು. ಅಂದಿನಿಂದ ಇಂದಿನವರೆಗೆ ಇಪ್ಪತ್ತೈದು ವರ್ಷಗಳಲ್ಲಿ ಗ್ರಂಥ ಮಾಲೆ ನೂರೈವತ್ತಕ್ಕೂ ಮಿಕ್ಕಿ ಪುಸ್ತಕಗಳನ್ನು ಪ್ರಕಟಿಸಿ ಲಲಿತ ಸಾಹಿತ್ಯವನ್ನು ಲೋಕಪ್ರಿಯವಾಗಿಸಲು ಪ್ರಯತ್ನಿಸಿದೆ. ಗೆಳೆಯರ ಗುಂಪಿನ ಕನಸುಗಳನ್ನು ಪ್ರತ್ಯಕ್ಷವಾಗಿಸಲು ಗ್ರಂಥಮಾಲೆ ಅವ್ಯಾಹತವಾಗಿ ಪರಿಶ್ರಮ ಪಡುತ್ತಲಿದೆ.

ಕಾದಂಬರಿ, ಸಣ್ಣಕತೆ, ನಾಟಕ, ಹರಟೆ, ದಿನಚರಿ, ಜೀವನಚರಿತ್ರ, ಪ್ರವಾಸಸಾಹಿತ್ಯ ಮೊದಲಾದ ಸರಸಸಾಹಿತ್ಯವನ್ನೂ ಕಾವ್ಯ, ವಿಮರ್ಶೆ, ವೇದಾಂತ ಮೊದಲಾದ ವಿಚಾರಸಾಹಿತ್ಯವನ್ನೂ ಈ ಗ್ರಂಥಮಾಲೆಯು ಈ ವರೆಗೆ ಪ್ರಕಟಿಸುತ್ತ ಬಂದಿದೆ.

ಗೆಳೆಯರ ಗುಂಪಿನವರಾದ ಶ್ರೀ. ದ. ರಾ. ಬೇಂದ್ರೆ, ಶ್ರೀ. ವಿ. ಕೃ. ಗೋಕಾಕ, ಶ್ರೀ. ರಂ. ಶ್ರೀ. ಮುಗಳಿ ಇವರು ಗ್ರಂಥಮಾಲೆಯ ಪ್ರಾರಂಭ ದಿಂದಲೂ ಈ ಗ್ರಂಥಮಾಲೆಗೆ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗ ದರ್ಶನ ಮಾಡುತ್ತ ಬಂದಿದ್ದಾರೆ.

ಸರ್ವಶ್ರೀ. ದ. ರಾ. ಬೇಂದ್ರೆ, ರಂಗನಾಥ ದಿವಾಕರ, ನಾರಾಯಣರಾವ ಹುಯಿಲಗೋಳ, ಶಂ.ಬಾ. ಜೋಶಿ, ದಿವಂಗತ ಕೆರೂರ ವಾಸುದೇವಾಚಾರ್ಯ, ಶ್ರೀರಂಗ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ, ಆನಂದಕಂದ, ಮಧುರ ಚೆನ್ನ, ಕೃಷ್ಣಕುಮಾರ, ಜಲಧರ, ಜಡಭರತ, ವರಗಿರಿ, ಹೇಮಂತ, ಮಿರ್ಜಿ ಅಣ್ಣಾರಾಯ, ಎನ್ಕೆ. ಕುಲಕರ್ಣಿ, ವ್ಹಿ. ಎಂ. ಇನಾಮದಾರ, ಗು. ಭೀ. ಜೋಶಿ, ವಿ. ಜಿ. ಕುಲಕರ್ಣಿ, ಹ. ಪಿ. ಜೋಶಿ, ಟೇಂಗ್ಸೆ, ಟಿ. ರೂಬೆನ್, ಎಸ್. ಜಿ. ಕುಲಕರ್ಣಿ, ಲ. ಜಿ. ಬೇಂದ್ರೆ, ಬಾ. ಕೃ. ಲಕ್ಷ್ಮೇಶ್ವರ, ಡಿ. ಎಚ್. ಕೊಪ್ಪರ,

ಕೀರ್ತಿನಾಥ ಕುರ್ತಕೋಟಿ, ಎಸ್. ಆರ್. ಪೊಕಾಶಿ, ರಾಮಚಂದ್ರ ಕೊಟ್ಟಲಿಗಿ, ದ. ಬಾ. ಕುಲಕರ್ಣಿ, ರಾವಬಹಾದ್ದೂರ;

ಸರ್ವಶ್ರೀ. ಶ್ರೀನಿವಾಸ, ವಿ. ಸೀ, ಕೆ. ವ್ಹಿ. ಅಯ್ಯರ್, ದೇವುಡು, ಸಿ.ಕೆ. ವೆಂಕಟರಾಮಯ್ಯ, ತೀ. ನಂ. ಶ್ರೀಕಂಠಯ್ಯ, ಎ. ಎನ್. ಮೂರ್ತಿರಾವ್, ಕೆ. ಸಂಪದ್ಗಿರಿರಾವ್, ಪು. ತಿ. ನರಸಿಂಹಾಚಾರ್ಯ, ಗೊರೂರ ರಾಮಸ್ವಾಮಿ, ಜಿ.ಪಿ. ರಾಜರತ್ನಂ, ಕೆ. ಗೋಪಾಲಕೃಷ್ಣ, ಹೊಯಿಸಳ, ಅ. ನ. ಕೃಷ್ಣರಾಯ, ನಾ. ಕಸ್ತೂರಿ, ಎಂ. ವಿ. ಸೀ, ಅಶ್ವತ್ಥ, ರಾ. ಶಿ, ಅಶ್ವತ್ಥನಾರಾಯಣ, ದೊರೆಸ್ವಾಮಿ ಅಯ್ಯಂಗಾರ, ಆರ್. ವ್ಯಾಸರಾಯ, ಎಂ. ಜಿ. ವೆಂಕಟೇಶಯ್ಯ, ಜಿ. ಸದಾಶಿವಯ್ಯ;

ಶ್ರೀಮತಿ ಬಿ. ವಿ. ಚಂಪಕಮಾಲಾ, ಕಾತ್ಯಾಯಿನಿ, ಎಂ. ಸೀತಾರತ್ನ, ಲಲಿತಾ ರಾಮಣ್ಣ, ಕೆ. ವಿ. ರತ್ನಮ್ಮ, ಪ. ಸೀತಾದೇವಿ;

ಸರ್ವಶ್ರೀ. ಕಡೆಂಗೊಡ್ಲು ಶಂಕರಭಟ್ಟ, ಕೋ. ಶಿ. ಕಾರಂತ, ಪ. ರಮಾನಂದ, ತಲ್ಚೇರಿಕರ ರಂಗರಾವ್,

ಉತ್ತರ ಕರ್ನಾಟಕ, ಮೈಸೂರು, ಮಂಗಳೂರು ಹೀಗೆ ನಾಡಿನ ನಾಲ್ಕೂ ದಿಕ್ಕಿನ ಲೇಖಕರು ಗ್ರಂಥಮಾಲೆಗೆ ಗ್ರಂಥಗಳನ್ನು ಕೊಟ್ಟು, ಮಾಲೆಯ ಬೆಳವಣಿಗೆಗೆ ಪ್ರಾಣವಾಗಿದ್ದಾರೆ. ಅಖಿಲ ಕರ್ನಾಟಕದ ರಸಿಕ ವಾಚಕರು ಚಂದಾದಾರರಾಗಿ ಗ್ರಂಥಮಾಲೆಗೆ ತ್ರಾಣವನ್ನು ನೀಡಿದ್ದಾರೆ. ಗುಂಪು ನೀಡಿದ ಬೆಳಕು, ಸ್ಫೂರ್ತಿ, ಲೇಖಕ ವಾಚಕರ ಸಹಾಯ ಸಹಕಾರಗಳು ಇವುಗಳ ಅಭಯವಿದ್ದುದರಿಂದಲೇ ಸಾವಿರಾರು ತೊಡಕು ತೊಂದರೆಗಳಲ್ಲಿಯೂ ಗ್ರಂಥಮಾಲೆ ಧೈರ್ಯದಿಂದ ಅಡಿಯಿಟ್ಟಿದೆ. ಮಾಲೆಯ ಸೋಲು ಗೆಲುವುಗಳು ಅದರ ನಿಯಮಿತತೆ ಅನಿಯಮಿತತೆಗಳಲ್ಲಿಯೇ ವ್ಯಕ್ತವಾಗಿವೆ.

ಆದರೆ ಗ್ರಂಥಮಾಲೆ ಇನ್ನೂ ವರೆಗೆ ತನ್ನ ಆದರ್ಶದಿಂದ ದೂರ ಸರಿದಿಲ್ಲ. ಇಲ್ಲಿಯವರೆಗೆ ಪ್ರಕಟವಾದ ಗ್ರಂಥಗಳೆಲ್ಲ ವಾಚಕರಿಗೆ ಮೆಚ್ಚಿಗೆಯಾಗಿವೆ; ವಿಮರ್ಶಕರಿಂದ ಮನ್ನಣೆ ಪಡೆದಿವೆ. ಮಾಲೆಯ ಹೊಸ ಪ್ರಯೋಗಗಳನ್ನು ನಾಡಿನ ಜನರು ಕುತೂಹಲದಿಂದ ನಿರೀಕ್ಷಿಸುತ್ತ ಬಂದಿದ್ದಾರೆ.

'ಸುದರ್ಶನ", 'ಸಮರಸವೇ ಜೀವನ', 'ನಿಸರ್ಗ', 'ಮರಳಿ ಮಣ್ಣಿಗೆ', 'ನಟಸಾರ್ವಭೌಮ' 'ರಾಜಯೋಗಿ', 'ಶಾಂತಲಾ', 'ಔರಂಗಜೇಬ' ಮೊದ

ಲಾವ ಲೋಕಪ್ರಿಯ ಕಾದಂಬರಿಗಳು, 'ನವಿಲುಗರಿ', 'ಸೋಲೋ ಗೆಲುವೋ', 'ಪುಷ್ಪಮಾಲೆ' ಮೊದಲಾದ ಕಥಾಸಂಗ್ರಹಗಳು, 'ಜನನಾಯಕ', 'ಪತಿತೋ-ದ್ಧಾರ', 'ಹೊಸ ಸಂಸಾರ' ಮೊದಲಾದ ನಾಟಕಗಳು, ಇದಲ್ಲದೆ ಆತ್ಮಚರಿತ್ರೆ, ಏಕಾಂಕ, ಗೀತನಾಟಕ ಮೊದಲಾದ ಉಳಿದ ಸಾಹಿತ್ಯಪ್ರಕಾರಗಳು ಗ್ರಂಥ ಮಾಲೆಯ ಸರ್ವತೋಮುಖವಾದ ಬೆಳವಣಿಗೆಗೆ ಸಾಕ್ಷಿಯಾಗಿವೆ, ಹೊಸಗನ್ನಡ ಇತಿಹಾಸವನ್ನು ರೂಪಿಸುತ್ತಲಿವೆ.

ಗ್ರಂಥಮಾಲೆಯ ಕನಸಿನ ಯೋಜನೆ ಇಲ್ಲಿಗೆ ಮುಗಿದಿಲ್ಲ, ಮುಗಿಯುವದೂ ಇಲ್ಲ. ವಿಮರ್ಶೆ, ಕಾವ್ಯ, ಶಾಸ್ತ್ರಗಂಥಗಳು, ಸಾಹಿತ್ಯದ ಇತಿಹಾಸ, ಪ್ರಾಚೀನ ಮಾರ್ಗಸಾಹಿತ್ಯ ಇವೆಲ್ಲವನ್ನೂ ಪ್ರಕಟಗೊಳಿಸುವ ಸಾಹಸ ಮಾಲೆಯ ಕಣ್ಣೆದುರು ಕುಣಿಯುತ್ತಿದೆ. ಅದನ್ನು ಸಫಲಗೊಳಿಸುವ ಹೊಣೆ ಲೇಖಕರದು, ವಾಚಕರದು. ಅವರೇ ಗ್ರಂಥಮಾಲೆಯ ಪ್ರತ್ಯಕ್ಷ ಅಪ್ರತ್ಯಕ್ಷ ಶಿಲ್ಪಿಗಳು; ಸಂಪಾದಕರು ನಿಮಿತ್ತ ಮಾತ್ರ, ಕಂಬವನ್ನು ಹೊತ್ತ ಕಲ್ಲುಗೊಂಬೆ; ಮಾಲೆಯ ಅಂತರಂಗದ ಆಸೆ ಗಳನ್ನು ತಿಳಿಯಪಡಿಸುವ ನಾಲಗೆ ಮಾತ್ರ. ಗ್ರಂಥಮಾಲೆ ನಾಡಿನ ಜೀವನಕ್ಕೇ ಸೇರಿದ್ದು, ನಾಡೇ ಇದನ್ನು ಎತ್ತಿಕೊಳ್ಳಬೇಕು.

ಗ್ರಂಥಮಾಲೆ ತನ್ನ ಹಿತೈಷಿಗಳನ್ನು ಸಹಾಯ ನೀಡುವದಕ್ಕಾಗಿ ಕೈಮಾಡಿ ಕರೆಯುತ್ತಿದೆ. ಅದರಲ್ಲಿ ಆರ್ಥಿಕಸಹಾಯ ಒಂದು ಪಾಲಾದರೆ, ಹಾರ್ದಿಕ ಸಹಾಯ ಹತ್ತು ಪಾಲಾಗಿದೆ. ಗ್ರಂಥಮಾಲೆ ಬದುಕಬೇಕು, ಉತ್ಕರ್ಷಗೊಳ್ಳ ಬೇಕು; ಅಂದು ನಟ್ಟ ಜೀವನದ ಸಸಿ ಮತ್ತೆ ಒಣಗುವಂತಾಗಬಾರದು. ಕನ್ನಡ ನಾಡಿನ ಸಂಸ್ಕೃತಿಯ ಜೀವನವಾಹಿನಿ ಬತ್ತಿಲ್ಲ,ಬತ್ತುವದೂ ಇಲ್ಲ, ಎಂಬ ನಿಶ್ಚಲ ವಾದ ವಿಶ್ವಾಸ ನಮಗಿರುವದರಿಂದಲೇ ಈಗ ಸಹಾಯವನ್ನು ಅಪೇಕ್ಷಿಸಿದ್ದೇವೆ. 'ಕೊಡುವ ಕೈ ಮೇಲೆಂಬುದು' ಕನ್ನಡದ ಅಳಿಯಲಾಗದ ಸಂಸ್ಕೃತಿ. ಅದನ್ನು ನೆನೆದೇ ಉದಾರ ಹೃದಯಿಗಳಿಗೆ ನಮ್ಮ ಕರೆ ಇದೆ.

**—ಸಂಪಾದಕ**

# ಗ್ರಂಥಮಾಲೆಯ ಈ ಮೂರು ವರ್ಷದ ಗ್ರಂಥಗಳು

[ ಗ್ರಂಥ-ಗ್ರಂಥಕರ್ತರ ಮುಖಪರಿಚಯ ಓದಿ ]

## ೨೨ನೆಯ ವರ್ಷ (೧೯೫೪-೧೯೫೫)

| | | | |
|---|---|---|---|
| ೧. | ಯಾತ್ರಿಕ (ಆಧ್ಯಾತ್ಮಿಕ) | ಶ್ರೀ. ಆರ್. ಆರ್. ದಿವಾಕರ | ೨-೦-೦ |
| ೨-೩. | ಗೃಹದೇವತೆ (ಕಾದಂಬರಿ) | ಶ್ರೀಮತಿ ಬಿ. ವ್ಹಿ. ಚಂಪಕಮಾಲಾ | ೪-೦-೦ |
| ೩. | ಬಾಗಿನ (ಕತೆಗಳು) | ಶ್ರೀಮತಿ ಲಲಿತಾ ರಾಮಣ್ಣ | ೧-೦-೦ |
| ೫. | ಝುೂೕಹರಾ (ಕಾದಂಬರಿ) | ಶ್ರೀ. ಡಿ. ಎಚ್. ಕೊಪ್ಪರ | ೧-೧೨-೦ |
| ೬. | ಸ್ವಪ್ನದರ್ಶಿ | ಶ್ರೀ. ಕೀರ್ತಿನಾಥ ಕುರ್ತಕೋಟಿ | ೧-೧೨-೦ |

## ೨೩ನೆಯ ವರ್ಷ (೧೯೫೫-೧೯೫೬)

| | | | |
|---|---|---|---|
| ೧-೨. | ಗಂಗವ್ವ ಮತ್ತು ಗಂಗಾಮಾಯಿ (ಕಾದಂಬರಿ) | ಶ್ರೀ. ಮೊಕಾಶಿ | ೩-೪-೦ |
| ೩. | ಆ ಮನಿ (ನಾಟಕ) | ಶ್ರೀ. ಕೀರ್ತಿನಾಥ ಕುರ್ತಕೋಟಿ | ೧-೦-೦ |
| ೪-೫. | ದೀಪಹತ್ತಿತು (ಕಾದಂಬರಿ) | ಶ್ರೀ. ರಾಮಚಂದ್ರ ಕೊಟ್ಟಲಗಿ | ೩-೪-೦ |
| ೬. | ನಾನಿಯ ಕಾದಂಬರಿ (ಕಾದಂಬರಿ) | ಶ್ರೀ. ಬಾಳಕೃಷ್ಣ | ೨-೮-೦ |

## ೨೪ನೆಯ ವರ್ಷ (೧೯೫೬-೧೯೫೭)

| | | | |
|---|---|---|---|
| ೧. | ಓೋ ! (ಕಾದಂಬರಿ) | ವಿವಿಧ ಲೇಖಕರು | (ಅಚ್ಚಿನಲ್ಲಿ) |
| ೨-೩-೪. | ದಾದಾ (ಕಾದಂಬರಿ) | ರಾವಬಹದ್ದೂರ | „ |
| ೫-೬. | ಮೂಕಬಲಿ | ಜಡಭರತ | „ |

## ೨೫ನೆಯ ವರ್ಷ (೧೯೫೭-೧೯೫೮)

<u>ನಡೆದು ಬಂದ ದಾರಿ :</u>

ಗ್ರಂಥಮಾಲೆಯ ಇಪ್ಪತ್ತೈದು ವರ್ಷಗಳ ನೆನಪಿಗೆಂದು ಹೊರಡುವ ಸಾವಿರ ಪುಟಗಳ ಒಂದೇ ಸಾಹಿತ್ಯಸಂಪುಟ.

ಪ್ರಕಟನೆ : ಆಗಸ್ಟ ೧೫, ೧೯೫೮ ಕ್ಕೆ

## ಹೊಸ ಬಿಡಿಮುತ್ತುಗಳು

| | | | |
|---|---|---|---|
| ೧. | ಸಮರಸವೇ ಜೀವನ (ಕಾದಂಬರಿ) | ವಿ. ಕೃ. ಗೋಕಾಕ | ೧೫-೦-೦ |
| ೨. | ಬಾಳದೇಗುಲದಲ್ಲಿ (ಕವನಗಳು) | ,, ,, | ೫-೦-೦ |
| ೩. | ಜೀವಫಲ (ಕವನಗಳು) | ಜಡಭರತ | ೧-೦-೦ |
| ೪. | ಸಾಹಿತ್ಯ ಮತ್ತು ಸಮಾಲೋಚನೆ | ಸದಾನಂದ ನಾಯಕ | ೬-೦-೦ |

# ಚಂದಾದಾರರಾಗುವಂಥವರ ಸೂಚನೆ

ಕೆಳಗೆ ಕಾಣಿಸಿದ ಮಹನೀಯರು ತಮ್ಮ ಗ್ರಂಥಮಾಲೆಗೆ ಚಂದಾದಾರರಾಗ ಬಹುದು. ತಾವು ಅವರಿಗೆ ನನ್ನ ಹೆಸರು ಕಾಣಿಸಿ ಬರೆಯಬಹುದು.

೧ ಹೆಸರು ..........................................
ವಿಳಾಸ ..........................................
..........................................

೨ ಹೆಸರು ..........................................
ವಿಳಾಸ ..........................................
..........................................

೩ ಹೆಸರು ..........................................
ವಿಳಾಸ ..........................................
..........................................

೪ ಹೆಸರು ..........................................
ವಿಳಾಸ ..........................................
..........................................

೫ ಹೆಸರು ..........................................
ವಿಳಾಸ ..........................................
..........................................

ದಿನಾಂಕ .................... ಸಹಿ ____________________

ಸಂಪಾದಕ : ಮನೋಹರ ಗ್ರಂಥಮಾಲಾ, ಧಾರವಾಡ

# ಗ್ರಂಥ-ಗ್ರಂಥಕರ್ತರ ಮುಖಪರಿಚಯ

* *

**ಯಾತ್ರಿಕ : ಶ್ರೀ. ರಂಗನಾಥ ದಿವಾಕರ**

ರಾಜಕಾರಣ, ತತ್ವಜ್ಞಾನ, ಸಾಹಿತ್ಯ ಈ ಮೂರೂ ರಂಗಗಳಲ್ಲಿ ಸಿದ್ಧಹಸ್ತರಾದ ಶ್ರೀ. ದಿವಾಕರ ರಂಗರಾಯರ ಹೆಸರು ಕನ್ನಡನಾಡಿನಲ್ಲಿಯೇ ಮನೆಮಾತಾಗಿದೆ. ಶ್ರೀಯುತರಿಗೆ ಸಾಹಿತ್ಯ ಕೇವಲ ಮನರಂಜನೆಯ ವಸ್ತುವಾಗಿರದೆ, ಜ್ಞಾನಸಾಧನೆಯಲ್ಲಿ ಬೆಳಕು ಬೀರುವ ದೀವಟಿಗೆಯಾಗಿದೆ. ಕನ್ನಡದಲ್ಲಿಯ ತತ್ವಜ್ಞಾನವನ್ನೊಳಗೊಂಡ ಸಾಹಿತ್ಯದ ದೊಡ್ಡ ಕೊರತೆಯನ್ನು ತುಂಬಲು ಇವರು ಬಹುವಾಗಿ ಶ್ರಮಿಸಿದ್ದಾರೆ.

'ಯಾತ್ರಿಕ' ಇವರ ಆಧ್ಯಾತ್ಮಿಕ ಆತ್ಮಚರಿತ್ರೆ ಎನ್ನಬಹುದು. ಅವರ ಜೀವನದ ಅನುಭವ, ಅವಲೋಕನ, ಹಾಗೂ ವಿಚಾರಗಳ ಸಾರಸಂಗ್ರಹ ಇಲ್ಲಿದೆ. ತತ್ವಜ್ಞಾನ ಇನ್ನೊಬ್ಬರಿಗೆ ಉಪದೇಶ ಮಾಡಲು ಕಲಿತ ವಿದ್ಯೆಯಲ್ಲ; ಸ್ವಂತ ಜೀವನದಲ್ಲಿಯ ಸತ್ಯಸಂಶೋಧನದ ತಿರುಳು ಎಂಬುದನ್ನು ಮನಗಾಣಿಸಲು ಈ ಗ್ರಂಥ ಬರೆದಂತಾಗಿದೆ. ಸರಳವಾದ, ಮನೋವೇಧಕವಾದ ಶೈಲಿಯಿಂದ ರಮಣೀಯವಾದ ಸಾಹಿತ್ಯಕೃತಿಯೂ ಆಗಿದೆ.

**ಗೃಹದೇವತೆ : ಶ್ರೀಮತಿ ಬಿ. ವ್ಹಿ. ಚಂಪಕಮಾಲಾ**

ಮೈಸೂರಿನ ಶ್ರೀಮತಿ ಚಂಪಕಮಾಲಾ ಅವರು ಎಲೆಯ ಮರೆಯ ಹೂವಿನಂತೆ, ಅಂತರಂಗದ ಕನಸಿನಂತೆ ಅಜ್ಞಾತಜೀವನದ ಪಾವನತೆಯನ್ನೇ ಆಶ್ರಯಿಸಿದ್ದಾರೆ. ಆದರೂ ಜೀವನವನ್ನು ನೋಡುವ ಅವರ ದೃಷ್ಟಿ ತೀಕ್ಷ್ಣವಾಗಿದೆ; ಸಾಮಾನ್ಯನಿಗೆ ಕಾಣದ ಜೀವನ ವಿವರಗಳು ಅವರ ದೃಷ್ಟಿಗೆ ಗೋಚರವಾಗುತ್ತವೆ.

'ಗೃಹದೇವತೆ' ಅವರ ಮೊದಲ ಕೃತಿಯಾದರೂ, ಅಂತಃಕರಣವನ್ನು ತುಂಬಿಸುವ ಕಾದಂಬರಿ. ಕತೆ ಹೇಳುವ ರೀತಿ ನೇರವಾಗಿದೆ, ಶೈಲಿ ಸರಳವಾಗಿದೆ. ಪಾತ್ರಸೃಷ್ಟಿ ನಿಜ ಜೀವನದಿಂದಲೇ ಎತ್ತಿಕೊಂಡಷ್ಟು ಸಹಜವಾಗಿದೆ. ವಾಸ್ತವಮಾರ್ಗದ ಕಾದಂಬರಿಗಳ ಇತಿಹಾಸದಲ್ಲಿಯೇ ಈ ಕಾದಂಬರಿಗೆ ಒಂದು ವಿಶಿಷ್ಟ ಸ್ಥಾನ ಮೀಸಲಾಗಿದೆ.

## ಬಾಗಿನ : ಶ್ರೀಮತಿ ಲಲಿತಾ ರಾಮಣ್ಣ

ಶ್ರೀಮತಿ ಲಲಿತಾ ರಾಮಣ್ಣ ಅವರು ಮುಂಬಯಿಯವರು. ಅಲ್ಲಿ ವೈವಿಧ್ಯ ಪೂರ್ಣವಾದ ಜೀವನದ ರೀತಿಯನ್ನು ಅವಲೋಕಿಸಿದಂತೆಯೇ, ಸ್ವಂತ ಬಾಳಿನಲ್ಲಿ ಪ್ರಾಪಂಚಿಕ ಸುಖದುಃಖಗಳನ್ನು ಆಳವಾಗಿ ಅನುಭವಿಸಿಯೂ ಇದ್ದಾರೆ. ಆದ್ದರಿಂದ ಸಹಜವಾಗಿಯೇ ಇವರ ದೃಷ್ಟಿ ವ್ಯಾಪಕವಾಗಿದೆ.

ಇಲ್ಲಿಯ ವರೆಗೆ ಪತ್ರಿಕೆಗಳ ಮುಖಾಂತರವಾಗಿ ಲೋಕಪ್ರಿಯತೆಯನ್ನು ಗಳಿಸಿದ ಕತೆಗಳು ಇಲ್ಲಿ ಪುಸ್ತಕರೂಪದಲ್ಲಿ ಸಂಗ್ರಹವಾಗಿವೆ. ನಿಜಜೀವನದ ಸಾಗರದಲ್ಲಿ ಆಯ್ದು ತೆಗೆದ ಆಣಿಮುತ್ತುಗಳಂತೆ ಈ ಕತೆಗಳೆಲ್ಲ ಮನೋಜ್ಞವಾಗಿವೆ. ಮೂರು ನಿಮಿಷಗಳಲ್ಲಿ ಓದಿ ಮುಗಿಸಬಹುದಾದ, ಆದರೆ ಜೀವನದುದ್ದಕ್ಕೂ ಮರೆಯಲಾರದ ರಮ್ಯಕೃತಿಗಳಿವು.

## ಶೋಕಹರಾ : ಶ್ರೀ ಡಿ. ಎಚ್. ಕೊಪ್ಪರ

ಇವರು ಮೂಲತಃ ಲಕ್ಷ್ಮೇಶ್ವರದವರು. ಮುಂಬಯಿ ವಿಶ್ವವಿದ್ಯಾಲಯದ ಎಂ. ಎ. ಪದವಿಯನ್ನು ಪಡೆದು, ಈಗ ಐತಿಹಾಸಿಕ ಸಂಶೋಧನ ಸಂಸ್ಥೆಯೊಂದರಲ್ಲಿ 'ಕ್ಯೂರೇಟರ' ಆಗಿ ಕೆಲಸ ಮಾಡುತ್ತಿದ್ದಾರೆ. ಶ್ರೀಯುತರು ಮೊದಲಿನಿಂದಲೂ ಸಾಹಿತ್ಯದ ಪ್ರಿಯ ಅಭ್ಯಾಸಿಗಳು.

ಮೇಡೋಸ್ ಟೇಲರರು ಬರೆದ (Noble queen) ಎಂಬ ಐತಿಹಾಸಿಕ ಕಾದಂಬರಿಯ ಅನುವಾದ ಇದು. ಅನುವಾದವಾದರೂ ಕನ್ನಡದಲ್ಲಿ ಪುನಃ ಸೃಷ್ಟಿಯನ್ನು ಪಡೆದು, ಸ್ವತಂತ್ರವಾದ ಓಜಸ್ಸನ್ನೂ ಕಾಂತಿಯನ್ನೂ ಪಡೆದಿದೆ. ಇತಿಹಾಸದ ಚೌಕಟ್ಟಿನಲ್ಲಿ ನಿರಂತರ ಪ್ರಣಯದ ಸುಕುಮಾರ ಚಿತ್ರವೊಂದು ಇಲ್ಲಿದೆ.

## ಸ್ವಪ್ನದರ್ಶಿ : ಶ್ರೀ. ಕೀರ್ತಿನಾಥ ಕುರ್ತಕೋಟಿ

ಇವರು ಗದುಗಿನ ತರುಣ ಸಾಹಿತಿಗಳು. ಈಗ ಧಾರವಾಡದಲ್ಲಿ ಎಂ. ಎ. ಓದುತ್ತಿದ್ದಾರೆ. ಇವರು ಕವಿಗಳು, ವಾಗ್ಮಿಗಳು, ನಾಟಕಕಾರರು. ಕನ್ನಡ, ಇಂಗ್ಲಿಶ್, ಸಂಸ್ಕೃತ, ಮರಾಠಿ ಈ ನಾಲ್ಕು ಭಾಷಾಸಾಹಿತ್ಯಗಳ ಸಮೀಪದ ಅಭ್ಯಾಸದಿಂದ ಹದಗೊಂಡ ಇವರ ಮನಸ್ಸು ಸಹಜವಾಗಿಯೇ ವಿಸ್ತಾರಗೊಂಡಿದೆ.

ಸ್ವಪ್ನದರ್ಶಿ ಇದು ಗೀತನಾಟಕಗಳ ಸಂಗ್ರಹ. ನಾಟಕದ ಕ್ಷೇತ್ರದಲ್ಲಿ ಒಂದು ಹೊಸ ಪ್ರಯೋಗ. ಕಾವ್ಯಪ್ರತಿಭೆಯ ವಿವಿಧ ವಿಲಾಸಗಳನ್ನೊಳಗೊಂಡ ಈ ಬರವಣಿಗೆಯಲ್ಲಿ ಮಾರ್ಗಸಾಹಿತ್ಯದ ಗೌರವದೊಡನೆ, ಹೊಸ ಸಾಹಿತ್ಯದ ಬೆಡಗೂ ಇದೆ. ಇಲ್ಲಿಯ ಎಲ್ಲ ನಾಟಕಗಳಲ್ಲಿಯೂ ಒಂದು ಅಲೌಕಿಕವಾದ ಹೃದಯವೇಧಕತೆಯನ್ನು, ರಮಣೀಯತೆಯನ್ನು ಕಾಣಬಹುದು.

**ಗಂಗವ್ವ ಮತ್ತು ಗಂಗಾಮಾಯಿ :** ಶ್ರೀ. ಶಂ. ರಾ. ಮೊಕಾಶಿ

ಈಗ ಮುಂಬಯಿಯಲ್ಲಿ ಇಂಗ್ಲಿಶ್ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿರುವ ಶ್ರೀ. ಮೊಕಾಶಿಯವರ ಸಾಹಿತ್ಯದ ಉತ್ಸಾಹ ಹತ್ತು ಕಡೆಗೆ ಮುಖ ಮಾಡಿದೆ. ಕಾವ್ಯ, ನಾಟಕ, ಸಣ್ಣಕತೆ, ಕಾದಂಬರಿ ಈ ಎಲ್ಲ ಕ್ಷೇತ್ರಗಳಲ್ಲೂ ಅವರು ಯಶಸ್ಸು ಪಡೆದಿದ್ದಾರೆ. ಇವರು ಉತ್ಕೃಷ್ಟ ಕೃತಿಕಾರರಿರುವಂತೆಯೇ, ಸೂಕ್ಷ್ಮಪ್ರತಿಭೆಯ ವಿಮರ್ಶಕರೂ ಹೌದು. ಅಂತೆಯೇ ಇವರ ಎಲ್ಲ ಕೃತಿಗಳೂ ಸಾಹಿತ್ಯದ ಮೂಲಭೂತ ತತ್ವಗಳ ಭದ್ರವಾದ ತಳಹದಿಯ ಮೇಲೆ ನಿಂತಿರುತ್ತವೆ.

ಈ ಕಾದಂಬರಿ ವಾಸ್ತವಮಾರ್ಗದ ಕೃತಿರಚನೆಗೆ ಶ್ರೇಷ್ಠ ಮಾದರಿಯಾಗಿದೆ. ಜಗತ್ತಿನಲ್ಲಿಯ ಕೆಲ ವ್ಯಕ್ತಿಗಳು ತಮ್ಮ ಸಮಸ್ಯೆಗಳನ್ನು ಬಿಡಿಸಲೆಂದೋ, ಅಥವಾ ತಮ್ಮ ದೈವಪರೀಕ್ಷೆಗಾಗಿಯೋ, ಇಲ್ಲಿಯ ಕಥಾಪ್ರಪಂಚದಲ್ಲಿ ಬಂದು ಸೇರಿಕೊಂಡಂತೆ ಇಲ್ಲಿಯ ಪಾತ್ರಸೃಷ್ಟಿ ಸಹಜವಾಗಿದೆ. ಕಾದಂಬರಿಕಾರ ತಾನೂ ಒಂದು ಅದೃಶ್ಯ ಪಾತ್ರವಾಗಿ, ತನ್ನ ಜೀವನವಿಮರ್ಶೆಯ ಬೆಳಕನ್ನು ಪ್ರತಿಯೊಂದು ಸನ್ನಿವೇಶದ ಮೇಲೆಯೂ ಬೀರುತ್ತಾನೆ. ಸಾಹಿತ್ಯದಲ್ಲಿಯ ವಾಸ್ತವಿಕತೆಯ ಇತಿಹಾಸದಲ್ಲಿಯೇ ಈ ಕಾದಂಬರಿ ಒಂದು ಅಪೂರ್ವ ಪ್ರಯೋಗವಾಗಿದೆ.

**ಆ ಮನಿ :** ಕೀರ್ತಿನಾಥ ಕುರ್ತಕೋಟಿ

ಕೀರ್ತಿನಾಥರ ಇನ್ನೊಂದು ಕೃತಿ, ಗದ್ಯನಾಟಕ. ಇಲ್ಲಿಯ ಪಾತ್ರಗಳೆಲ್ಲ ಚಿಕ್ಕ ಮಕ್ಕಳು; ಆದರೆ ಮಾನವಜೀವನದ ನಿರಂತರವಾದ ಚಿತ್ರವೇ ಇಲ್ಲಿದೆ. ಜೀವಂತವಾದ ಸಂಭಾಷಣೆ, ಮೋಹಕವಾದ ಪಾತ್ರರಚನೆ, ವಾತಾವರಣದ ಕಲ್ಪಕತೆ, ಮತ್ತು ಜೀವನದ ಅಗಮ್ಯತೆಯ ದರ್ಶನ ಇವು ಈ ನಾಟಕದ ವೈಶಿಷ್ಟ್ಯಗಳಾಗಿವೆ. ಒಂದು ಭಾವಗೀತದ ರಮ್ಯವಾದ ಮೂಲಕಲ್ಪನೆಯೇ ಹೃದಯವೇಧಕವಾದ ನಾಟಕವಾದಂತೆ ಇಲ್ಲಿಯ ಕೃತಿರಚನೆ ಹೃದ್ಯವಾಗಿದೆ.

## ದೀಪ ಹತ್ತಿತು : ರಾಮಚಂದ್ರ ಕೊಟ್ಟಲಗಿ

ಇವರು ಹುಟ್ಟಿ ಬೆಳೆದದ್ದು ವಿಜಾಪುರದಲ್ಲಿ. ಅಂತೆಯೇ ಬಯಲು ಸೀಮೆಯ ಕೆಚ್ಚು, ಸರಸಗಳು ಇವರ ಬರವಣಿಗೆಯಲ್ಲಿ ಕಾಣಸಿಗುತ್ತವೆ. 'ಪಿಪಾಸೆ', 'ಗೀಚುಗೆರೆ', 'ದೀಪನಿರ್ವಾಣ'ದಂಥ ಲೋಕಪ್ರಿಯವಾದ, ತಿರುಳುಳ್ಳ. ಕೃತಿಗಳನ್ನು ಈ ಮೊದಲೇ ದಾನ ಮಾಡಿದ ಇವರ ಪ್ರತಿಭೆ ಇನ್ನೊಂದು ಕಾದಂಬರಿಯನ್ನೂ ಕೊಟ್ಟಿದೆ.

'ದೀಪಹತ್ತಿತು' ಇವರ ಎರಡನೆಯ ಕಾದಂಬರಿ. ಕತೆಯ ಓಟಕ್ಕಿಂತ, ಜೀವನದ ಯಥಾರ್ಥ ವರ್ಣನೆಯ ಕಡೆಗೇ ಲೇಖಕರ ಗಮನ ಹೆಚ್ಚು. ಜೀವಂತವಾದ ವಾತಾವರಣಸೃಷ್ಟಿ, ಭಾವಪೂರ್ಣವಾದ ಪಾತ್ರಸೃಷ್ಟಿ, ಹಾಗೂ ಕಾವ್ಯಪೂರ್ಣವಾದ ಭಾಷಾಶೈಲಿ ಇವೇ ಈ ಕಾದಂಬರಿಯ ಕೆಲ ವೈಶಿಷ್ಟ್ಯಗಳಾಗಿವೆ.

## ನಾನಿಯ ಕಾದಂಬರಿ : ಬಾಳಕೃಷ್ಣ

ಇವರು ಬಾಗಿಲುಕೋಟೆಯಲ್ಲಿ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಸಾಹಿತ್ಯ ಸಂಗೀತಗೆಳೆರಡರ ಆಳವಾದ ಅಭ್ಯಾಸದಿಂದ ಬಂದ ರಸಿಕತೆ ಇವರ ಪಾಲಿನ ಅಮೌಲ್ಯವಾದ ಸೊತ್ತಾಗಿದೆ. ಶ್ರೀಯುತರು ಯಾವಾಗಲೂ ಹೊಸ ಪ್ರಯೋಗಗಳ ಹಂಬಲವಿದ್ದವರು.

'ನಾನಿಯ ಕಾದಂಬರಿ' ಕನ್ನಡ ಕಾದಂಬರೀ ಪ್ರಪಂಚದಲ್ಲಿಯೇ ಒಂದು ಹೊಸ ಪ್ರಯೋಗ. ಕೃತಿಯೊಂದಿಗೆ, ಕೃತಿನಿರ್ಮಾಣದ ಚಿತ್ರವೂ ಇಲ್ಲಿದೆ. ಬರೆಯುವಾಗಿನ ತನ್ನ ಅನುಭವಗಳನ್ನು ಕಾದಂಬರಿಕಾರ ಮುಚ್ಚು-ಮರೆಯಿಲ್ಲದೆ ಹೇಳಿದಂತೆ ಇಲ್ಲಿಯ ಕೃತಿರಚನೆಯಿದೆ. ಮುದ್ದಣ-ಮನೋರಮೆಯರ ನಡುವೆ 'ರಾಮಾಶ್ವಮೇಧ'ವಿದ್ದಂತೆ, ಲೇಖಕ-ವಿಮರ್ಶಕರ ನಡುವೆ ಒಂದು ಹೃದಯಂಗಮವಾದ ಕಾದಂಬರಿಯಿದೆ.

## ಖೋ : (ಪ್ರಾಯೋಗಿಕ ಕಾದಂಬರಿ) ವಿವಿಧ ಲೇಖಕರು

ಹೆಸರೇ ಸೂಚಿಸುವಂತೆ ಇದು ಒಂದು ಸಾಹಿತ್ಯದ ಆಟ. ವಿವಿಧ ಲೇಖಕರು ಒಂದು ಕಾದಂಬರಿಯ ಬೇರೆಬೇರೆ ಪ್ರಕರಣಗಳನ್ನು ಬರೆದ ನವೀನ ಮಾದರಿಯ ಒಂದು ಕಾದಂಬರಿ. ಹತ್ತು ದೃಷ್ಟಿ, ಹತ್ತು ಅಭಿಪ್ರಾಯಗಳು

ಕೂಡಿಯೂ ಒಂದಕ್ಕೊಂದು ವಿರೋಧ ಬರದಂತೆ ಬರೆಯುವದು ಸಾಧ್ಯವಿದೆ ಯೆಂಬುದರ ಪ್ರತ್ಯಕ್ಷ ಪ್ರಯೋಗ ಇಲ್ಲಿದೆ. 'ನೂರು ಮರ ನೂರು ಸ್ವರ' ಆದರೇನು? 'ಒಂದೊಂದೂ ಅತಿ ಮಧುರ'. ಹತ್ತು ಮುಖಗಳಿಂದ ಸ್ವರ ಹೊರಟರೂ ಅವ್ಯಕ್ತವಾದ ಲಯದ ನಿಯಮಕ್ಕೆ ಹೊಂದಿಕೊಂಡು ಸಾಗುವ ಮೇಳಗೀತದಂತೆ ಈ ಕಾದಂಬರಿಯ ಕತೆ, ಕ್ಷಣಕ್ಷಣಕ್ಕೂ ಹೊಸದಾಗಿ ಸಾಗಿದೆ.

## ದಾದಾ : ರಾವಬಹಾದ್ದೂರ

ಪತ್ರಿಕೆಗಳಲ್ಲಿ ಕತೆ, ನಗೆಬರೆಹಗಳ ಮೂಲಕ ಪರಿಚಿತರಾದ ರಾವಬಹಾದ್ದೂರರು ಈಗ ಕಾದಂಬರಿಕಾರರಾಗಿದ್ದಾರೆ. ಹುಬ್ಬಳ್ಳಿಯ 'ಸಂಯುಕ್ತಕರ್ನಾಟಕ' ದಲ್ಲಿ ಉಪಸಂಪಾದಕರಾಗಿ ಕೆಲಸ ಮಾಡುತ್ತಿದ್ದಾರೆ. ಅಂತೆಲೇ ದಿನನಿತ್ಯದ ಬದುಕಿನ ಸಾವಿರ ತೊಡಕು ತೊಂದರೆಗಳು, ಮೋಜಿನ ಸನ್ನಿವೇಶಗಳು ಇವರಿಗೆ ಅಗ್ರಲೇಖದ ಕಾಲಮ್ಮಿನಷ್ಟು ಸುಪರಿಚಿತವಾಗಿವೆ.

'ದಾದಾ' ಸುಮಾರು ಐನೂರು ಪುಟಗಳ ಶುದ್ಧಸಾಮಾಜಿಕ ಕಾದಂಬರಿ. ಕನ್ನಡ ಕಾದಂಬರಿ ಇಲ್ಲಿಯ ವರೆಗೆ ಕೇವಲ ಕೌಟುಂಬಿಕ ಜೀವನದ ಚಿತ್ರಗಳನ್ನು ರೂಪಿಸುವದರಲ್ಲಿಯೇ ತೃಪ್ತವಾಗಿದೆ. ಆದರೆ ಸಮಾಜದ ಆವರಣದಲ್ಲಿ ಬದುಕುವ ಮನುಷ್ಯನ ನಡೆವಳಿಕೆಯ ಚಿತ್ರ ಬರಬೇಕಾದಷ್ಟು ಬಂದಿಲ್ಲ. ಆ ದೃಷ್ಟಿಯಿಂದ ಈ ಕಾದಂಬರಿ ಗಮನಾರ್ಹವಾಗಿದೆ. ವಿಸ್ತಾರದಲ್ಲಿಯೂ, ಆಳದಲ್ಲಿಯೂ ಸೂಕ್ಷ್ಮ ಜೀವನದಲ್ಲಿಯೂ 'Moby Dick', 'Growth of Soil' ಮೊದಲಾದ ಮಹಾಕೃತಿಗಳ ನೆನಪನ್ನು ತಂದುಕೊಡುವ ಅಪೂರ್ವ ಕೃತಿ.

## ಮೂಕಬಲಿ : ಜಡಭರತ

ಜಡಭರತರ ಅಜ್ಞಾತಜೀವನ ಅವರ ಕೃತಿಗಳಲ್ಲಿ ಬಿಟ್ಟು ಮತ್ತೆಲ್ಲಿಯೂ ಯಾರಿಗೂ ತಿಳಿಯದಂತಿದೆ. 'ಧರ್ಮಸೆರೆ' 'ಜಡಭರತನ ಕನಸುಗಳು' ಅವರ ಹೆಸರನ್ನು ಈ ಮೊದಲೇ ಸುಪರಿಚಿತವಾಗಿಸಿವೆ.

ಸದ್ಯದ 'ಮೂಕಬಲಿ' ಕರಳು ಕರಗಿಸುವ ಕಾದಂಬರಿ. ಕಾವ್ಯದ ಲಯವನ್ನು ಪಡೆಯುವ ಅವರ ಗದ್ಯದ ಶೈಲಿ ಮನೋವೇಧಕವಾಗಿದೆ, ಸುಗಮ್ಯವಾಗಿದೆ.

## ನಡೆದು ಬಂದ ದಾರಿ : ವಿವಿಧ ಲೇಖಕರು

ಮನೋಹರ ಗ್ರಂಥಮಾಲೆಯ ಬೆಳ್ಳಿಯ ಹಬ್ಬದ ಸಾಹಿತ್ಯಸಂಪುಟ ಡೆಮಿ ಆಕಾರದಲ್ಲಿ ಸಾವಿರ ಪುಟದ್ದು.

೧೯೩೩ರಲ್ಲಿ ಜನ್ಮ ತಾಳಿ ಇಂದಿನ ತನಕ, ಮನೋಹರ ಗ್ರಂಥಮಾಲೆ ಒಂದು ಕಾಲು ಶತಮಾನದ ಅವಧಿಯಲ್ಲಿ ನಿರಂತರವಾಗಿ ಸೇವೆಯನ್ನು ಸಲ್ಲಿಸುತ್ತಲಿದೆ. ಈ ವರೆಗೆ ಸುಮಾರು ೧೫೦ ಪುಸ್ತಕಗಳು ಪ್ರಕಟವಾಗಿವೆ. ಶ್ರೀಯುತರಾದ ಬೇಂದ್ರೆ, ಗೋಕಾಕ, ಮುಗಳಿ, ಮಧುರಚೆನ್ನ, ವಿ. ಸೀ. ಶ್ರೀರಂಗ, ಕಾರಂತ, ದೇವುಡು, ಅನಕೃ, ಶ್ರೀನಿವಾಸ, ಆನಂದಕಂದ ಮೊದಲಾದ ಇನ್ನೂ ಅನೇಕ ಸುಪ್ರಸಿದ್ಧ ಲೇಖಕರು ಮಾಲೆಯ ಸಮೀಪದ ಬಳಗದವರಾಗಿದ್ದಾರೆ. ಇತ್ತೀಚೆಗೆ ಕೀರ್ತಿನಾಥ, ಮೊಕಾಶಿ, ಬಾಳಕೃಷ್ಣ, ರಾಮಚಂದ್ರ ಕೊಟ್ಟಲಗಿ, ಮೊದಲಾದ ತರುಣಸಾಹಿತಿಗಳ ವರ್ಗವೂ ಸೇರಿಕೊಂಡು ಸಾಹಿತ್ಯಪ್ರವಾಹಕ್ಕೆ ಹೊಸ ನೀರನ್ನು, ಹೊಸ ಸತ್ವವನ್ನು ಒದಗಿಸುತ್ತಿದ್ದಾರೆ. ಮುಂದಿನ ವರ್ಷ ಗ್ರಂಥಮಾಲೆ ಬೆಳ್ಳಿಯ ಹಬ್ಬವನ್ನು ಆಚರಿಸಲಿದೆ.

ಆ ಪರ್ವಕಾಲದ ನೆನಪಿಗೆಂದು ಸಾವಿರ ಪುಟಗಳ ಒಂದು ಸಾಹಿತ್ಯ ಸಂಪುಟವನ್ನು ಹೊರಡಿಸಬೇಕೆಂದು ಗ್ರಂಥಮಾಲೆಯ ಸಂಕಲ್ಪ. ಗ್ರಂಥಮಾಲೆಯಲ್ಲಿ ಈಗ ಪ್ರಕಟವಾಗಿರುವ ಎಲ್ಲ ಸಾಹಿತ್ಯಪ್ರಕಾರಗಳ ಒಂದೊಂದು ಮಾದರಿ ಅದರಲ್ಲಿ ಬರುವದು ಇನ್ನೊಂದು ಮಹತ್ವದ ವೈಶಿಷ್ಟ್ಯವಾಗಿದೆ. ಒಂದು ಸಂಪೂರ್ಣ ಕಾದಂಬರಿ, ಒಂದು ಮೂರಂಕಿನ ನಾಟಕ, ಒಂದು ಕವನಸಂಗ್ರಹ, ಲಲಿತ ಪ್ರಬಂಧಗಳು, ಪ್ರವಾಸಸಾಹಿತ್ಯ, ಚರಿತ್ರೆ, ಸಣ್ಣಕತೆ, ಏಕಾಂಕ ಮೊದಲಾದ ಎಲ್ಲ ರೂಪಗಳೂ ಅದರಲ್ಲಿ ಸಮಾವೇಶವಾಗುತ್ತವೆ. ಪ್ರತಿಯೊಂದು ಸಾಹಿತ್ಯರೂಪದ ಬಗ್ಗೆಯೂ ವಿವರವಾದ ಪ್ರೌಢವಾದ ಪ್ರಬಂಧ ಪೀಠಿಕೆಯಾಗಿ ಬರುತ್ತದೆ. ಈ ಸಂಪುಟ ಸಿದ್ಧಿಸಾಧನೆಗಳ ಸಂಗ್ರಹವೂ ಹೌದು; ಹೊಸಗನ್ನಡ ಸಾಹಿತ್ಯದ ನಾನಾವಿಲಾಸಗಳ ಇತಿಹಾಸವೂ ಹೌದು; ಗ್ರಂಥಮಾಲೆಯ ಲೇಖಕ ವಾಚಕರ ಮಿಲನಸ್ಥಾನವೂ ಹೌದು.

# ಹೊಸ ಬಿಡಿಮುತ್ತುಗಳು

## ಸಮುದ್ರದಾಚೆ ಜೀವನ: ವಿನಾಯಕ ಕೃಷ್ಣ ಗೋಕಾಕ

ಶ್ರೀ. ವಿನಾಯಕ ಕೃಷ್ಣ ಗೋಕಾಕರ ಹೆಸರು, ಪ್ರತಿಭೆ, ವ್ಯಕ್ತಿತ್ವ, ಸಿದ್ಧಿ, ಇವು ಕನ್ನಡನಾಡಿನ ಹೊಸ ಕಾಲದ ಸಂಸ್ಕೃತಿಯ ಅವಶ್ಯಕವಾದ ಭಾಗಗಳಾಗಿ ಪರಿಣಮಿಸಿವೆ. ನವೋದಯದ ಕಾಲದಲ್ಲಿ ಸಾಹಿತ್ಯ ಬೇಡುತ್ತಿದ್ದ ಹೊಸತನವನ್ನು, ಜ್ಞಾನದೃಷ್ಟಿಯನ್ನು, ವಿಮರ್ಶಕಬುದ್ಧಿಯನ್ನು ಇವರು ಪೂರೈಸಿದರು. ಹೊಸ ಸಾಹಿತ್ಯದ ದಿಗ್ವಿಜಯ ಎಷ್ಟು ದೂರ ಮುಟ್ಟಿದೆಯೆಂಬುದಕ್ಕೆ ಶ್ರೀಯುತರು ಸೀಮಾರೇಖೆಯಾಗಿದ್ದಾರೆ.

ಈ ಕಾದಂಬರಿ ಗೋಕಾಕರ, ಅಲ್ಲ ಕನ್ನಡನಾಡಿನ ಅದ್ಭುತ ಸಿದ್ಧಿಗಳಲ್ಲೊಂದಾಗಿದೆ. ಕನ್ನಡ ಗದ್ಯವಿಕಾಸದ ಮಹತ್ವದ ಬದಲಾವಣೆಗಳೆಲ್ಲ ಇದರಲ್ಲಿ ಕಾಣಸಿಗುವಂತೆಯೇ, ಕಾದಂಬರೀ ರಚನೆಯ ವಿವಿಧ ಸಂಪ್ರದಾಯಗಳ ಅನಿವಾರ್ಯವಾದ ಸಮನ್ವಯವೂ ಇಲ್ಲಿದೆ. ಗೋಕಾಕರ ಸಾಹಿತ್ಯಿಕ ವ್ಯಕ್ತಿತ್ವದೊಂದಿಗೇ ಈ ಕಾದಂಬರಿ ಬೆಳೆದು ಬಂದಿರುವದರಿಂದ, ಅವರ ಸಾಹಿತ್ಯಸೃಷ್ಟಿಯ ಮೇಲೆ ಕೊನೆಯ ನಿರ್ಣಯವನ್ನು ಈ ಕೃತಿಯೇ ಹೇಳುತ್ತದೆ. ಈ ಯುಗದ ಕೆಲವೇ ಮಹಾಕೃತಿಗಳಲ್ಲಿ ಇದೂ ಒಂದಾಗಿದೆ.

## ಬಾಳದೇಗುಲದಲ್ಲಿ : ವಿನಾಯಕ

ಶ್ರೀ. ವಿನಾಯಕರ ಇನ್ನೊಂದು ಕವನಸಂಗ್ರಹ, ಅಥವಾ ಕವನಮಂದಿರವೆಂದರೆ ಹೆಚ್ಚು ಯೋಗ್ಯವಾದೀತು. ಪ್ರತಿಯೊಬ್ಬ ಕವಿಯೂ ಕಲ್ಪನೆಯ ಹುಲ್ಲುಗಾವಲದಲ್ಲಿ ತಿರುಗಾಡಿ ಕೊನೆಗೆ ಬರುವದು ಬಾಳದೇಗುಲಕ್ಕೇ ಎಂಬುದನ್ನು ವಿನಾಯಕರು ಈ ಉದಾಹರಣೆಯಿಂದ ಸ್ಪಷ್ಟಗೊಳಿಸಿದ್ದಾರೆ. 'ಶೆಲ್ಲಿ' ಕವಿ ಹೇಳುವಂತೆ ನಮ್ಮ ಜೀವನ, ಅನಂತತೆಯ ಪ್ರಕಾಶವನ್ನು ಬಣ್ಣಬಣ್ಣವಾಗಿಸುವ ಒಂದು ಕಾಜಿನ ಗುಮ್ಮಟವಾಗಿದೆ. ಬಾಳ ದರ್ಶನ ಅದರೊಳಗಿಂದಲೇ ನಮಗಾಗಬೇಕಾಗಿದೆ. ಜೀವನದ ಸತ್ವ– ಬಾಳದೇವಿ– ಮರೆಗೆ ನಿಂತುಕೊಂಡು ತನ್ನ ವಿವಿಧ ಸೂತ್ರಗಳ ಇಂದ್ರಜಾಲವನ್ನು ಹೇಗೆ ಆಡಿಸುತ್ತಿದೆಯೆಂಬುದರ ಭವ್ಯವಾದ ಚಿತ್ರ ಇಲ್ಲಿದೆ. ಕಲಾವಿದ, ವಿಜ್ಞಾನಿ, ಕರ್ಮಯೋಗಿ, ಪತಿತ, ಸಮಾಜಸೇವಕ,

ಅಸುರ, ಕನಸಿಗ, ಅನುಭಾವಿ, ತಂದೆ, ತಾಯಿ, ಅಣ್ಣತಮ್ಮಂದಿರು, ಹೆಂಡತಿ, ಪ್ರೇಮಿ ಇವರೆಲ್ಲರ ಅನಂತವಾದ ಮೆರವಣಿಗೆ ಬಾಳದೇಗುಲದ ಪ್ರಾಕಾರದಲ್ಲಿ ಬಂದು ಸೇರಿವೆ. ಆದರೇನು? ಬಾಳ್ ಹೊರಗೆ ಬರಳು. ಅವಳ ದರ್ಶನದಲ್ಲಿಯೇ ಮುಕ್ತಿಯ ಮುಂಗುರುತನ್ನು ವಿನಾಯಕರು ಕಾಣುತ್ತಾರೆ. ಆನುಷಂಗಿಕವಾಗಿ ಕನ್ನಡನಾಡಿನ ಜೀವನವೂ ಇಲ್ಲಿ ರೂಪುಗೊಳ್ಳದೆ ಇಲ್ಲ. ಈ ಸಂಗ್ರಹ ಆಧುನಿಕ ಕಾವ್ಯದ ಸಿದ್ಧಿಸಾಧನೆಗಳನ್ನೊಳಗೊಂಡಿದೆ.

## ಕವಿ-ಕಾವ್ಯ-ದೃಷ್ಟಿ : ವಿ. ಸೀತಾರಾಮಯ್ಯ

ವಿ. ಸೀ. ಎಂಬ ಎರಡು ಅಕ್ಷರಗಳ ಹಿಂದೆ ಇರುವ ವ್ಯಕ್ತಿತ್ವ ನಾಡಿಗೇ ಚಿರಪರಿಚಿತವಾಗಿದೆ. 'ಧೀಮತಾಂ ಕಶ್ಚಿದವಿಷಯೋ ನಾಮ' ಎಂಬ ಮಾತು ವಿ. ಸೀ.ಯವರಿಗಲ್ಲದೆ ಇನ್ನಾರಿಗೂ ಯೋಗ್ಯವಾಗದು. 'ಹಣಪ್ರಪಂಚ'ದಿಂದ 'ಕವಿ-ಕಾವ್ಯ-ದೃಷ್ಟಿ'ಯಂಥ ಸೂಕ್ಷ್ಮವಿಷಯದ ವರೆಗೆ ಅವರ ಬುದ್ಧಿಶಕ್ತಿ ನೋಡಬಲ್ಲದು. ಇವರ ಸಾಹಿತ್ಯಿಕ ವ್ಯಕ್ತಿತ್ವದಲ್ಲಿ ತಾತ್ವಿಕನ ವಿಚಾರಸರಣಿಯೊಡನೆ ಕವಿಯ ಅಂತಃಕರಣ, ನಗೆಗಾರನ ಸಂಸ್ಕೃತಿ ಮಿಳಿತವಾಗಿವೆ. ಇವರು ಬರೆದ 'ಪಂಪಾಯಾತ್ರೆ' ಕನ್ನಡ ಗದ್ಯಸೃಷ್ಟಿಯ ವಿಕಾಸದ ಕೊನೆಯ ಹಂತವನ್ನು ಸೂಚಿಸುವ ಅಮೋಘ ಕೃತಿಯಾಗಿದೆ.

'ಕವಿ-ಕಾವ್ಯ-ದೃಷ್ಟಿ' ವಿ. ಸೀ. ಯವರ ವಿಮರ್ಶಾತ್ಮಕ ಪ್ರಬಂಧಗಳ ಸಂಗ್ರಹ, ಹೊಸ ಯುಗದ, ಹೊಸ ಸಾಹಿತ್ಯದ ಲಕ್ಷಣಗ್ರಂಥ. ಸ್ಫೂರ್ತಿ, ಕಲೆಗಾರಿಕೆ, ಕಲೆಯ ಪ್ರಯೋಜನ, ಸಾಹಿತ್ಯರೂಪಗಳು, ಶಬ್ದಸೃಷ್ಟಿ, ಕಲ್ಪನೆ, ಮೊದಲಾದ ಸೂಕ್ಷ್ಮವಿಷಯಗಳ ಮೇಲೆ ನಿಪುಣತೆಯಿಂದ, ಅಧಿಕಾರದಿಂದ ಬರೆದಿದ್ದಾರೆ. ವಿಷಯ ವಿಮರ್ಶೆಯಾದರೂ ಲಲಿತವಾದ, ಹೃದ್ಯವಾದ ಬರವಣಿಗೆಯಿದೆ.

## ಜೀವಫಲ: ಜಡಭರತ

ಜಡಭರತರು ಶ್ರೀ. ಬೇಂದ್ರೆಯವರು ಕಟ್ಟಿದ ಗೆಳೆಯರ ಗುಂಪಿನಲ್ಲಿದ್ದವರು. ಅವರಂತೆಯೇ ಕನಸಿಗರು. ಆ ಗುಂಪು ಒಡೆದು ಹೋದದ್ದರ ಪರಿಣಾಮವಾಗಿ ಉಂಟಾದ ಐತಿಹಾಸಿಕ ಅನರ್ಥಗಳಲ್ಲಿ ಜಡಭರತರು ಮುಂದೆ ಕವಿತೆಗಳನ್ನು

ಬರೆಯದಿದ್ದುದೂ ಒಂದು. ಈ ಶತಮಾನದ ಎರಡನೆಯ ದಶಕದಲ್ಲಿ ಜಡಭರತರು ಬರೆದ ಕವಿತೆಗಳು ಇಲ್ಲಿ ಸಂಗ್ರಹವಾಗಿವೆ. ಜಡಭರತರ ಕಾವ್ಯದಲ್ಲಿ ಕನ್ನಡ ಕಾವ್ಯದ ನವೋದಯದ ಕೆಚ್ಚು ಹುರುಳು ಇವೆ. ತಮ್ಮ ಗೆಳೆಯರಾದ ಮಧುರ ಚೆನ್ನರಂತೆಯೇ ಜಡಭರತರು 'ಶಬ್ದದಾಚೆಯ ನಿಶ್ಶಬ್ದ'ಕ್ಕೆ ಮನಸೋತವರು; ಕನಸಿನ ಸತ್ಯಕ್ಕೆ ಮಾರುವೋದವರು. ಈ ಕವನಗಳಲ್ಲಿ ಅವರು ತಮ್ಮ ಅಂತ ರಂಗದ ಇತಿಹಾಸವನ್ನೇ ನಿರೂಪಿಸಿದ್ದಾರೆ.

**ಸಾಹಿತ್ಯ ಮತ್ತು ಸಮಾಲೋಚನೆ :** ಸದಾನಂದ ನಾಯಕ

"ವಜ್ರಾದಪಿಕಠೋರಾಣಿ ಮೃದೂನಿ ಕುಸುಮಾದಪಿ" ಎಂಬ ಮಾತು ಶ್ರೀ. ಸದಾನಂದರಿಗೆ ಬಹ್ವಂಶದಲ್ಲಿ ಅನ್ವಯಿಸುತ್ತದೆ. ಮರೆಯಲ್ಲಿದ್ದುಕೊಂಡು ಕೆಲಸ ಮಾಡುವ ಪ್ರವೃತ್ತಿ ಅವರದು.

ಈ ಗ್ರಂಥ ಅವರ ದೀರ್ಘ ಅಭ್ಯಾಸದ ಶ್ರಮದ ಫಲವಾಗಿದೆ. ಸಾಹಿತ್ಯೇತಿ ಹಾಸದ ಮೇಲೆ ಹೊಸ ಬೆಳಕು ಕೆಡಹುವಂತಹ ಎಷ್ಟೋ ಐತಿಹಾಸಿಕ ಸತ್ಯಾಂಶ ಗಳನ್ನು ಇದರಲ್ಲಿ ಹೇಳಿದ್ದಾರೆ. ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ಬಹಳ ರೀತಿ ಯಲ್ಲಿ ನೆರವು ಕೊಡುವ ಉಪಯುಕ್ತ ಗ್ರಂಥ.

# ೨೫ ವರ್ಷಗಳಲ್ಲಿ ಪ್ರಕಟವಾದ ಗ್ರಂಥಗಳು

## ಒಂದನೆಯ ವರ್ಷ (೧೯೩೩–೩೪)

*೧. ಸುದರ್ಶನ (ಕಾದಂಬರಿ) .... ಆನಂದಕಂದ
*೨. ಸವಿಲುಗರಿ (ಸಣ್ಣ ಕತೆಗಳು) ... ವಿವಿಧ ಲೇಖಕರು
*೩. ತ್ರಿಪುರದಹನ (ವಿಚಾರಾತ್ಮ ನಾಟಕ) .... ದೊರೆಸ್ವಾಮಿ ಅಯ್ಯಂಗಾರ
*೪. ಬಾಳುರಿ (ಕಾದಂಬರಿ) .... ರಂ. ಶ್ರೀ. ಮುಗಳಿ
*೫. ಬ್ರಾಹ್ಮಣರ ಹುಡಿಗಿ (ಶರತ್ ಕಾದಂಬರಿ) ಆರ್. ವ್ಯಾಸರಾಯ
*೬. ವಿಶ್ವಾಮಿತ್ರನ ಸೃಷ್ಟಿ (ಕಾದಂಬರಿ) .... ಶ್ರೀರಂಗ

## ಎರಡನೆಯ ವರ್ಷ (೧೯೩೪–೩೫)

*೧. ವಿಶ್ವಾಮಿತ್ರನ ಸೃಷ್ಟಿ (ಕಾದಂಬರಿ) .... ಶ್ರೀರಂಗ
*೨. ಜೀವನ (ಸಣ್ಣ ಕತೆಗಳು) .... ಕೃಷ್ಣಕುಮಾರ
*೩. ಕಾಳರಾತ್ರಿ (ಜ್ಞಾನಭಿಕ್ಷುವಿನ ಚರಿತ್ರ) .... ಮಧುರಚೆನ್ನ
೪. ಧರ್ಮಸೆರೆ (ಕಾದಂಬರಿ) .... ಜಡಭರತ
*೫. ರಾಜಯೋಗಿ (ಕಾದಂಬರಿ) .... ಆನಂದಕಂದ
*೬. ಕೋಲ್ಮಿಂಚು (ಏಕಾಂಕಗಳು) .... ವಿವಿಧ ಲೇಖಕರು

## ಮೂರನೆಯ ವರ್ಷ (೧೯೩೫–೩೬)

†೧-೨ ಇಜ್ಜೋಡು (ಕಾದಂಬರಿ) .... ವಿ. ಕೃ. ಗೋಕಾಕ
೩. ಕುರಿಹಿಂಡು (ವ್ಯಂಗ್ಯಚಿತ್ರಗಳು) .... ಜಲಧರ
*೪. ಧೂಮಕೇತು (ಕಾದಂಬರಿ) .... ಕೆ. ಶಂಕರಭಟ್ಟ
*೫. ಧರ್ಮಜ್ಯೋತಿ (ನಾಟಕ) .... ದೊರೆಸ್ವಾಮಿ ಅಯ್ಯಂಗಾರ
*೬. ಸೇವಾಪ್ರದೀಪ (ನಾಟಕ) .... ರಂ. ಶ್ರೀ. ಮುಗಳಿ

## ನಾಲ್ಕನೆಯ ವರ್ಷ (೧೯೩೬–೩೭)

*೧. ದಿಲ್ಲೀಶ್ವರನ ದಿನಚರಿ (ದಿನಚರಿ) .... ನಾ. ಕಸ್ತೂರಿ
*೨. ಪುಷ್ಪಮಾಲೆ (ಸಣ್ಣ ಕತೆಗಳು) .... ಶ್ರೀಸ್ವಾಮಿ

*೩. ಸೋಲೋಗೆಲುವೋ (ನೀಳ್ಗತೆಗಳು) .... ದೇವುಡು
*೪. ಹಳ್ಳಿಯ ಸಮಾಜ (ಶರತ್ ಕಾದಂಬರಿ) .... ಆರ್. ವ್ಯಾಸರಾಯ
*೫. ಪಾವನ ಪಾವಕ (ಸ್ವಪ್ನ ನಾಟಕಗಳು) .... ರಂ. ಶ್ರೀ. ಮುಗಳಿ
*೬. ಸಮುದ್ರದಾಚೆಯಿಂದ (ಪತ್ರಗಳು) .... ವಿ. ಕೃ. ಗೋಕಾಕ

## ಐದನೆಯ ವರ್ಷ (೧೯೩೭-೩೮)

*೧. ಸರಸಮ್ಮನ ಸಮಾಧಿ (ಕಾದಂಬರಿ) .... ಕೋ. ಶಿ. ಕಾರಂತ
*೨-೩. ಎರಡು ಧ್ರುವ (ಕಾದಂಬರಿ) ... ವ್ಹಿ. ಎಂ. ಇನಾಮದಾರ
*೪. ಸಮುದ್ರದಾಚೆಯಿಂದ (ಪತ್ರಗಳು) .... ವಿ. ಕೃ. ಗೋಕಾಕ
*೫. ಹೂಬಾಣಗಳು (ಹಾಸ್ಯಕತೆಗಳು) .... ಪ. ರಮಾನಂದ
*೬. ಮಹಾಪೂರ (ಕಾದಂಬರಿ) .... ಎಸ್. ಜಿ. ಕುಲಕರ್ಣಿ

## ಆರನೆಯವರ್ಷ (೧೯೩೮-೩೯)

*೧. ಸಂಧ್ಯಾರಾಗ (ಕಾದಂಬರಿ) .... ಅ. ನ. ಕೃಷ್ಣರಾಯ
*೨-೩. ಪ್ರೇಮಾಹುತಿ (ಕಾದಂಬರಿ) .... ಗು. ಭೀ. ಜೋಶಿ
*೪. ಜನನಾಯಕ (ನಾಟಕ) .... ವಿ. ಕೃ. ಗೋಕಾಕ
*೫. ಸುಳುವು ಹೊಳವು (ಪ್ರಬಂಧಗಳು) .... ವಿವಿಧ ಲೇಖಕರು
*೬. ಕಾರಣಪುರುಷ (ಕಾದಂಬರಿ) .... ರಂ. ಶ್ರೀ. ಮುಗಳಿ

## ಏಳನೆಯ ವರ್ಷ (೧೯೩೯-೪೦)

*೧. ಹತ್ತುವರ್ಷ (ಆತ್ಮಕತೆ) .... ಜಿ. ಪಿ. ರಾಜರತ್ನಂ
*೨. ತುಟಿ ಮೀರಿದುದು (ಹಾಸ್ಯಕತೆಗಳು) .... ರಾ. ಶಿ.
*೩-೪. ಭಾರತ ಮಾರ್ಗ (ಕಾದಂಬರಿ) .... ಗು. ಭೀ. ಜೋಶಿ
*೫. ಗ್ರಾಮಪಂಚಾನನ (ಕಾದಂಬರಿ) .... ಬಾ. ಕೃ. ಲಕ್ಷ್ಮೇಶ್ವರ
*೬. ಮಾರ್ಗದರ್ಶಕ (ಸಣ್ಣಕತೆಗಳು) .... ಎಂ. ವಿ. ಸೀತಾರಾಮಯ್ಯ

## ಎಂಟನೆಯ ವರ್ಷ(೧೯೪೦-೪೧)

*೧. ಗಾಳಿಗೋಪುರ (ಕಾದಂಬರಿ) .... ನಾ. ಕಸ್ತೂರಿ
*೨-೩. ಮಂಗಳಸೂತ್ರ (ಕಾದಂಬರಿ) .... ಅ. ನ. ಕೃಷ್ಣರಾಯ
*೪. ಬಿಡುಗಡೆಯ ಬೆಲೆ (ಆತ್ಮವೃತ್ತ) .... ಅಶ್ವತ್ಥನಾರಾಯಣ
*೫-೬. ಸೈಯಾರಿ (ಕತೆಗಳು) .... ಗೊರೂರ ರಾಮಸ್ವಾಮಿ

## ಒಂಬತ್ತನೆಯ ವರ್ಷ (೧೯೪೧-೪೨)

*೧-೨-೩-೪. ಮರಳಿ ಮಣ್ಣಿಗೆ (ಕಾದಂಬರಿ) ... ಕೋ. ಶಿ. ಕಾರಂತ

*೫. ಭರಮಪ್ಪನ ಭೂತ (ಕಾದಂಬರಿ) .... ಶ್ರೀರಂಗ

*೬. ಜಯಶ್ರೀ (ನಾಟಕ) .... ಟಿ. ಸದಾಶಿವಯ್ಯ

## ಹತ್ತನೆಯವರ್ಷ (೧೯೪೨-೪೩)

*೧. ಪಚ್ಚೇ ಉಂಗುರ (ಕಾದಂಬರಿ) .... ಎ. ಜಿ. ವೆಂಕಟೇಶಯ್ಯ

*೨. ಮೇಡಂಕ್ಯೂರಿ (ಜೀವನ ಚರಿತ್ರ) .... ಶ್ರೀಮತಿ ಕೆ. ವಿ. ರತ್ನಮ್ಮ

*೩. ಮೋಡಗಳು (ಸಣ್ಣಕತೆಗಳು) .... ಶ್ರೀಸ್ವಾಮಿ

*೪. ತೆನ್ನಾಲಿ ರಾಮಕೃಷ್ಣ (ನಾಟಕ) .... ಸಿ. ಕೆ. ವೆಂಕಟರಾಮಯ್ಯ

*೫-೬. ಬೆಟ್ಟದಜೀವ (ಕಾದಂಬರಿ) .... ಕೋ. ಶಿ. ಕಾರಂತ

## ಹನ್ನೊಂದನೆಯ ವರ್ಷ (೧೯೪೩-೪೪)

*೧. ಹೂವಿನ ಹಾಸಿಗೆ (ಮಕ್ಕಳ ಕತೆಗಳು) .... ಹೊಯ್ಸಳ

*೨. ಕನಸಿನಕೆಳದಿ (ಸಣ್ಣಕತೆಗಳು) .... ರಂ. ಶ್ರೀ. ಮುಗಳಿ

*೩. ಕೆನ್ಸಿಂಗ್‌ಟನ್ ಪಾರ್ಕ (ಕತೆ-ಹರಟೆ-ನಾಟಕ) ಕೆ. ಗೋಪಾಲಕೃಷ್ಣರಾಯ

*೪. ಚಕ್ರದೃಷ್ಟಿ (ಕಾದಂಬರಿ) .... ನಾ. ಕಸ್ತೂರಿ

*೫-೬. ಮಿಂಚಿನ ಹುಡಿ (ಏಕಾಂಕಗಳು) .... ಕೃಷ್ಣಕುಮಾರ

## ಹನ್ನೆರಡನೆಯ ವರ್ಷ (೧೯೪೪-೪೫)

* . ನಕ್ಕೀರತಾಯಿ (ಸಾಹಿತ್ಯದ ಕತೆ) .... ಜಿ. ಪಿ. ರಾಜರತ್ನಂ

*೨. ಮಲಮಗಳು (ಕಾದಂಬರಿ) .... ರಾ. ವೆಂ. ಶ್ರೀನಿವಾಸ

*೩. ನಟಸಾರ್ವಭೌಮ (ಕಾದಂಬರಿ) .... ಅ. ನ. ಕೃಷ್ಣರಾಯ

†೪. ಇಜ್ಜೋಡು (ಕಾದಂಬರಿ) .... ವಿ. ಕೃ. ಗೋಕಾಕ

*೫-೬. ನಿಸರ್ಗ (ಕಾದಂಬರಿ) .... ಮಿರ್ಜಿ ಅಣ್ಣಾರಾಯ

## ಹದಿಮೂರನೆಯ ವರ್ಷ (೧೯೪೫-೪೬)

೧. ಅನಂತ (ಕಾದಂಬರಿ) .... ಸತ್ಯಬೋಧ

*೨-೩. ನಟಸಾರ್ವಭೌಮ (ಕಾದಂಬರಿ) .... ಅ. ನ. ಕೃಷ್ಣರಾಯ

†೪-೫. ಇಜ್ಜೋಡು (ಕಾದಂಬರಿ) .... ವಿ. ಕೃ. ಗೋಕಾಕ

*೬. ಎತ್ತಿದ ಕೈ (ಏಕಾಂಕಗಳು) ... ರಂ. ಶ್ರೀ. ಮುಗಳಿ

## ಹದಿನಾಲ್ಕನೆಯ ವರ್ಷ (೧೯೪೬-೪೭)

*೧-೨. ಭಗ್ನಮಂದಿರ (ಕಾದಂಬರಿ) .... ಹೇಮಂತ
*೩. ದೇವತಾಮನುಷ್ಯ (ಕಾದಂಬರಿ) ... ಕೆ. ಶಂಕರಭಟ್ಟ
*೪. ಯುಗಾಂತರ (ನಾಟಕ) .... ವಿ. ಕೃ. ಗೋಕಾಕ
†೫. ಇಜ್ಜೋಡು (ಕಾದಂಬರಿ) .... ವಿ. ಕೃ. ಗೋಕಾಕ
*೬. ಚಿತ್ರದ ಬೆಳೆ (ನಾಟಕ) .... ಕೋ. ಶಿ. ಕಾರಂತ

## ಹದಿನೈದನೆಯ ವರ್ಷ (೧೯೪೭-೪೮)

*೧-೨-೩-೪-೫. ರಾಷ್ಟ್ರಪುರುಷ (ಕಾದಂಬರಿ) ... ಮಿರ್ಜಿ ಅಣ್ಣಾರಾಯ
†೬. ಇಜ್ಜೋಡು (ಕಾದಂಬರಿ) .... ವಿ. ಕೃ. ಗೋಕಾಕ

## ಹದಿನಾರನೆಯ ವರ್ಷ (೧೯೪೮-೪೯)

*೧-೨. ಅನ್ನ (ಕಾದಂಬರಿ) .... ರಂ. ಶ್ರೀ. ಮುಗಳಿ
*೩. ಪರಿವರ್ತನ (ನಾಟಕ) .... ಲ. ಜಿ. ಬೇಂದ್ರೆ
*೪. ವೇಣುಮಾವ (ನಾಟಕ) .... ಶ್ರೀಮತಿ ಪ. ಸೀತಾದೇವಿ
೫. ಬಹುಮಾನಪಡೆದ ಬರಹಗಳು ... ವಿವಿಧ ಲೇಖಕರು
*೬. ಮುನಿಯನ ಮಾದರಿ (ಕಾದಂಬರಿ) .... ಅಶ್ವತ್ಥ

## ಹದಿನೇಳನೆಯ ವರ್ಷ (೧೯೪೯-೫೦)

೧. ಜಡಭರತನ ಕನಸುಗಳು (ಕನಸುಗಳು) ಜಡಭರತ
*೨. ಗಂಗಾಸಾನಿ (ಕಾದಂಬರಿ) .... ವರಗಿರಿ
೩. ಮಗು (ನಾಟಕ) .... ಅಶ್ವತ್ಥ
೪. ಚೀನದ ಬಾಳು ಬದುಕು (ಕತೆಗಳು) .... ವಿವಿಧ ಲೇಖಕರು
೫. ಮೇದಿನಾಪುರದ ಮಲ್ಲ (ಕಾದಂಬರಿ) .... ಗು. ಭೀ. ಜೋಶಿ
೬. ಮಾಜನ ಮಗಳು (ಕಾದಂಬರಿ) ... ಎಂ. ವಿ ಸೀ

## ಹದಿನೆಂಟನೆಯ ವರ್ಷ (೧೯೫೦-೫೧)

*೧. ಹೊಸ ಸಂಸಾರ (ನಾಟಕ) .... ದ. ರಾ. ಬೇಂದ್ರೆ
೨. ಇಂದ್ರಚಾಪ (ಕಾದಂಬರಿ) .... ರಂಗರಾವ ಕಲ್ಲೇರಕರ

೩. ಆ ಮನಿ (ನಾಟಕ) .... ಕೀರ್ತಿನಾಥ ಕುರ್ತಕೋಟಿ

೪-೫. ದೀಪಹತ್ತಿತು .... ರಾಮಚಂದ್ರ ಕೊಟ್ಟಲಗಿ

೬. ನಾನಿಯ ಕಾದಂಬರಿ (ಕಾದಂಬರಿ) .... ಬಾಳಕೃಷ್ಣ

## ಇಪ್ಪತ್ತುನಾಲ್ಕನೆಯ ವರ್ಷ (೧೯೫೬-೫೭)

೧. ಖೊ (ಕಾದಂಬರಿ) .... ವಿವಿಧ ಲೇಖಕರು

೨-೩-೪. ದಾದಾ (ಕಾದಂಬರಿ) .... ರಾವಬಹದ್ದೂರ

೫-೬. ಮೂಕಬಲಿ (ಕಾದಂಬರಿ) .... ಜಡಭರತ

## ಇಪ್ಪತ್ತೈದನೆಯ ವರ್ಷ ೧೯೫೭-೫೮

೧-೨-೩-೪-೫-೬ ನಡೆದು ಬಂದ ದಾರಿ
ಡೆಮಿ ಆಕಾರದ ಸಾವಿರ ಪುಟದ ಸಂಪುಟ .... ವಿವಿಧ ಲೇಖಕರು

## ಬಿಡಿ ಮುತ್ತುಗಳು

*೧. ಕಣ್ಮರೆಯಾದ ಕನ್ನಡ .... ಶಂ. ಬಾ. ಜೋಶಿ

*೨. ಪಯಣ (ಕವನಗಳು) .... ವಿ. ಕೃ. ಗೊಕಾಕ

೩. ಸಮುದ್ರ ಗೀತಳು (ಕವನಗಳು) .... „

೪. ಬಾಳದೇಗುಲದಲ್ಲಿ (ಕವನಗಳು) .... „

*೫. ತಿರುಪಾಣಿ (ಗೀತನಾಟಕ) ... ಶ್ರೀನಿವಾಸ

*೬. ಬಾಸಿಗ (ಕವನಗಳು) ... ರಂ. ಶ್ರೀ. ಮುಗಳಿ

*೭. ಸಖೀಗೀತ (ಕವನಗಳು) .... ಅಂಬಿಕಾತನಯ ದತ್ತ

*೮. ಗಂಗಾವತರಣ (ಕವನಗಳು) .... „

*೯. ಗರಿ (ಕವನಗಳು) ... „

*೧೦. ನಿರಾಭರಣ ಸುಂದರಿ (ಕತೆ-ಹರಟೆ) ... „

*೧೧. ಸಾಹಿತ್ಯ ಸಂಶೋಧನ .... „

*೧೨. ಸಾಹಿತ್ಯ ಮತ್ತು ವಿಮರ್ಶೆ .... „

೧೩. ಸಮರಸವೇ ಜೀವನ (ಕಾದಂಬರಿ) .... ವಿ. ಕೃ. ಗೋಕಾಕ

೧೪. ಸಂಶೋಧನ ಮತ್ತು ಸಮಾಲೋಚನ.... ಸದಾನಂದ ನಾಯಕ

೧೫. ಜೀವಫಲ (ಕವನಗಳು) ... ಜಡಭರತ

---

* ಈ ಗುರುತಿನ ಗ್ರಂಥಗಳ ನಮ್ಮ ಆವೃತ್ತಿ ಮುಗಿದು ಹೋಗಿವೆ.
† ಸಮರಸವೇ ಜೀವನ ಎಂಬ ಒಂದೇ ಸಂಪುಟದಲ್ಲಿ ದೊರೆಯುತ್ತ

186

ನಾಟ್ಯವಿಲಾಸಿಗಳ ಕೈದೀವಿಗೆ !

# ನಾಟಕ-ರಂಗ-ಪ್ರಯೋಗ

ಯಾವ ನಾಟಕ ಉತ್ತಮ ? ಹೇಗೆ ಆಡಿದರೆ ಉತ್ತಮ ? ಎಲ್ಲಿ, ಯಾವಾಗ ಆಡಿದರೆ ಉತ್ತಮ? ಹೇಗೆ ನೋಡಿದರೆ ಉತ್ತಮ ? ಈ ಪ್ರಶ್ನೆಗಳಿಗೆ ಉತ್ತರ ಬೇಕಾಗಿದ್ದರೆ ಈ ಸಂಪುಟದಲ್ಲಿ ಸಿಕ್ಕುತ್ತದೆ. ನಾಟಕ ಆರಿಸುವದರಿಂದ ಮೊದಲು ಮಾಡಿಕೊಂಡು ರಂಗಭೂಮಿಯ ಮೇಲೆ ಕೊನೆಗೆ ಪ್ರದರ್ಶಿಸುವ ವರೆಗೆ ನಾಟ್ಯವಿಲಾಸಿಗಳಿಗೆ ಬರುವ ಎಲ್ಲ ತೊಂದರೆಗಳಿಗೂ ಇಲ್ಲಿ ಪರಿಹಾರವಿದೆ. ರಂಗಭೂಮಿ ರೇಡಿಯೋ, ಸಿನೇಮಾ ಮೊದಲಾದವುಗಳ ತಂತ್ರಗಳನ್ನು ಹೇಗೆ ಎಷ್ಟು ಬಳಸಿಕೊಳ್ಳಬೇಕು ? ಮತ್ತು ಪ್ರಗತಿಯನ್ನು ಹೇಗೆ ಪಡೆಯಬೇಕು ? ಎಂಬದನ್ನೂ ವಿಚಾರಿಸುವದಲ್ಲದೆ ನಮ್ಮ ರಂಗಭೂಮಿಯ ಪರಂಪರೆಯ ಇತಿಹಾಸವೂ ಇದರಲ್ಲಿದೆ.

ನಾಟಕಕಾರ–ನಾಟಕ, ದಿಗ್ದರ್ಶಕ–ಕಲಾಪಥಕ, ನಟ-ಪ್ರೇಕ್ಷಕ, ವಿಮರ್ಶಕ–ವಿಮರ್ಶೆ ಈ ರೀತಿಯ ಅಷ್ಟಾಂಗ ನಾಟ್ಯ ಸಂವಿಧಾನವೂ ಇವರಲ್ಲಿದೆ.

ಬೇಗನೆ ಹೊರಕ್ಕೆ ಬರುವದು.

ಪುಸ್ತಕವನ್ನು ಕೆ ... ನ್ನ
ಹಿಂದಿರುಗಿಸಬೇಕು ... ಲ್ಕ
ವಿಧಿಸಲಾಗುವುದು.